ಸಾರ್ವಜನಿಕರಿಂದಲೂ—ಪತ್ರಿಕೆಗಳಿಂದಲೂ ಪ್ರಶಂಸಿಸಲ್ಪಟ್ಟ



ಉದಯ ರವರ

# ಭಾಗ್ಯೋದಯ

···ಕನ್ನಡ···

ದಿಗ್ದರ್ಶನ
**P.V. ಬಾಬು**

ಕೃತಿ
**ಪ್ರಭಾಕರ ಶಾಸ್ತ್ರಿ**

PRAKASH RELEASE

ನಿರ್ಮಾಪಕರು: **N.B. ವತ್ಸಲನ್ & A.C. ನರಸಿಂಹಮೂರ್ತಿ ....**

ತಾರಾಗಣ: ಉದಯಕುಮಾರ, ಕೌಶಿಕ, ಬಾಲಕೃಷ್ಣ, ನರಸಿಂಹ ರಾಜು, ಜಾನಕಿ, ಲಲಿತಾ ರಾವ, ಲಕ್ಷ್ಮೀದೇವಿ, ರಮಾದೇವಿ, ಮುಂತಾದವರು.

A PRAKASH RELEASE

# ಕಸ್ತೂರಿ

## ಕನ್ನಡ ಡೈಜೆಸ್ಟ

ಪ್ರತಿತಿಂಗಳ ೧ನೆ ದಿನಾಂಕ ಪ್ರಕಟವಾಗುವದು.

ಮುಖ್ಯ ಸಂಪಾದಕರು :
**ಮೊಹರೆ ಹನುಮಂತರಾಯರು**

ಪ್ರಕಾಶಕರು :
**ಲೋಕಶಿಕ್ಷಣ ಟ್ರಸ್ಟ-ಹುಬ್ಬಳ್ಳಿ**

ಕಚೇರಿ :
**ಸಂಯುಕ್ತ ಕರ್ನಾಟಕ ಕಾರ್ಯಾಲಯ**
**ಹುಬ್ಬಳ್ಳಿ**

ಮುದ್ರಕರು :
**ಸಂಯುಕ್ತ ಕರ್ನಾಟಕ ಮುದ್ರಣಾಲಯ**
**ಹುಬ್ಬಳ್ಳಿ**

ಚಿತ್ರಕಾರರು :
**ಸದಾಶಿವ**
**ಮಾರ್ಶಲ್ ಡಿಸೋಜ**

ಮುಖಪುಟ ಚಿತ್ರ :
**ಕೆ. ಎಸ್. ಪೋತದಾರ**

ಚಂದಾ ದರ :
ವಾರ್ಷಿಕ (ಅಂಚೆಸೇರಿ) ರೂ. ೮-೦-೦
ಬಿಡಿ ಸಂಚಿಕೆ — ರೂ. ೦-೧೨-೦


## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗು ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ **ಲೇಖಗಳ ಸಂಗಡವೇ** ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು; ಆದರೂ ಸಾಮಾನ್ಯವಾಗಿ ಸ್ವೀಕೃತ ಲೇಖಗಳ ಸ್ವೀಕಾರದ ಸುದ್ದಿಯನ್ನು ಲೇಖ ತಲುಪಿದ ನಾಲ್ಕು ವಾರದೊಳಗಾಗಿ ಲೇಖಕರಿಗೆ ತಿಳಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವದೊಳಿತು.

ಲೇಖ ಪ್ರಕಟವಾದರೆ "ಕಸ್ತೂರಿ"ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ "ಕಸ್ತೂರಿ" ಆ ಹಿಂದಣ ತಿಂಗಳ ಕೊನೆಯ ವಾರದೊಳಗೆ ಪ್ರಕಟವಾಗುವುದು. ಅದು ಚಂದಾದಾರರಿಗೆ ಆಯಾ ತಿಂಗಳ ೫ ನೇ ದಿನಾಂಕದೊಳಗೆ ತಲಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

## ನಮ್ಮ ವಾಚಕರಿಗೆ ದೀಪಾವಳಿಯ ಶುಭಾಶಯಗಳು



ಬಾನ ಗಂಗೆ ನೆಲಕಿಳಿದಳೊ,
ಬೆಳಗುತಿಹವು ದೀಪ
ನವವಧುವಿನ ಎದೆಯಾಸೆಯೆ
ಪಡೆದಂತಿದೆ ರೂಪ
ನೆಲವೆ ಗಗನವಾಗುತಿಹುದು
ನಲಿಯೆ ವಿಶ್ವದೇಹ
ಮಣ್ಣು ಹಣತೆ ಹೊನ್ನಾಗಲಿ
ತುಂಬುತಿರಲು ಸ್ನೇಹ.

# ಈ ಸಂಚಿಕೆಯಲ್ಲಿ



# ಓದುಗರ ಪತ್ರಗಳು . . .

'ಕಸ್ತೂರಿ' ನಿಜವಾಗಿ ಚೆನ್ನಾಗಿದೆ. ಇದು ಜನಪ್ರಿಯವಾಗುವುದರಲ್ಲಿ ಸಂಶಯವಿಲ್ಲ. ನಿಮ್ಮ ಸಾಹಸಕ್ಕೆ ಅಭಿವಂದನೆ. ಇದರಿಂದ ಇಂಗ್ಲಿಷ್ ಡೈಜಸ್ಟಿನ ವ್ಯಾಮೋಹ ಕಡಿಮೆಯಾಗಲು ಸಹಾಯವಾಗುತ್ತೆ.

**—ಗೊರೂರು ರಾಮಸ್ವಾಮಯ್ಯಂಗಾರ್**

"ಕಸ್ತೂರಿ" ಯನ್ನು ಕಂಡು ಕೈಗೆತ್ತಿಕೊಂಡೆ, ಪುಟ-ಪುಟಗಳಲ್ಲಿ ನೆಲಸಿದ ಅದರ ಜ್ಞಾನ ಸೌರಭವನ್ನು ಉಂಡೆನು ; ಮನತಣಿಯಿತು.

ಇದು ವರೆಗೆ ಪ್ರಕಟವಾದ ಯಾವ ಕನ್ನಡ ಪತ್ರಿಕೆಯೂ ಕಸ್ತೂರಿಯಷ್ಟು ಘನತೆಯನ್ನು ತನ್ನ ಮೊದಲ ಸಂಚಿಕೆಯಲ್ಲಿಯೇ ಪ್ರದರ್ಶಿಸಿಲ್ಲವೆಂದರೆ ಅತ್ಯುಕ್ತಿಯಾಗಲಾರದು.

ಪತ್ರಿಕೆಯಲ್ಲಿ ಬಳಸಿದ ಕಾಗದ ಇನ್ನೂ ಮೇಲ್ತರಗತಿಯದಿದ್ದರೆ ಚೆನ್ನಾಗಿರುತ್ತಿತ್ತು.

ನಾಡಿನ ಮೂಲೆ ಮೂಲೆಗಳಲ್ಲಿ "ಕಸ್ತೂರಿ" ಪರಿಮಳ ಬೀರಲಿ.

**—ಗೋಪಾಲಕೃಷ್ಣ ಪಿ. ನಾಯಕ, ಅಂಕೋಲಾ**

ನೀವು ಈ ಕನ್ನಡ ಡ್ಯಾಜಸ್ಟ್ ಹೊರತಂದು ಕನ್ನಡ ಜನಕ್ಕೆ ಬಲು ದೊಡ್ಡ ಉಪಕಾರ ಮಾಡಿದ್ದೀರಿ. ದಿನಕ್ಕೊಂದು ಎಂಬಂತೆ ಹೊರಬೀಳುತ್ತಿರುವ ಕನ್ನಡ ಪತ್ರಿಕೆಗಳ ಈ ಕಾಲದಲ್ಲಿ ಇದರ ಕುರಿತು ಅಪವಾದ ಯಾರೊಬ್ಬನೂ ಹೇಳುವಂತಿಲ್ಲ. ಇಂಥದೊಂದು ಪತ್ರಿಕೆ ಅಗತ್ಯ ಬೇಕಾಗಿತ್ತು. ನೀವು ಕೊಟ್ಟುದು ನಮ್ಮ ಪುಣ್ಯ . . . . .

**—ಬೆಳ್ಳೆ ರಾಮಚಂದ್ರರಾವ್, ಪುತ್ತೂರು**

. . . . ಈ ತರದ ಒಂದು ಕನ್ನಡ ಮಾಸಿಕದ ಕೊರತೆ ಕನ್ನಡ ಸಾಹಿತ್ಯಕ್ಕೆ ಅನೇಕ ದಿನಗಳಿಂದಲೂ ಇದ್ದಿತು. ಆ ಕೊರತೆಯನ್ನು ತಾವು ತುಂಬಿದ್ದೀರಿ. ಇಂಗ್ಲಿಷ್ ಸಾಹಿತ್ಯದಲ್ಲಿ "ರೀಡರ್ಸ್ ಡೈಜೆಸ್ಟ್" "ಸಾಯನ್ಸ ಡೈಜೆಸ್ಟ" ಇದ್ದ ಹಾಗೆ ನಮ್ಮ ಕನ್ನಡ ಸಾಹಿತ್ಯಕ್ಕೂ ಒಂದು ಡೈಜೆಸ್ ಸಿಕ್ಕಿತೆಂದು ಹೃದಯ ಹಿಗ್ಗಿತು.

. . . ಜ್ಞಾನ, ವಿಜ್ಞಾನ, ಸಾಹಿತ್ಯಗಳನ್ನು ಓದುಗರಿಗೆ ಒದಗಿಸುವ "ಕಸ್ತೂರಿಯ" ಧ್ಯೇಯವು ಪ್ರಶಂಸಾರ್ಹವಾಗಿದೆ . . .

**—ಶಂಕರ ಬೋಲೆ, ಖಡಕಿ, ಪುಣೆ**

ಕನ್ನಡ ಓದುಗರಿಗೆ "ಕಸ್ತೂರಿ" ಕೊಟ್ಟ ನಿಮಗೆ ನನ್ನ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. . . . "ಕಸ್ತೂರಿ" ಯ ಕಂಪಿನ ಬಗ್ಗೆ ನಾನೇನೂ ಹೇಳಬೇಕಾಗಿಲ್ಲ . . . ನನ್ನ ಬಂಧು-ಓದುಗರ ನಿರಾಶೆ ನಿವಾರಿಸಲು ಪ್ರಥಮ ಸಂಚಿಕೆಯ ಪುನರಾವೃತ್ತಿಯನ್ನೇಕೆ ಹೊರಡಿಸಬಾರದು ? ಇನ್ನೂ ಸಪ್ಟಂಬರ ತಿಂಗಳ ಪ್ರಾರಂಭವಾಗಲು ಎರಡು ದಿವಸ ಇದೆ . . .

**—ಓರ್ವ 'ಓದುಗ' ಶಹಾಪೂರ (ಬೆಳಗಾವಿ)**



ಕಸ್ತೂರಿ

ವರ್ಷ ೧ ನವೆಂಬರ ೧೯೫೬ ಸಂಚಿಕೆ ೩

ಕನ್ನಡಿಗರೆಲ್ಲ ಒಂದಾಗಬೇಕೆಂಬ ಆಕಾಂಕ್ಷೆಯ ಹಿಂದು ಮತ್ತು ಮುಂದು

# ನನಸಾದ ಕನಸು

ರಂಗನಾಥ ದಿವಾಕರ

೧೯೦೫ ರಲ್ಲಿ ಅದು ನಿಜವಾಗಿಯೂ ಒಂದು ಕನಸೇ ಆಗಿತ್ತು. ಆದರೂ ಅದು ವಾಸ್ತವ ಸ್ಥಿತಿಗತಿಗಳಿಂದ ಉದಯಿಸಿದ್ದಾಗಿತ್ತು. ೫೦ ವರ್ಷಗಳ ನಂತರ ಸತ್ಯವಾಗಿ ಪರಿಣಮಿಸುವದೂ ಆಗಿತ್ತು. ಸುಮಾರು ಒಂದೂವರೆ ಕೋಟಿ ಜನ ಕನ್ನಡ ಮಾತನಾಡುವವರು ಹತ್ತೊಂಬತ್ತು ಆಡಳಿತಗಳಲ್ಲಿ ಹಂಚಿಹೋಗಿದ್ದರು. ಅವರು ದಲಿತ ವರ್ಗದವರಂತಾಗಿದ್ದರು; ನೈಚ್ಯ ಭಾವನೆಯಿಂದ ಪೀಡಿತರಾಗಿದ್ದರು. ವಿಶೇಷತಃ ಮುಂಬಯಿ, ಮದ್ರಾಸ ಮತ್ತು ಹೈದರಾಬಾದಗಳಲ್ಲಿ ಈ ಮಾತು ಎದ್ದು ಕಾಣುತ್ತಿತ್ತು.

ಮೊಟ್ಟಮೊದಲಿಗೆ ಜಾಗೃತಿಯುಂಟಾದದ್ದು ಮುಂಬಯಿ ರಾಜ್ಯದ ಕರ್ನಾಟಕ ಪ್ರದೇಶದವರಲ್ಲಿ; ಅಲ್ಲಿಯ ಜನರು ಕೊನೆಯ ವರೆಗೂ ಕರ್ನಾಟಕ ಏಕೀಕರಣ ಚಳವಳಿಯ ಮುಂದಾಳುಗಳಾಗಿ ಉಳಿದರು. ೧೯೦೫-೧೯೦೬ ರಲ್ಲಿ ಸ್ವದೇಶಿ ಚಳವಳಿಯ ಮೂಲಕ ಜನಸಾಮಾನ್ಯರಲ್ಲಿ ಅಪೂರ್ವವಾದ ಜಾಗೃತಿಯುಂಟಾಯಿತು. ಇದರಲ್ಲಿ ರಾಷ್ಟ್ರೀಯತೆಯೂ ಇತ್ತು, ಪ್ರಾದೇಶಿಕತೆಯೂ ಇತ್ತು. ಅದರಿಂದ ಪ್ರೇರಿತವಾಗಿ ಕರ್ನಾಟಕವು ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡಿದಂತೆ ತನಗಾಗಿ ಒಂದೇ ಒಂದು ಆಡಳಿತ ಘಟಕವನ್ನು ಪಡೆಯಲು ಕೂಡ ಹೋರಾಡಿತು.

ಈ ಹೆಗ್ಗುರಿಯು "ಸ್ವತಂತ್ರ ಭಾರತ, ಏಕತಂತ್ರ ಕರ್ನಾಟಕ" ಎಂಬ ಘೋಷಣೆಯಲ್ಲಿ ರೂಪುಗೊಂಡಿತು. ಕರ್ನಾಟಕ ಒಂದಾಗಿ ತನ್ನ ಅಂತಸ್ತನ್ನು ಘನತೆಗೇರಿಸಿಕೊಳ್ಳಬೇಕು, ಮೊದಲಿನಂತೆ ಭಾರತದ ರಾಷ್ಟ್ರೀಯ ಸಾಧನೆಗಳಿಗೆ ತನ್ನ ಸೇವೆಯನ್ನು ಸಲ್ಲಿಸಬೇಕು. ಇದು ಕರ್ನಾಟಕದ ಕನಸಾಗಿತ್ತು.

ಈ ಹೊಸ ಜಾಗೃತಿ ಕರ್ನಾಟಕದ ಜನತೆಯ ವೈಶಿಷ್ಟ್ಯ ಮಾತ್ರವಾಗಿರಲಿಲ್ಲ. ಇದು ಮೊದಲು

ಬಂಗಾಲದಲ್ಲಿ ಪ್ರಾರಂಭವಾಗಿ ಬಳಿಕ ದೇಶಾದ್ಯಂತ ಹಬ್ಬಿದ ರಾಷ್ಟ್ರೀಯ ಜಾಗೃತಿಯ ತೆರೆಯಾಗಿತ್ತು. ರಾಜಕೀಯ ಪರಾಧೀನತೆ, ಆರ್ಥಿಕ ಶೋಷಣೆ ಮತ್ತು ಮೋಸದಿಂದ ಸಾಂಸ್ಕೃತಿಕ ರಂಗದಲ್ಲಿ ವಿಜಯ ಇವುಗಳ ರೂಪದಲ್ಲಿ ಪಾಶ್ಚಾತ್ಯ ಜಗತ್ತು ಕೊಟ್ಟ ಆಹ್ವಾನದ ಪರಿಣಾಮವಾಗಿತ್ತದು.

ರಾಜಕೀಯ ಸ್ವಾತಂತ್ರ್ಯಕ್ಕೆ ಪ್ರಾಮುಖ್ಯವಿದ್ದರೂ ಈ ರಾಷ್ಟ್ರೀಯ ಜಾಗೃತಿ ವ್ಯಾಪಕವಾಗಿತ್ತು. ಪ್ರತಿಯೊಂದು ಪ್ರಾಂತ ಅಥವಾ ಪ್ರದೇಶವು ರಾಷ್ಟ್ರೀಯ ಚಳವಳಿಯಲ್ಲಿ ಭಾಗವಹಿಸಿತು. ಅದರಂತೆ,ಅದರೊಡನೆಯೆ ಪ್ರಾದೇಶಿಕ ಜಾಗೃತಿಯೂ ಮೊದಲು ಭಾಷಾಪ್ರಜ್ಞೆಯ ರೂಪದಲ್ಲಿ, ನಂತರ ತನ್ನ ಇತಿಹಾಸ ಮತ್ತು ಭವಿತವ್ಯದ ಚಿಂತನೆಯ ರೂಪದಲ್ಲಿ ಪ್ರಕಟವಾಗತೊಡಗಿತು. ಈ ಪ್ರಾದೇಶಿಕ ಜಾಗೃತಿ ರಾಷ್ಟ್ರೀಯ ಜಾಗೃತಿಯೊಂದಿಗೇ ಬೆಳೆದುಬಂತು. ಕರ್ನಾಟಕದಲ್ಲಿ ಅಂದರೆ ಕನ್ನಡ ಮಾತನಾಡುವ ಜನರು ಅಧಿಕವಾಗಿರುವಲ್ಲಿ ಆತ್ಮಜಾಗೃತಿಯ ಮೊದಲನೆಯ ತೆರೆಯೊಂದಿಗೆ ಆತ್ಮನಿರೀಕ್ಷಣೆಯೂ ಪ್ರಾರಂಭವಾಯಿತು.

"ಕನ್ನಡವು ನಾಗರಿಕ ಭಾಷೆಯೆ? ಅದಕ್ಕೇನಾದರೂ ಸಾಹಿತ್ಯವಿದೆಯೆ? ಕರ್ನಾಟಕ ಎಲ್ಲಿದೆ?" ಎಂಬಿವೇ ಮುಂತಾದ ಪ್ರಶ್ನೆಗಳು ಕನ್ನಡಿಗರಿಗೆ ಆಗಾಗ ಕೇಳಲ್ಪಡುತ್ತಿದ್ದವು. ಇದರಿಂದ ಜನರ ಭಾವನೆ ಕೆರಳಿ, ತಮ್ಮ ಮತ್ತು ತಮ್ಮ ಕರ್ನಾಟಕದ ಬಗ್ಗೆ ಇತರರಲ್ಲಿ ಸಾಕಷ್ಟು ಗೌರವಾದರಗಳು ಹುಟ್ಟುವಂತಾಗಲೆಂದು, ತಮ್ಮಲ್ಲಿ ಆತ್ಮಗೌರವ, ಆತ್ಮವಿಶ್ವಾಸಗಳುಂಟಾಗಲೆಂದು ಅವರು ತಮ್ಮ ಗತೇತಿಹಾಸದ ಶೋಧದಲ್ಲಿ ತೊಡಗುವಂತಾಯಿತು. ಧಾರವಾಡದ ಶ್ರೀ ಆಲೂರು ವೆಂಕಟರಾಯರು ಬರೆದ "ಕರ್ನಾಟಕದ ಗತವೈಭವ"ವೆಂಬ ಚಿಕ್ಕ ಪುಸ್ತಕವು ಆ ಅಗತ್ಯವನ್ನು ಪೂರೈಸಿಕೊಟ್ಟು ತರುಣ ಪೀಳಿಗೆಗೆ ಸ್ಫೂರ್ತಿಯನ್ನಿತ್ತಿತು.

ತಮ್ಮ ಗತ ಇತಿಹಾಸದಲ್ಲಿ ಹೆಮ್ಮೆಪಟ್ಟುಕೊಳ್ಳಲು ಸಾಕಷ್ಟು ವಿಷಯಗಳಿವೆ ಎಂಬುದನ್ನು ಕನ್ನಡಿಗರು ಕಂಡುಕೊಂಡರು. ಎಲ್ಲ ವಿಷಯಗಳ ಮೇಲೂ ಕ್ರಿ. ಶ. ಮೂರನೆಯ ಶತಮಾನದಿಂದ ಕನ್ನಡದಲ್ಲಿ ಗ್ರಂಥಗಳು ಹುಟ್ಟಿದ್ದವೆಂದು ಗೊತ್ತಾಯಿತು.

೪ನೆಯ ಶತಮಾನದ ಕದಂಬರಿಂದ ಹಿಡಿದು ೧೬ನೆಯ ಶತಮಾನದ ರಾಯರ ವರೆಗೆ ಕರ್ನಾಟಕ ಮತ್ತು ಅದರ ಗಡಿ ಪ್ರದೇಶಗಳಲ್ಲಿ ಪ್ರಭುತ್ವ ನಡೆಸಿದ ಪ್ರಬಲ ರಾಜವಂಶಗಳಿದ್ದವು.

ಕರ್ನಾಟಕವು ಜೈನ, ವೈಷ್ಣವ, ಶೈವ, ವೀರಶೈವ ಮೊದಲಾದ ಧರ್ಮಗಳ ನೆಲೆವೀಡಾಗಿತ್ತು. ಶಂಕರ, ರಾಮಾನುಜ, ಮಧ್ವಾಚಾರ್ಯರಂಥ ವೇದಾಂತಿಗಳ ಬೀಡಾಗಿತ್ತು.

೭ ನೆಯ ಶತಮಾನದ ಬಾದಾಮಿಯ ಗವಿಗಳು, ಐಹೊಳೆ ಮತ್ತು ಪಟ್ಟದಕಲ್ಲ ದೇವಾಲಯಗಳು, ೧೬ ನೆಯ ಶತಮಾನದ ವಿಜಯನಗರದ ಗುಡಿಗಳೇ ಮುಂತಾದ ಪ್ರಸಿದ್ಧ ಕಲಾಸ್ಮಾರಕಗಳು ಗತವೈಭವದ ಸಾಕ್ಷಿಗಳಾಗಿದ್ದವು.

ಮತ್ತೆ ೧೮೫೭ ರ ಸ್ವಾತಂತ್ರ್ಯ ಸಂಗ್ರಾಮ ಮತ್ತು ನಂತರದ ಕಾಲದಲ್ಲಿ ನರಗುಂದದ ಬಾಬಾ ಸಾಹೇಬ, ಕಿತ್ತೂರಿನ ಚನ್ನಮ್ಮ, ಸುರಪುರದ ಬೇಡರೇ ಮೊದಲಾದ ಕನ್ನಡ ವೀರರು ಕನ್ನಡಿಗರ ಶೌರ್ಯ—ಧೈರ್ಯ—ದೇಶಪ್ರೇಮಗಳ ಮಾದರಿಯಾಗಿ ಮಿಂಚಿದ್ದಾರೆ.

ಗತಕಾಲದ ಈ ವೈಭವವು ಆ ಕಾಲದ ಹೀನ ಸ್ಥಿತಿಯಲ್ಲಿ ಒಂದು ಮಹಾಸ್ಫೂರ್ತಿಯಾಗಿ ಏಕಘಟಕ ಕರ್ನಾಟಕದ ಹೆಗ್ಗುರಿಯನ್ನು ಮೂಡಿಸಿತು.

ಪ್ರಾರಂಭದಲ್ಲಿ ಸಾಹಿತ್ಯರಂಗದಲ್ಲಿ ಭಾಷೆಯ ಐಕ್ಯವೇ ಗುರಿಯಾಗಿತ್ತು. ನಂತರ ಕನ್ನಡ ಭಾಷೆಯಲ್ಲಿ ರಾಜಕೀಯ ಚಳವಳಿಯ ಪ್ರಚಾರ ಮಾಡಲೆಂದು ಕರ್ನಾಟಕ ಗುಂಪೊಂದನ್ನು ಕಟ್ಟುವ ಪ್ರಯತ್ನ ನಡೆಯಿತು. ಅದಕ್ಕೂ ಮುಂದಿನ ಹೆಜ್ಜೆ ಬ್ರಿಟಿಶ್ ಕರ್ನಾಟಕ ಭಾಗಗಳನ್ನು ಒಂದುಗೂಡಿಸಿ ಕರ್ನಾಟಕ ಪ್ರಾಂತ ರಚನೆಯ ಬೇಡಿಕೆಯಾಯಿತು. ಆದರೆ ೧೯೪೯ರಲ್ಲಿ ಮೊಟ್ಟಮೊದಲನೆಯ ಬಾರಿ ಕರ್ನಾಟಕದ ಎಲ್ಲ ಭಾಗಗಳೂ ದೇಶೀ ಸಂಸ್ಥಾನಗಳಲ್ಲಿಯ ಕನ್ನಡ ಪ್ರದೇಶ

ಗಳೂ ಸೇರಿ ಒಂದೇ ಒಂದು ಆಡಳಿತ ಘಟಕವಾಗಬೇಕೆಂದು ಪ್ರತಿಪಾದನೆ ಮಾಡಲಾಯಿತು. ಕರ್ನಾಟಕ ರಾಜ್ಯದ ಈ ಕಡೆಯ ಕಲ್ಪನೆಯೆ ಇಂದು ಪೂರ್ತಿಗೊಳ್ಳುತ್ತಿದೆ.

ಕರ್ನಾಟಕ ಏಕೀಕರಣ ಚಳವಳಿಯ ಮುಖ್ಯ ಘಟ್ಟಗಳನ್ನು ಈ ರೀತಿ ಹೇಳಬಹುದು:

೧೯೧೫-೧೬—ಭಾಷೆ ಮತ್ತು ಸಾಹಿತ್ಯಗಳ ಏಕೀಕರಣದ ದೃಷ್ಟಿಯಿಂದ ಎರಡು ಸಾಹಿತ್ಯ ಸಂಸ್ಥೆಗಳ ರಚನೆ

೧೯೧೬— ರಲ್ಲಿ ಕರ್ನಾಟಕದ ರಾಜಕೀಯ ಏಕೀಕರಣಕ್ಕಾಗಿ ಧಾರವಾಡದಲ್ಲಿ ಕರ್ನಾಟಕ ಸಭೆಯ ಪ್ರಾರಂಭ.

೧೯೨೦— ಬ್ರಿಟಿಶ ಕರ್ನಾಟಕ ಭಾಗಗಳ ಏಕೀಕರಣದ ಬೇಡಿಕೆ.

೧೯೨೧— ಸಂಸ್ಥಾನ ಪ್ರದೇಶಗಳನ್ನೊಳಗೊಂಡು ಇಡೀ ಕರ್ನಾಟಕ ಪ್ರದೇಶಕ್ಕಾಗಿ ಒಂದು ಪ್ರಾಂತ ಕಾಂಗ್ರೆಸದ ರಚನೆ.

೧೯೨೪—ಏಕೀಕರಣ ವಿಚಾರಕ್ಕೆ ಒಪ್ಪುವ ಕಾಂಗ್ರೆಸ್ಸೇತರರು ಮತ್ತು ಕಾಂಗ್ರೆಸ್ಸಿಗರನ್ನೊಳಗೊಂಡ ಕರ್ನಾಟಕ ಏಕೀಕರಣ ಸಂಘದ ಸ್ಥಾಪನೆ.

೧೯೨೫— ಕರ್ನಾಟಕ ಪ್ರಾಂತ ಕಾಂಗ್ರೆಸ ಸಮಿತಿಯು ಕರ್ನಾಟಕ ಏಕೀಕರಣವನ್ನು ತನ್ನ ಮುಖ್ಯ ಉದ್ದೇಶಗಳಲ್ಲಿ ಒಂದನ್ನಾಗಿ ಮಾಡಿಕೊಂಡು ನಂತರ ಅದಕ್ಕಾಗಿ ದುಡಿಯಲು ತೊಡಗಿತು.

೧೯೨೮— ಕರ್ನಾಟಕ ಪ್ರಾಂತ ಕಾಂಗ್ರೆಸ ಸಮಿತಿ ಮತ್ತು ಕರ್ನಾಟಕ ಏಕೀಕರಣ ಸಂಘಗಳು ತಮ್ಮ ಅಭಿಪ್ರಾಯವನ್ನು ನೆಹರು ಸಮಿತಿಯ ಎದುರಿಗಿಟ್ಟು ಬ್ರಿಟಿಶ್ ಪ್ರಭುತ್ವದಲ್ಲಿದ್ದ ಕರ್ನಾಟಕ ಭಾಗಗಳನ್ನು ಒಂದೇ ಆಡಳಿತ ಘಟಕವನ್ನಾಗಿ ಮಾಡಬೇಕೆಂಬ ವಿಚಾರವನ್ನು ಅವರಿಗೆ ಮನದಟ್ಟು ಮಾಡಿಕೊಡುವಲ್ಲಿ ಯಶಸ್ವಿಯಾದವು

೧೯೩೭— ಕಾಂಗ್ರೆಸ ಕಾರ್ಯ ಸಮಿತಿಯು ಆಂಧ್ರ ಮತ್ತು ಕರ್ನಾಟಕಗಳನ್ನು ಭಾಷಾವಾರ ರಾಜ್ಯಗಳನ್ನಾಗಿ ಮಾಡಬಹುದೆಂಬ ತತ್ವವನ್ನು ಮನ್ನಿಸಿತು. ಆದರೆ ರಾಷ್ಟ್ರದ ಮುಖ್ಯ ಹೋರಾಟವಾದ ಸ್ವಾತಂತ್ರ್ಯ ಹೋರಾಟಕ್ಕೆ ವ್ಯತ್ಯಯವುಂಟಾಗುವ ಸಂಭವವಿರುವದರಿಂದ ಈ ರಾಜ ರಚನೆಗಾಗಿ ಯಾವ ಚಳವಳಿಯನ್ನೂ ನಡೆಸಕೂಡದೆಂಬ ಕರಾರನ್ನು ಹಾಕಿತು.

೧೯೪೫— ಕಾಂಗ್ರೆಸ ಚುನಾವಣೆಯ ಘೋಷಣಾ ಪತ್ರಿಕೆಯಲ್ಲಿ ಭಾಷಾವಾರು ರಾಜ್ಯ ಬೇಡಿಕೆ ನ್ಯಾಯವಾದದ್ದು, ಕಾಂಗ್ರೆಸ್ಸು ಅದಕ್ಕಾಗಿ ಕಾರ್ಯಮಾಡುವದು ಎಂದು ಸ್ಪಷ್ಟವಾಗಿ ಹೇಳಲಾಯಿತು. ನಂತರ ಬಂದ ಜೆ. ವಿ. ಪಿ. ವರದಿ, ದರ್ ಸಮಿತಿ, ಎಸ್. ಆರ್. ಸಿ., ಗಳ ವಿಚಾರ ಇತ್ತೀಚಿನವಾಗಿದ್ದು ಸಕಲರಿಗೂ ಪರಿಚಿತವಾಗಿದೆ.

ಭಾಷಾವಾರು ರಾಜ್ಯ ಬೇಡಿಕೆ ನ್ಯಾಯವಾಗಿದ್ದು ಕಾಂಗ್ರೆಸ್ಸು ಕೂಡ ಅದನ್ನು ಒಪ್ಪಿದರೂ ಕೆಲವೊಂದು ಅನಿಷ್ಟಕಾರಕ ಪ್ರವೃತ್ತಿಗಳು ತಲೆದೋರತೊಡಗಿದವೆಂಬುದನ್ನು ಮರೆಯಲಾಗದು. ಇವು ಖಂಡಿತವಾಗಿಯೂ ಅಂತರ್‌ರಾಜ್ಯ ಶಾಂತಿ-ಸಹಕಾರಗಳಿಗೂ ರಾಷ್ಟ್ರದ ಐಕ್ಯಕ್ಕೂ ಗಂಡಾಂತರಕಾರಿಯಾಗಿವೆ. ಕೆಲ ಪ್ರಸಂಗಗಳಲ್ಲಿ ಭಾಷಾ ಪ್ರೇಮವು-ಮತ್ತೊಂದು ಭಾಷೆಯ ಬಗ್ಗೆ ಅಸಹನೆ, ದ್ವೇಷ ಮತ್ತು ಹಿಂಸೆಗಳಲ್ಲಿ ವ್ಯಕ್ತವಾಗಿ ಕೆಳಮಟ್ಟಕ್ಕಿಳಿದದ್ದು ದುರ್ದೈವದ ಮಾತಾಗಿದೆ. ಭಾಷಾವಾರು ರಾಜ್ಯಗಳಿಂದಾಗುವ ಲಾಭಗಳ ವಿಷಯದಲ್ಲಿ ಅಖಿಲ ಭಾರತ ಧುರೀಣರಲ್ಲಿ ಸಂಶಯ ತಲೆದೋರಲು ಈ ಲಕ್ಷಣಗಳೇ ಕಾರಣವಾದವೆನ್ನಬಹುದು ಈ ಮೊದಲೇ ಬಗೆಹರಿಯಬೇಕಾಗಿದ್ದ ಈ ಪ್ರಶ್ನೆಯು ಪರಿಹಾರವಾಗಲು ವಿಲಂಬವಾದದ್ದಕ್ಕೆ ಈ ಅನಿಷ್ಟ ಪ್ರವೃತ್ತಿಗಳೆ ಹೊಣೆಯಾದವೆಂಬುದರಲ್ಲಿ ಸಂದೇಹಕ್ಕವಕಾಶವಿಲ್ಲ.

ಕರ್ನಾಟಕದ ವಿಚಾರದಲ್ಲಿ, ಕನಸು ನನಸಾಗಿದೆ. ಕೊನೆಯ ಪರಿಣಾಮದಲ್ಲಿ ಅದು ಅಸಮಾಧಾನಗೊಳ್ಳಲೆಡೆಗೊಡುವ ಅಂಶ ತೀರ ಕಡಿಮೆಯಾಗಿದೆ. ಕೊನೆಯ ದಿನಗಳಲ್ಲಿ ಮೈಸೂರಿನ ಪ್ರಬಲ ಗುಂಪೊಂದು ಮೈಸೂರಿಗರಿಗಾಗಿ ಮೈಸೂರು ಎಂಬ ಘೋಷಣೆ ಮಾಡತೊಡಗಿದ್ದ

ರಿಂದ ತುಸು ವಿವಂಚನೆಯುಂಟಾಯಿತು. ಬಳ್ಳಾರಿಯ ಆರು ತಾಲೂಕುಗಳನ್ನು ಎಸ್. ಆರ್. ಸಿ. ಯು ನೂತನ ಆಂಧ್ರ ಪ್ರಾಂತಕ್ಕೆ ಜೋಡಿಸಿದ್ದು ವಿವಂಚನೆಗೆ ಇನ್ನೊಂದು ಕಾರಣವಾಗಿತ್ತು. ಆದರೆ ಕೊನೆಗೆ ಸತ್ಯಕ್ಕೇ ಜಯವಾಗಿದೆ.

ಭಾಷಾವಾರು ರಾಜ್ಯಗಳ ಅರ್ಥವು ಒಂದು ಭಾಷೆಯ ಜನರು ಇನ್ನೊಂದು ಭಾಷೆಯ ನೆರೆ ರಾಜ್ಯದಲ್ಲಿರಬಾರದು, ಇರಲಾರರು ಎಂದು ಸರ್ವಥಾ ಅಲ್ಲ. ವ್ಯಕ್ತಿಗಳ ಮತ್ತು ಗುಂಪುಗಳ ಭಾಷಾ ಮತ್ತು ಸಾಂಸ್ಕೃತಿಕ ಹಕ್ಕುಗಳ ಸಂರಕ್ಷಣೆಯಾಗುವದೇ ಮುಖ್ಯವಾದುದು. ಭಾಷೆಯು ಐಕ್ಯದ ಶಕ್ತಿಯಾಗಬೇಕಲ್ಲದೆ ಭಾರತದ ಭಾವನಾತ್ಮಕ ಒಕ್ಕಟ್ಟನ್ನು ಒಡೆಯುವ ಶಕ್ತಿಯಾಗಬಾರದು. ಅದು ಜಾತಿ, ಮತ ಪಂಥಗಳ ಅಸಹನೆಯಷ್ಟೇ ಅನಿಷ್ಟವಾದ ಭಾಷಾದ್ವೇಷ ಮತ್ತು ಅಸಹನೆಗಳಿಗೆ ಕಾರಣವಾಗಕೂಡದು.

೧೯೫೬, ನವಂಬರ ೧ ರಿಂದ ಕರ್ನಾಟಕವು ಒಂದೇ ಆಡಳಿತ ಘಟಕ ಎಂಬುದು ಸತ್ಯ ಸಂಗತಿ. ಇಲ್ಲಿಗೆ ಎಲ್ಲ ಮುಗಿದಂತಾಯಿತು ಎಂದು ಯಾರಾದರೂ ಭ್ರಮೆಗೊಂಡಿದ್ದರೆ ಅವರನ್ನು ಎಚ್ಚರಿಸುವದು ಒಳಿತು. ನಮ್ಮ ಮುಂದಿರುವ ಕಷ್ಟವಿಪತ್ತುಗಳನ್ನು ತಡೆದುಕೊಳ್ಳಬಲ್ಲ ಶಕ್ತಿ ಹೃದಯಗಳ ಐಕ್ಯವೇ ಆಗಿದೆ. ಒಕ್ಕಟ್ಟಿನಲ್ಲಿಯೆ ಕರ್ನಾಟಕದ ಪ್ರತಿಯೊಂದು ಪ್ರದೇಶದ ಹಿತವಡಗಿದೆ ಎಂದು ಹೆಚ್ಚೆಚ್ಚು ಜನ ತಿಳಿದುಕೊಂಡಷ್ಟೂ ಯಶಸ್ಸಿನ ಸಂಭವ ಹೆಚ್ಚಾಗುವದು. ಭಾರತದ ಸ್ವಾತಂತ್ರ್ಯ ಮತ್ತು ಕರ್ನಾಟಕದ ಏಕೀಕರಣಕ್ಕಾಗಿ ದುಡಿದವರಿಗೆ, ಈ ಸ್ವಪ್ನ ಸತ್ಯವಾದುದನ್ನು ನೋಡುವ ಅವಕಾಶ ದೊರೆತದ್ದು, ಕರ್ನಾಟಕದ ಹಿತಕ್ಕಾಗಿ ಮಾತ್ರವಲ್ಲ, ಭಾರತದ ಅಭಿವೃದ್ಧಿಗಾಗಿ ಪ್ರಯತ್ನ ಮಾಡಲು ಒಂದು ಸುಸಂಧಿಯಾಗಿದೆ. ಅವರ ಮುಂದಿನ ಪ್ರಯತ್ನಗಳಿಗೆ ಇದೊಂದು ತಳಹದಿಯಾಗಿದೆ.

ನನಸಾದ ಈ ಕನಸು "ಕರ್ನಾಟಕವು ಎಲ್ಲರದು" ಎಂಬ ಇನ್ನೊಂದು ದೊಡ್ಡ ಕನಸಿಗೆ ಅವಕಾಶ ಮಾಡಿಕೊಡಲಿ; ವಿಜಯನಗರ ಮತ್ತು ಮೈಸೂರು ಕರ್ನಾಟಕ ಸಿಂಹಾಸನಾಧೀಶ್ವರರ ಪರಂಪರೆಯ ಧ್ಯೇಯವಾದ "ಸತ್ಯಮೇವೋದ್ಧರಾಮ್ಯಹಂ" ತತ್ವವನ್ನು ಎತ್ತಿಹಿಡಿಯಲು ಸ್ಫೂರ್ತಿಯನ್ನೀಯಲಿ.



## ನಿರೀಕ್ಷಣೆಯ ನೆರವು

ಅನುಭವವು ಮನುಷ್ಯನಿಗೆ ಒಳ್ಳೇ ಮಾರ್ಗದರ್ಶಕವಲ್ಲ. ಅದನ್ನು ಅನುಸರಿಸುವವರೂ ಕಡಿಮೆ. ಅದರ ಸೀಮೆ ಸಂಕುಚಿತವಾಗಿರುವುದರಿಂದ ಅದರಿಂದ ಹೆಚ್ಚು ಕಲಿಯಲಾಗುವುದಿಲ್ಲ. ಮನುಷ್ಯನಿಗೆ ನಿಜವಾಗಿ ಪಾಠ ಕಲಿಸುವುದು ಅನುಭವವಲ್ಲ, ನಿರೀಕ್ಷಣೆ. ಇತರ ಜನರ ಅನುಭವದ ವಿಶಾಲ ಸಂಪತ್ತನ್ನು ಉಪಯೋಗಿಸಿಕೊಳ್ಳಲು ನಿರೀಕ್ಷಣೆಯೇ ನೆರವಾಗುತ್ತದೆ. ತನ್ನ ಅನುಭವವನ್ನಷ್ಟೇ ನಂಬಿ ಕುಳಿತರೆ ಅವನು ಅನಂತ ಕಾಲದವರೆಗೆ ಅಸಮಗ್ರ ಸಾಮಗ್ರಿಯೊಡನೆ ತೊಳಲಾಡುವನು.

— ಎಚ್. ಎಲ್. ಮೆಂಕೆನ್



ನವಮೈಸೂರಿನ
ಪ್ರಥಮ ಮುಖ್ಯಮಂತ್ರಿ—

# ಶ್ರೀ ಸಿದ್ದವನಹಳ್ಳಿ ನಿಜಲಿಂಗಪ್ಪ

ಸದಾ ತೆರೆದ ಬಾಯಿಂದ ನಗುತ್ತಿರುವ ನಿಜಲಿಂಗಪ್ಪನವರ ನಗೆಯೇ ಅವರ ವ್ಯಕ್ತಿತ್ವಕ್ಕೆ ಸರಿಯಾದ ಕನ್ನಡಿ; ಆ ನಗೆ ಮಂದಸ್ಮಿತವಲ್ಲ, ಸಂಜೆಯ ನಗೆಯೂ ಅಲ್ಲ; ಉಪಹಾಸದ ಛಾಯೆಯೂ ಅವರಲ್ಲಿ ಕಂಡುಬರುವದಿಲ್ಲ. ಮಧ್ಯಮ ನಿಲುವಿನ ಗೌರವರ್ಣದ ಪುಷ್ಟದೇಹದ ನಿಜಲಿಂಗಪ್ಪನವರ ನಗೆಯಲ್ಲಿ ಸರಳತೆಯಿರುವುದೇ ಅವರ ವ್ಯಕ್ತಿತ್ವದ ಆಕರ್ಷಣೆಯ ಗುಟ್ಟು.

೫೪ ವಯಸ್ಸಿನ, ನವಮೈಸೂರಿನ ಅಥವಾ ಅಖಂಡ ಕರ್ನಾಟಕದ ಮುಖ್ಯಮಂತ್ರಿ ಸಿದ್ದವನಹಳ್ಳಿ ನಿಜಲಿಂಗಪ್ಪನವರ ಕೂದಲು ಕರ್ನಾಟಕದ ಹೋರಾಟದಲ್ಲಿ ಹಣ್ಣಾಗಿದೆ, ಅಲ್ಪಸ್ವಲ್ಪ ಉದುರಿಯೂ ಹೋಗಿದೆ. ಏಕೀಕರಣದ ವಿಷಯದಲ್ಲಿ ಅರೆಮನಸಿನ ಮೈಸೂರಿನ ಮನಸನ್ನು ತಿರುಗಿಸಲು ಮೈಸೂರವರಾಗಿಯೇ ಬೆಳೆದ ನಿಜಲಿಂಗಪ್ಪನವರ ಪ್ರಭಾವವೂ ಕಾರಣವಾಯಿತು.

ನಿಜಲಿಂಗಪ್ಪನವರ ಸುತ್ತ ಈಚೆಗೆ ರಾಜಕೀಯ ವಾದವಿವಾದಗಳು ಹೆಣೆದು ಬಂದಿದ್ದರೂ ಅವರು ಇಂದಿಗೂ ತಮ್ಮ ಸೌಮ್ಯ ಸ್ವಭಾವವನ್ನು ಉಳಿಸಿಕೊಂಡು ಬಂದಿದ್ದಾರೆ. ಅವರನ್ನು ಎರಡು ಕೋಟಿ ಕನ್ನಡಿಗರ ಪ್ರತಿನಿಧಿಗಳು ಒಮ್ಮತದಿಂದ ಆರಿಸಿಕೊಂಡಿದ್ದಾರೆಂಬುದು ಅವರ ಈ ಸೌಮ್ಯಭಾವದ ಒಂದು ಸಿದ್ಧಿಯೇ ಸೈ. ನಿಜಲಿಂಗಪ್ಪನವರು ತಮ್ಮ ಸ್ವಂತದ ಸಮರ್ಥನೆಗಾಗಿ ಕೂಡ ಕಟುತರ ವಾದವಿವಾದಗಳಲ್ಲಿ ಪ್ರವೇಶಿಸಲಿಲ್ಲೆಂಬುದನ್ನು ಅವರ ಶತ್ರುಗಳೂ ಗಮನಿಸಿರಬೇಕು, ಪಕ್ಷಪಾತಿಗಳು ಇನ್ನಾದರೂ ಗಮನಿಸಬೇಕು.

ಅವರ ಶಾಂತ-ಸರಳತೆಯೇ ಅವರನ್ನು ೧೯೪೬ರಲ್ಲಿ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷ ಪಟ್ಟಕ್ಕೆ ಏರಿಸಿತು. ಅಂದು ಕರ್ನಾಟಕ ಕಾಂಗ್ರೆಸ್ಸು ಅಂತರ್ದ್ವಂದ್ವಗಳಿಂದ ಕಂಗೆಟ್ಟಿತ್ತು. ಇದಲ್ಲದೆ ಮೈಸೂರನ್ನೊಳಗೊಂಡ ಅಖಂಡ ಕರ್ನಾಟಕ ಸಾಧ್ಯವೆಂಬ ಖಚಿತವಾದ ಆಸೆ ಕನ್ನಡಿಗರಲ್ಲಿ ಮೂಡಿತ್ತು. ಮೈಸೂರವರಾಗಿ

ದ್ದರೂ ಕನ್ನಡಿಗರೆಲ್ಲರ ವಿಶ್ವಾಸಕ್ಕೆ ಪಾತ್ರರೆಂದು ಅವರನ್ನು ಅಧ್ಯಕ್ಷತೆಗೆ ಆರಿಸಲಾಯಿತು. ಈ ಸ್ಥಾನದಲ್ಲಿ ಅವರು ಎಂಟು ವರ್ಷಗಳ ವರೆಗೆ ಉಳಿದರು.

ಇದು ದೊಡ್ಡ ಸಂಗತಿಯೇ ಸರಿ. ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿ ಅವರ ಸ್ಥಿತಿ ಹಂಸ ತೂಲಿಕಾ ತಲ್ಪವಾಗಿರಲಿಲ್ಲ. ದಿಲ್ಲಿಯಲ್ಲಿ ಕುಳಿತ ನಾಯಕರು ಕರ್ನಾಟಕದ ವಿಷಯಕ್ಕೆಂದೇ ಅಲ್ಲ ದಿದ್ದರೂ ಭಾಷಾನ್ವಯ ಚಳವಳಿಯನ್ನು ಕಡೆ ಗಣ್ಣಿಂದ ಕಾಣಲು ಆಗಲೇ ಪ್ರಾರಂಭಿಸಿದ್ದರು. ಅವರ ಮುಂದೆ ಕರ್ನಾಟಕದ ವಾದಗಳನ್ನು ಬಲವಾಗಿ ಮಂಡಿಸಲು ಅವರು ಹೋಗಬೇಕಾ ಗುತ್ತಿತ್ತು. ಇದರ ಪ್ರತಿಕ್ರಿಯೆ ಸಾಮಾನ್ಯವಾಗಿ ಅಪ್ರಿಯವಾಗಿಯೇ ಇರುತ್ತಿತ್ತು. ಅಲ್ಲಿಂದ ಮರಳಿ ಕರ್ನಾಟಕದಲ್ಲಿ ನಿಜಲಿಂಗಪ್ಪನವರು ಕಟ್ಟಾ ಏಕೀಕರಣವಾದಿಗಳಿಗೆ “ಇನ್ನೂ ಎಲ್ಲವೂ ಕೆಟ್ಟಿಲ್ಲ” ಎಂದು ಸಮಾಧಾನ ಹೇಳಿ ಅವರನ್ನು ಅತಿರೇಕದ ಹಾದಿಯಿಂದ ಪರಾವೃತ್ತಗೊಳಿಸ ಬೇಕಾಗುತ್ತಿತ್ತು. ಇದರಿಂದ ಎರಡೂ ಕಡೆ ಗಳಿಂದ ನಿಜಲಿಂಗಪ್ಪನವರು ಶಂಕಾದೃಷ್ಟಿಗೊಳ ಗಾಗಬೇಕಾಗುತ್ತಿತ್ತು. ಹುಬ್ಬಳ್ಳಿ ಗೋಳೀಬಾ ರಿನ ಪ್ರಸಂಗದಲ್ಲಿ (೧೯೫೩) ಈ ಮಾತು ಬಹಳ ಸ್ಪಷ್ಟವಾಗಿ ಗೋಚರಕ್ಕೆ ಬಂತು. ಹೀಗಿದ್ದೂ ಅವರು ಕನ್ನಡಿಗರ ವಿಶ್ವಾಸವನ್ನು ಬಹಳ ಮಟ್ಟಿಗೆ ಉಳಿಸಿಕೊಂಡದ್ದು ದೊಡ್ಡ ಮಾತು.

ಬಳ್ಳಾರಿ ಜಿಲ್ಲೆಯ ಹಲವಾಗಲಲ್ಲಿ ರೈತ ಕುಟುಂಬವೊಂದರಲ್ಲಿ ಹುಟ್ಟಿದ ಅವರು ತೊಟ್ಟಿ ಲಲ್ಲಿದ್ದಾಗಲೇ ತಬ್ಬಲಿಯಾದರು. ಚಿಕ್ಕಪ್ಪನ ಪೋಷಣೆಯಲ್ಲಿ ಬೆಳೆದರು; ಅವರ ತಾಯಿ ಎರಡಾಣೆಯ ದಿನಗೂಲಿಗಾಗಿ ದುಡಿದು ಅವರನ್ನು ಬೆಳೆಸಿದರು.

ಮಾಧ್ಯಮಿಕದ ವರೆಗೆ ಅವರ ವಿದ್ಯಾಭ್ಯಾಸ ದಾವಣಗೆರೆ, ಚಿತ್ರದುರ್ಗಗಳಲ್ಲಾದವು. ೧೯೨೪ ರಲ್ಲಿ ಬೆಂಗಳೂರ ಸೆಂಟ್ರಲ್ ಕಾಲೇಜಿನಲ್ಲಿ ಬಿ. ಎ. ಪದವೀಧರರಾಗಿ ೧೯೨೬ ರಲ್ಲಿ ಪುಣೆ ಯಲ್ಲಿ ವಕೀಲಿ ಪದವಿ ಗಳಿಸಿ ಚಿತ್ರದುರ್ಗದಲ್ಲಿ ವಕೀಲ ವೃತ್ತಿಯನ್ನಾರಂಭಿಸಿದರು.

ನಿಜಲಿಂಗಪ್ಪನವರು ರಾಜಕೀಯ ಕ್ಷೇತ್ರಕ್ಕೆ ಕಾಲಿಟ್ಟುದು ೧೯೩೭ ರಲ್ಲಿ— ಚಿತ್ರದುರ್ಗದಲ್ಲಿ ಮೈಸೂರು ಕಾಂಗ್ರೆಸ್ಸಿನ ಸಮ್ಮೇಳನ ಕರೆದಾಗ. ಅದೇ ವರ್ಷ ಮೈಸೂರು ಪ್ರಜಾ ಪ್ರತಿನಿಧಿ ಸಭೆಗೆ ಆರಿಸಿ ಬಂದರು. ಅಂದಿನಿಂದ ಸಾರ್ವಜನಿಕ ಜೀವನದಲ್ಲಿ ಮೇಲಿನ ಸ್ಥಾನವನ್ನೂ ಕೀರ್ತಿ ಯನ್ನೂ ಗಳಿಸುತ್ತ ಬಂದಿದ್ದಾರೆ.

ಮೈಸೂರು ಕಾಂಗ್ರೆಸ್ಸಿನ ಪ್ರಧಾನ ಕಾರ್ಯ ದರ್ಶಿಯಾಗಿದ್ದ ಅವರು ೧೯೪೫ ರಲ್ಲಿ ಅದರ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಕರ್ನಾಟಕ ಕಾಂಗ್ರೆಸ್ಸಿನ ಅಧ್ಯಕ್ಷರಾದ ಮೇಲೆ ಭಾರತದ ಘಟನಾ ಸಮಿತಿಯ ಸದಸ್ಯರೂ ಆದರು. ಹಲವು ಕಾಲ ಅವರು ಅ. ಭಾ. ಕಾಂಗ್ರೆಸ್ ಕಾರ್ಯ ಸಮಿತಿ ಹಾಗು ಪಾರ್ಲಿಮೆಂಟರಿ ಬೋರ್ಡುಗಳ ಸದಸ್ಯರಾಗಿಯೂ ಇದ್ದರು.

ಸ್ವಾತಂತ್ರ್ಯ ಪೂರ್ವ ಭಾರತದ ಸ್ವಾತಂತ್ರ್ಯಾ ಪೇಕ್ಷಿಗಳ ಅನಿವಾರ್ಯ ಬಿರುದಾದ ಸೆರೆಮನೆವಾಸ ಅವರಿಗೆ ಐದು ಸಲ ಲಭಿಸಿದೆ. ಬಿಕ್ಕಟ್ಟಿನ ಕಾಲದ ನಾಯಕತ್ವದಲ್ಲಿ ತಲೆಯನ್ನು ವಿವೇಕಲೋಕ ದಲ್ಲೇ ಉಳಿಸಿಕೊಳ್ಳಬೇಕೆಂಬ ನಾಯಕರಿಗೆ ದೊರೆಯುವ ಬಹುಮಾನವೂ ಅವರಿಗೆ ದೊರಕಿದೆ. ಶಂಕರ ಗೌಡರ ಉಪವಾಸ ಕಾಲದಲ್ಲಿ ಜನ ತೆಯ ಅತಿರೇಕವಾದಿ ವಿಭಾಗವು ಅವರ ಮೇಲೆ ದಾಳಿಮಾಡಲೆಳಸಿತು. ಕೊನೆಗೆ ಕರ್ನಾಟಕ ಪ್ರದೇಶ ಕಾಂಗ್ರೆಸ್ ಅಧ್ಯಕ್ಷತೆಯಿಂದಲೂ ಅವರು ಹೊರಬೀಳಬೇಕಾಯಿತು

ಇಷ್ಟೆಲ್ಲ ಆದರೂ ನಿಜಲಿಂಗಪ್ಪನವರ ಸತ್ವ ಗುಪ್ತಗಾಮಿನಿಯಾಗಿ ಉಳಿದೇ ಇತ್ತು. ಪ್ರದೇಶ ಕಾಂಗ್ರೆಸ್ಸಿನ ಅಧ್ಯಕ್ಷಪದದಿಂದ ಮುಕ್ತರಾದಾಗ ಅವರಿಗೆ ಒದಗಿತೆಂದು ಭಾವಿಸಲಾದ ರಾಜಕೀಯ ಅನಾಹುತವು ಕೊನೆಗೆ ಅವರಿಗೆ ಹಿತವನ್ನೇ ಮಾಡಿತೇನೋ. ಅವರ ಪರವಾಗಿ ಹೋರಾ ಡಲು ಬಲಿಷ್ಠ ಶಕ್ತಿಗಳು ಸಿದ್ಧವಾದವು. ಕೊನೆ ಗೀಗ ಅವರು ಕಳೆದುಕೊಂಡದ್ದಕ್ಕಿಂತ ದೊಡ್ಡ ದನ್ನೇ ಸಂಪಾದಿಸಿದ್ದಾರೆ.

ಅರ್ಧ ಶತಮಾನದ ಕನಸು ನನಸಾಗುವ ಪ್ರಸಂಗದಲ್ಲಿ ನಿಜಲಿಂಗಪ್ಪನವರಿಗೆ ದೊರೆತ ಈ ಗೌರವ ಎರಡೂ ಅರ್ಥಗಳಲ್ಲಿ ವ್ಯಾಪ್ತಿಯುಳ್ಳದ್ದು. ಅದು ದೀರ್ಘ ಸೇವೆಗೆ ದೊರೆತ ಗೌರವ; ಸಂಗಡಲೇ ಗುರುತರವಾದ ಭಾರವೂ ಹೌದು. ಇಂದು ಒಂದಾಗುತ್ತಿರುವ ಕನ್ನಡನಾಡು ಇನ್ನೂ ಸ್ವಭಾವದಲ್ಲಿ, ಪ್ರಜಾಸತ್ತೆಯ ಅನುಭವದಲ್ಲಿ, ಸಂಪತ್ತಿನಲ್ಲಿ ಏಕರೂಪವಾದದ್ದಲ್ಲ. ಈ ಸಂಧಿಕಾಲದಲ್ಲಿ ಮುಖ್ಯ ಮಂತ್ರಿತ್ವದ ಹೊರೆಹೊತ್ತವನು ಕೇವಲ ಸೌಮ್ಯ ಮೂರ್ತಿಯಾಗಿದ್ದರೆ ಸಾಲದು. ನಿಜಲಿಂಗಪ್ಪನವರದು ದಾಕ್ಷಿಣ್ಯ ಪ್ರಕೃತಿ. ಇಂಥವರು ಅಧಿಕಾರದಲ್ಲಿದ್ದಾಗ ಬೇಯದ ವೇಳೆಯನ್ನು ಬೇಯಿಸಿಕೊಳ್ಳಲು ಹವಣಿಸುವವರು ಅವರನ್ನು ಸುತ್ತುವರಿಯುವ ಭಯವಿದೆ. ನಿಜಲಿಂಗಪ್ಪನವರ ವ್ಯಕ್ತಿತ್ವದ "ಮೃದೂನಿ ಕುಸುಮಾದಪಿ" ಮುಖ ಈವರೆಗೆ ನಾವು ಕಂಡಿದ್ದೇವೆ. ಅವರ ಹೊಸ ಪದವಿಯಲ್ಲಿ "ವಜ್ರಾದಪಿ ಕಠೋರಾಣಿ" ಮುಖವೂ ಅಗತ್ಯವಾಗಿದೆ. ಆ ಮುಖವೊಂದು ಇರಬಹುದು, ಅದು ಪ್ರಕಾಶಕ್ಕೆ ಬರುವುದು ಎಂದು ಹಾರೈಸೋಣ. ಆಗ ಕರ್ನಾಟಕವು ನಿಜಲಿಂಗಪ್ಪನವರನ್ನು ಹಾಡಿ ಹರಸುವುದು ನಿಶ್ಚಿತ



## ಹತೋಟಿ ಮೀರಿದ ಪದಾರ್ಥ

ನಮ್ಮ ಹೃದಯದಷ್ಟು ನಮ್ಮ ಹತೋಟಿಗೆ ಮೀರಿದ ಪದಾರ್ಥ ಬೇರೊಂದಿಲ್ಲ. ಅದಕ್ಕೆ ಅಪ್ಪಣೆ ಕೊಡುವ ಮಾತಂತೂ ದೂರ ಉಳಿಯಿತು, ಅದರ ಅಪ್ಪಣೆಯನ್ನೇ ನಾವು ಪಾಲಿಸಬೇಕಾಗುತ್ತದೆ.

— ರೋಸೂ

ಸಾಮರ್ಥ್ಯವಿಲ್ಲದೇ ಒಬ್ಬನು ಪ್ರಸಿದ್ಧನಾಗಲು ಸಾಧ್ಯವಾದ ದಾರಿಯೆಂದರೆ ಹುತಾತ್ಮನಾಗುವುದು.

— ಬರ್ನಾರ್ಡ್ ಶಾ

ನಾವೆಲ್ಲರೂ ಒಮ್ಮಿಂದೊಮ್ಮೆ ಅದೃಶ್ಯಾತ್ಮರಾಗಿಬಿಟ್ಟರೆ, ಕೆಲವರೇನೋ ಮೊದಲಿಗಿಂತ ಸಂಭಾವಿತರಾಗಿ ವರ್ತಿಸಬಹುದು, ಆದರೆ ಬಹು ಜನರು ಮೊದಲಿಗಿಂತ ಕೇಡಿಗರಾಗುವರು.

— ಡಬ್ಲ್ಯು. ಎಚ್. ಆಡೆನ್

ಹಳೆಯದೆಂದು ಎಲ್ಲವೂ ಒಳ್ಳೆಯದಲ್ಲ; ಹೊಸದೆಂದು ಎಲ್ಲವೂ ಕೆಟ್ಟದಾಗುವುದಿಲ್ಲ. ಸಜ್ಜನರು ಪರೀಕ್ಷಿಸಿ ಒಂದನ್ನಾಯುತ್ತಾರೆ. ಮೂಢರು ಇನ್ನೊಬ್ಬರ ನಂಬಿಕೆಯಿಂದ ನುಡಿಯುತ್ತಿರುತ್ತಾರೆ.

— ಕಾಳಿದಾಸ

# ಇದು ನವ ಮೈಸೂರು

ವಿಸ್ತಾರ ೭೨೭೩೦ ಚದುರ ಮೈಲುಗಳು. ಜನಸಂಖ್ಯೆ ೧ ಕೋಟಿ ೯೦ ಲಕ್ಷ.

ಹೊಸ ರಾಜ್ಯದ ಮೊದಲ ರಾಜ್ಯಪಾಲರು: ಶ್ರೀ ಜಯಚಾಮರಾಜೇಂದ್ರ ಒಡೆಯರು

ನಿಯೋಜಿತ ಮುಖ್ಯಮಂತ್ರಿಗಳು: ಶ್ರೀ ಎಸ್. ನಿಜಲಿಂಗಪ್ಪ.

ಹೊಸ ಮೈಸೂರು ಪ್ರದೇಶ ಕಾಂಗ್ರೆಸ ಅಧ್ಯಕ್ಷರು: ಶ್ರೀ ವಿ. ವೆಂಕಟಪ್ಪ.

ವಿಶ್ವವಿದ್ಯಾಲಯಗಳು: ಎರಡು. ಕರ್ನಾಟಕ ವಿಶ್ವವಿದ್ಯಾಲಯ, ಮೈಸೂರು ವಿಶ್ವವಿದ್ಯಾಲಯ.

ಕಾಲೇಜುಗಳು ೬೭: ಮೈಸೂರು ಭಾಗದಲ್ಲಿ ೪೨. ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳಲ್ಲಿ ೧೬, ಹೈದರಾಬಾದ ಕರ್ನಾಟಕದಲ್ಲಿ ೩, ದಕ್ಷಿಣ ಕನ್ನಡದಲ್ಲಿ ೫, ಕೊಡಗು ೧.

ಹಾಯಸ್ಕೂಲುಗಳು ೯೭೯. ಉತ್ತರ ಕರ್ನಾಟಕದಲ್ಲಿ ೧೩೪, ಹೈದರಾಬಾದ ಕರ್ನಾಟಕದಲ್ಲಿ ೨೪, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೬೮, ಕೊಡಗು ೧೧, ಮೈಸೂರು ಭಾಗದಲ್ಲಿ ೭೩೨.

ಸಾಕ್ಷರತೆ: ಇಡಿ ಹೊಸ ಮೈಸೂರು ರಾಜ್ಯದಲ್ಲಿ ೨೦.೩%, ಉತ್ತರಕರ್ನಾಟಕದಲ್ಲಿ ೨೨.೩೦%, ಹೈದರಾಬಾದ ಕರ್ನಾಟಕದಲ್ಲಿ ೮.೪೯%, ಮದ್ರಾಸ ಕರ್ನಾಟಕದಲ್ಲಿ ೨೩.೩೦%, ಕೊಡಗು ೨೭.೩೦%, ಮೈಸೂರು ೨೦.೬%.

ಹೊಸ ರಾಜ್ಯದ ಆಡಳಿತ: ನಾಲ್ಕು ಡಿವಿಜನ್ನುಗಳು (೧) ಬೆಂಗಳೂರು, (೨) ಮೈಸೂರು, (೩) ಬೆಳಗಾವಿ, (೪) ಗುಲಬುರ್ಗಾ. ಒಟ್ಟು ೧೮ ಜಿಲ್ಹೆಗಳು. (೧) ಬೆಂಗಳೂರು, (೨) ತುಮಕೂರು, (೩) ಕೋಲಾರ, (೪) ಚಿತ್ರದುರ್ಗ, (೫ ಬಳ್ಳಾರಿ, (೬) ಮೈಸೂರು, (೭) ಹಾಸನ, (೮) ಮಂಡ್ಯ (೯) ಚಿಕ್ಕಮಗಳೂರು, (೧೦) ಶಿವಮೊಗ್ಗೆ, (೧೧) ದಕ್ಷಿಣ ಕನ್ನಡ, (೧೨) ಕೊಡಗು, (೧೩) ಬೆಳಗಾವಿ, (೧೪) ವಿಜಾಪೂರ, (೧೫) ಧಾರವಾಡ, (೧೬) ಉ. ಕನ್ನಡ, (೧೭) ಗುಲಬುರ್ಗಾ, (೧೮) ರಾಯಚೂರ.

ರಸ್ತೆ ಮೈಲುಗಳು ೧೮೭೩೩.

ದೊಡ್ಡ ಅಣೆಕಟ್ಟುಗಳು: ತುಂಗಭದ್ರಾ ನದಿಗೆ ಹೊಸಪೇಟೆ ಬಳಿ ಕಟ್ಟಿದ ತುಂಗಭದ್ರಾ ಅಣೆಕಟ್ಟು, ಕಾವೇರಿ ನದಿಗೆ ಕಟ್ಟಿದ ಕನ್ನಂಬಾಡಿ ಅಣೆಕಟ್ಟು

ನೀರಾವರಿ: ತುಂಗಭದ್ರಾ ಕೆಳಮಟ್ಟದ ಕಾಲುವೆ ಯೋಜನೆಯಿಂದ ದೊರೆಯುವುದು. ಕೃಷ್ಣರಾಜಸಾಗರದಿಂದ ಮತ್ತು ಘಟಪ್ರಭಾ ಎಡದಂಡೆ ಯೋಜನೆಯ ಕಾಲುವೆಗಳಿಂದ.

ಪ್ರಮುಖ ಉದ್ದಿಮೆಗಳು: ಚಿನ್ನದಗಣಿ, ಕಬ್ಬಿಣ—ಉಕ್ಕು, ಕಾಗದ, ವಿಮಾನ, ಟೆಲಿಫೋನ, ಎಲೆಕ್ಟ್ರಾನಿಕ್ಸ್, ರೇಷ್ಮೆ, ಕಾಫಿ, ಜಲವಿದ್ಯುತ್ತು, ಸಿಮೆಂಟ, ಜವಳಿ, ಯಂತ್ರೋಪಕರಣಗಳು, ಹಂಚುಗಳು, ಗೋಡಂಬಿ, ಬ್ಯಾಂಕಿಂಗ್, ಸಕ್ಕರೆ.

ದೇವಸ್ಥಾನಕ್ಕಾಗಿ ಭೂಮಿ ಬೇಕಿತ್ತು;
ಅದು ಹೇಗೆ ಬಂತು?

# ಸಮಗಾರನಿತ್ತ ಭೂದಾನ

ಕಾಶ್ಮೀರದ ಮಹಾರಾಜ ಚಂದ್ರಾಪೀಡ ಆಳುತ್ತಿದ್ದಾಗ ನಡೆದ ಕಥೆ ಇದು. ಚಂದ್ರಾಪೀಡ ಮಹಾರಾಜನು ಒಂದು ದೇವಮಂದಿರವನ್ನು ಕಟ್ಟಿಸುವ ಸಂಕಲ್ಪ ಮಾಡಿಕೊಂಡು ಶಿಲ್ಪಿಗಳನ್ನು ಕರೆಸಿದನು. ಶಿಲ್ಪಿಗಳಿಗೆ ಬೇಕಾದ ಸಾಮಗ್ರಿಗಳನ್ನೆಲ್ಲ ಪೂರೈಸಲು ತನ್ನ ಅಧಿಕಾರಿಗಳಿಗೆ ಆಜ್ಞಾಪಿಸಿದನು.

ದೇವಮಂದಿರವನ್ನು ಕಟ್ಟಲು ಶಿಲ್ಪಿಗಳು ಒಂದು ಸ್ಥಳವನ್ನಾರಿಸಿದರು. ಆದರೆ ಆ ಭೂಮಿಯನ್ನು ಅವರು ಅಳೆಯಲು ತೊಡಗಿದಾಗ ಓರ್ವ ಸಮಗಾರನು ಅವರಿಗೆ ಆತಂಕ ಮಾಡಿದನು. ಆ ಭೂಮಿಯ ಒಂದು ಭಾಗದಲ್ಲಿ ಆ ಸಮಗಾರನ ಗುಡಿಸಲಿತ್ತು. ಆ ಗುಡಿಸಲಿದ್ದ ಭಾಗವನ್ನು ಬಿಟ್ಟು ಮಂದಿರ ಕಟ್ಟಿದರೆ ಮಂದಿರ ಸಾಕಷ್ಟು ಸುಂದರವಾಗಿ ಕಾಣುತ್ತಿರಲಿಲ್ಲ. ರಾಜ್ಯದ ಮಂತ್ರಿಗಳು ಆ ಸಮಗಾರನಿಗೆ ಅವನು ಕೇಳಿದಷ್ಟು ಹಣ ಕೊಟ್ಟು ಆ ಭೂಮಿಯ ಭಾಗವನ್ನು ಕೊಂಡುಕೊಳ್ಳಲು ಸಿದ್ಧರಿದ್ದರು. ಆದರೆ ಎಷ್ಟು ಬೆಲೆ ಕೊಟ್ಟರೂ ಭೂಮಿ ಮಾರಲು ಸಮಗಾರ ಸಿದ್ಧನಿರಲಿಲ್ಲ.

ಈ ವಿಷಯ ಮಹಾರಾಜನ ವರೆಗೆ ಹೋಯಿತು. ನ್ಯಾಯಪ್ರಿಯನಾದ ಚಂದ್ರಾಪೀಡನು "ಬಲಾತ್ಕಾರದಿಂದ ಯಾರ ಭೂಮಿಯನ್ನೂ ಕಸಿದುಕೊಳ್ಳುವದು ಸಾಧ್ಯವಿಲ್ಲ. ದೇವಮಂದಿರವನ್ನು ಬೇರೆ ಸ್ಥಳದಲ್ಲಿ ಕಟ್ಟಿರಿ," ಎಂದನು.

ಶಿಲ್ಪಿಗಳ ಪ್ರಮುಖ ಹೇಳಿದನು: "ಪ್ರಭೋ, ಈ ಸ್ಥಳದಲ್ಲಿ ದೇವ ಮಂದಿರವನ್ನು ಕಟ್ಟುವ ಸಂಕಲ್ಪ ಮಾಡಿದ್ದಾಗಿದೆ. ಆರಾಧ್ಯದೇವತೆಯ ಮಂದಿರವು ಎಲ್ಲಕ್ಕೂ ಉತ್ತಮ ಸ್ಥಳದಲ್ಲಿರಬೇಕು. ನಮಗೆ ಇದರಷ್ಟು ಉತ್ತಮ ಸ್ಥಳ ಮತ್ತೆಲ್ಲಿಯೂ ಕಂಡುಬಂದಿಲ್ಲ."

ಮಹಾರಾಜನ ಆಜ್ಞೆಯ ಮೇರೆಗೆ ಸಮಗಾರ ಬಂದನು. ಚಂದ್ರಾಪೀಡ ಆತನಿಗೆ ಹೇಳಿದನು: "ನಿನ್ನ ಗುಡಿಸಲಿಗಾಗಿ ಎಷ್ಟು ಹಣ ಕೊಡಬೇಕು, ಹೇಳ.; ಬೇರೆಡೆ ಎಷ್ಟು ಭೂಮಿ



ಕಲ್ಹಣನ "ರಾಜತರಂಗಿಣಿ" ಯಿಂದ

ಬೇಕೋ ಕೇಳು. ನೀನು ಬಯಸಿದರೆ ಅಲ್ಲಿ ನಿನಗೆ ಮನೆಯನ್ನೂ ಕಟ್ಟಿಸಿಕೊಡಲಾಗುವದು. ಧರ್ಮ ಕಾರ್ಯದಲ್ಲಿ ಏಕೆ ವಿಘ್ನವನ್ನುಂಟುಮಾಡುತ್ತಿ? ದೇವಮಂದಿರ ನಿರ್ಮಾಣ ಕಾರ್ಯಕ್ಕೆ ವಿಘ್ನವುಂಟು ಮಾಡುವದು ಪಾಪ ಎಂಬುದು ನಿನಗೆ ಗೊತ್ತಿರ ಬೇಕು.''

ಸಮಗಾರ ನಮ್ರತೆಯಿಂದ ಕೈಜೋಡಿಸಿ ''ಮಹಾರಾಜರೇ, ಇದು ಭೂಮಿ ಅಥವಾ ಗುಡಿಸಲಿನ ಪ್ರಶ್ನೆಯಲ್ಲ. ಆ ಗುಡಿಸಲಿನಲ್ಲಿ ನನ್ನ ತಂದೆ, ಅಜ್ಜ ಎಲ್ಲ ಪೂರ್ವಜರು ವಾಸಿಸಿದ್ದಾರೆ. ಈ ಭೂಮಿ ನನಗೆ ಮಾತೆಯ ಸಮಾನ. ಎಷ್ಟೇ ಹಣ ದೊರೆತರೂ ನೀವು ನಿಮ್ಮ ಪೂರ್ವಜನ ನಿವಾಸಸ್ಥಾನವಾದ ಈ ಅರಮನೆಯನ್ನು ಬೇರೆಯವರಿಗೆ ಹೇಗೆ ಕೊಡಲಾರಿರೋ ಹಾಗೆಯೆ ನಾನು ಕೂಡ ನನ್ನ ಗುಡಿಸಲನ್ನು ಕೊಡಲಾರೆ," ಎಂದು ಹೇಳಿದನು.

ಮಹಾರಾಜ ಚಂದ್ರಾಪೀಡನು ಈ ಮಾತುಗಳನ್ನು ಕೇಳಿ ನಿರಾಶನಾದನು. ಒಂದು ಕ್ಷಣ. ಕಾಲ ಮೌನವಾಗಿದ್ದು ಬಳಿಕ ಸಮಗಾರನು, "ಪ್ರಭೋ, ನೀವು ನನ್ನನ್ನು ಧರ್ಮಸಂಕಟದಲ್ಲಿ ಕೆಡವಿದಿರಿ. ದೇವಮಂದಿರ ನಿರ್ಮಾಣ ಕಾರ್ಯಕ್ಕೆ ಅಡ್ಡಿ ಮಾಡಿ ನಾನು ಪಾಪ ಮಾಡಿದರೆ ಅದು ನನ್ನ ಪೂರ್ವಜರಿಗೂ ತಗಲೀತು. ನೀವು ಧರ್ಮಾತ್ಮರು, ಉದಾರಿಗಳು. ನಾನಾದರೋ ಹೀನ ಜಾತಿಯ ಕಂಗಾಲ ಮನುಷ್ಯ. ಆದರೂ ನೀವು ನನ್ನಲ್ಲಿಗೆ ದೇವಮಂದಿರಕ್ಕಾಗಿ ನನ್ನಿಂದ ಈ ಭೂಮಿಯನ್ನು ದಾನವಾಗಿ ಕೇಳಿದರೆ ಅದನ್ನು ಕೊಡುತ್ತೇನೆ. ಇದರಿಂದ ನನಗೂ ನನ್ನ ಪೂರ್ವಜರಿಗೂ ಪುಣ್ಯಲಭಿಸುವದು,'' ಎಂದನು.

'' ಮಹಾರಾಜರು ಈ ಸಮಗಾರನಿಂದ ಭೂಮಿ ದಾನ ಪಡೆಯುವರೇ!'' ರಾಜ ಸಭೆಯಲ್ಲಿದ್ದವರ ಕಂಣು ಕೆಂಪಗಾದವು. ಅವರು ತಮ್ಮತಮ್ಮಲ್ಲಿ ಮಾತಾಡಿಕೊಳ್ಳತೊಡಗಿದರು.

'' ಒಳ್ಳೇದು, ನೀನಿನ್ನು ಹೋಗು " ಮಹಾರಾಜನು ಮತ್ತೇನನ್ನೂ ಆಡದೆ ಸಮಗಾರನನ್ನು ಕಳಿಸಿಕೊಟ್ಟನು.

ಆದರೆ ಮರುದಿನ ಕಾಶ್ಮೀರದ ಆ ಧರ್ಮಿಷ್ಠ ಅರಸನು ಸಮಗಾರನ ಗುಡಿಸಲಿಗೆ ಹೋಗಿ ಅವನಿಂದ ಭೂಮಿದಾನವನ್ನು ಪಡೆದನು.



## ಸಚೇತನ

**ನಡೆಯುವಾತನೇ ಜೇನು ಪಡೆಯುವನು, ಆತನೇ ಸಿಹಿ ಹಣ್ಣುಗಳನ್ನು ತಿನ್ನುವನು, ಸೂರ್ಯನ ದುಡಿಮೆ ನೋಡು ಅವನು ನಿತ್ಯ ಚಲಿಸುತ್ತಾನೆ; ಅವನಿಗೆ ಆಲಸ್ಯವಿಲ್ಲ. ಆದ್ದರಿಂದ ನಡೆಯುತ್ತಲೇ ಇರು.**

—ಐತರೇಯ

**ಯಾರು ಸಚೇತನನೋ ಅವನು ಯುವಕ, ಬಹಳ ಹೊತ್ತು ಆಲೋಚಿಸುತ್ತ ಕೂಡುವುದು ಅವನ ಕೆಲಸವಲ್ಲ; ಕೆಲಸ ಮಾಡಿ ಮುಗಿಸುವುದು ಯೌವನ, ಆಲೋಚಿಸುತ್ತಲೇ ಇರುವುದು ಮುಪ್ಪು. ಮುಪ್ಪು ಅರೆಸಾವು; ಚೇತನ ಮತ್ತು ಕೆಲಸದ ಬಾಳ್ವೆ ಯೌವನವೇ ಸರಿ. ಪ್ರಾಯಕ್ಕೂ ಯೌವನಕ್ಕೂ ಯಾವುದೇ ಸಂಬಂಧವಿಲ್ಲ. ಪ್ರತಿ ಉಸಿರಿಗೆ ಚಟುವಟಿಕೆಯುಳ್ಳ ಇದು ಜೀವನದ ಒಂದು ತತ್ವವೇ ಸರಿ.**

—ಭಗವಾನದೀನ

# ವಿ. ಕೆ. ಕೃಷ್ಣ ಮೆನನ್

ಜಗಳವಿದ್ದಲ್ಲೆಲ್ಲ ಕೃಷ್ಣಮೆನನ್ ಸಿದ್ಧ ನಾರದನ ಹಾಗೆ. ನಾರದನ ಹಾಗೆ ಇವರೂ ಉಭಯಲೋಕಸಂಚಾರಿ. ಒಂದು ಬಿಳಿಯರ ದೇವಲೋಕ, ಇನ್ನೊಂದು ಏಶಿಯದವರ ಮರ್ತ್ಯಲೋಕ. ಆದರೆ ಇಲ್ಲಿಗೆ ನಾರದನಿಗೂ ಮೆನನ್ನರಿಗೂ ಇರುವ ಸಾಮ್ಯವುಂಗಿಯಿತು. ನಾರದನಂತೆ ಇವರು ಜಗಳವನ್ನು ಬಿತ್ತುವವರೂ ಅಲ್ಲ, ಬೆಳೆಸುವವರೂ ಅಲ್ಲ. ಜಗಳ ತೀರಿಸುವುದು, ಕನಿಷ್ಠ ಅದು ಹಬ್ಬದಂತೆ ಮಾಡುವುದು ಮೆನನ್ನರ ಉದ್ಯೋಗ.



ಎಲ್ಲ ಶಾಂತಿಸಾಧಕರ ಪಾಡು ಮೆನನ್ನರಿಗೂ ಒದಗಿದೆ. ಅವರನ್ನು ಎರಡೂ ಪಕ್ಷದವರು ಪ್ರೀತಿಸುವುದಿಲ್ಲ. ಕೊರಿಯದಲ್ಲಿ ಅವರು ಶಾಂತಿ ಸಾಧಿಸಲು ಹವಣಿಸಿದಾಗ ಮೊದಲು ರಶಿಯನ್ನರು ಅವರನ್ನು ಕಟುವಾಗಿ ಟೀಕಿಸಿದರು; ಆ ಮೇಲೆ ಅಮೇರಿಕನ್ನರು ನಿಂದಿಸಿದರು. ಇಂಡೋಚೀನದ ಸಂಧಾನದಲ್ಲಿಯೂ ಅವರ ನಿಂದೆಯಾಗದಿರಲಿಲ್ಲ. ಕಮ್ಯುನಿಸ್ಟರು ಅವರನ್ನು—ಮೊದಮೊದಲಂತೂ—ಬಂಡವಾಳಗಾರರ ಕೈಗೂಸು ಎಂದರು; ಪಾಶ್ಚಾತ್ಯ ರಾಷ್ಟ್ರಗಳು ಅವರ ಚರಿತ್ರೆಯ ಹಳೇ ಪುಟಗಳನ್ನು ಮಗುಚಿಹಾಕಿ, ಇವರು ಕಮ್ಯುನಿಸ್ಟರು—ಅಥವಾ ಅವರಿಗೆ ಹತ್ತಿರದವರು ಎಂದು ಇಂದಿಗೂ ಹೇಳುತ್ತಾರೆ. ಭಾರತದಲ್ಲಿ ಅವರನ್ನು "ಬ್ರಿಟಿಶ ಬಚ್ಚಾ" ಎನ್ನುವವರೂ ಇದ್ದಾರೆ. ಅವರ ಮೇಲಿನ ಆಕ್ಷೇಪಗಳನ್ನೆಲ್ಲ ಒಂದಕ್ಕೊಂದು ಎದುರಾಗಿರಿಸಿದರೆ ಸಂಕೀರ್ಣ ಭಿನ್ನರಾಶಿ (ಅಪೂರ್ಣಾಂಕ) ಯ ಸುದೀರ್ಘ ಲೆಕ್ಕದಂತೆ ಮತಿಭ್ರಮೆಯನ್ನುಂಟುಮಾಡೀತು. ಆ ಲೆಕ್ಕ ಬಿಡಿಸಲು ನಿಮಗೆ ಬಂದರೆ ಒಂದರಲ್ಲೊಂದು ವಜಾ ಹೋಗಿ ಶೂನ್ಯವೇ ಉಳಿವುದೆಂದು ನೀವು ಕಾಣುವಿರಿ.

ಯಾರೇನೇ ಎಣಿಸಲಿ, ಕೃಷ್ಣಮೆನನ್ ಇರುವುದನ್ನು ಗಣನೆಗೆ ತೆಗೆದುಕೊಳ್ಳದೆ ಇರುವುದು ಅಂತಾರಾಷ್ಟ್ರೀಯ ರಂಗದಲ್ಲಿ ಯಾರಿಗೂ ಸಾಧ್ಯವಿಲ್ಲ. ಜಾಗತಿಕ ರಾಜಕಾರಣದಲ್ಲಿ ಮೆನನ್ನರಂಥ ವ್ಯಕ್ತಿ ಹಿಂದೆಂದೂ ಆಗಿಲ್ಲ. ಎರಡು ಅಥವಾ ಹೆಚ್ಚು ರಾಷ್ಟ್ರಗಳು ಮುಷ್ಟಿ ಜಗಳಕ್ಕೆ ಅಣಿಮಾಡುತ್ತ ಇನ್ನೇನು ಒಂದರಮೇಲೊಂದು ಹಾರಬೇಕು ಅನ್ನುವಷ್ಟರಲ್ಲಿ ಮೆನನ್ ಅಲ್ಲಿ ತಯಾರಾಗುತ್ತಾರೆ. ಅವರ ಆವಿರ್ಭಾವದಿಂದ ಚದುರಂಗದ ಪ್ಯಾದೆಗಳೆಲ್ಲ ಅಸ್ತವ್ಯಸ್ತವಾಗಿ ಬಿಡುತ್ತವೆ; ಆಟ ಕೆಡುತ್ತದೆ. ಯಾರೂ ಸೋಲುವುದಿಲ್ಲ. ಕೊನೆಗೆ ಬೇಸತ್ತು ಎರಡೂ ಪಕ್ಷಗಳು ಆಟ ನಿಲ್ಲಿಸಲು ಒಪ್ಪುತ್ತವೆ.

ಜಾಗತಿಕ ರಾಜಕಾರಣದಲ್ಲಿ ವಿ. ಕೆ. ಕೃಷ್ಣ ಮೆನನ್ನರ ಉದಯ ಧೂಮಕೇತು ಸದೃಶವಾದದ್ದು. ಭಾರತೀಯ ರಾಜಕಾರಣಕ್ಕೂ ಇದೇ ಮಾತು ಅನ್ವಯಿಸುತ್ತದೆ. ಸ್ವಾತಂತ್ರ್ಯ ಬಂದ ಬಳಿಕ ಮೆನನ್ನರನ್ನು ಲಂಡನ್ನಿನಲ್ಲಿ ಭಾರತದ ಪ್ರಥಮ ಹೈಕಮೀಶನರರೆಂದು ನೇಮಿಸಿದಾಗ ಈ ದೇಶದಲ್ಲಿ ಹುಬ್ಬುಗಳು ಗಂಟಿಕ್ಕಿದವು. "ಮೆನನ್! ಯಾರೀ ಮೆನನ್?" ಎಂದರು. "ಬಲ್ಲವರ್ಗ"ದವರು ಕೂಡ.

ವೆಂಗಾಲಿಲ್ ಕೃಷ್ಣನ್ ಕೃಷ್ಣ ಮೆನನ್ನರ ಹಿಂದು ಮುಂದು ಆಗ ಗೊತ್ತಿದ್ದವರು ವಿರಳ. ೧೯೨೪ ರಲ್ಲಿ ತಮ್ಮ ೨೬ ನೇ ವಯಸ್ಸಿನಲ್ಲಿ ಅವರು ಲಂಡನ್ನಿಗೆ ಹೋದವರು ಅಲ್ಲಿಯೇ ಉಳಿದು ಭಾರತದ ಸ್ವಾತಂತ್ರ್ಯದ ಹೋರಾಟ ಸಾಗಿಸಿದರು.

ಕೃಷ್ಣ ಮೆನನ್ ಹುಟ್ಟಿದ್ದು ಮಲಬಾರಿನ ಕಲ್ಲಿಕೋಟೆಯಲ್ಲಿ. ಮದ್ರಾಸಿನ ಬಿ. ಎ. ಆದನಂತರ ಅವರು ಲಂಡನ್ನಿಗೆ ಹೋದರು. ಅವರ ತಂದೆ ಅನುಕೂಲವಂತರಲ್ಲ. ಸಾಮಾನ್ಯ ವಕೀಲರು. ಕೃಷ್ಣ ಮೆನನ್ನರಿಗೆ ನಾಲ್ವರು ಅಕ್ಕತಂಗಿಯರಿದ್ದರು ಬೇರೆ. ಆದರೆ ತಂದೆ ಆ್ಯನಿ ಬೆಸೆಂಟರ ಥಿಯಾಸಫಿ ಮತದ ಕಡೆ ಒಲವಿದ್ದವರಾದ್ದರಿಂದ ಬೆಸೆಂಟರ ನೆರವು ದೊರಕಿ ಯುವಕ ಕೃಷ್ಣ ವಿಲಾಯತಿಗೆ ಹೋಗಲು ಸಾಧ್ಯವಾಯಿತು.

ವಿದ್ಯಾವ್ಯಾಸಂಗದಲ್ಲಿ ಮೆನನ್ನರು ಬೇಗ ಮುಂದಾದರು. ಲಂಡನ್ ಸ್ಕೂಲ ಆಫ್ ಇಕನಾಮಿಕ್ಸದಲ್ಲಿ ಪ್ರಸಿದ್ಧ ಸಮಾಜವಾದಿ ಅರ್ಥಶಾಸ್ತ್ರ ಹೆರಾಲ್ಡ ಲಾಸ್ಕಿಯ ಶಿಷ್ಯರಾಗಿ ಅವರು ಬಿ. ಎಸ್ ಸಿ. ಪದವೀಧರರಾದರು. ರಾಜ್ಯಶಾಸ್ತ್ರದಲ್ಲಿ ಎಂ. ಎ. ಆದರು. ಎರಡರಲ್ಲಿಯೂ ಪ್ರಥಮ ವರ್ಗದ ಆನರ್ಸ್. ಅನಂತರ ಇನ್ನರ ಟೆಂಪಲಿನಿಂದ ಬ್ಯಾರಿಸ್ಟರರಾದರು.

ಆದರೆ ಮೆನನ್ ಧನಸಂಪಾದನೆಯ ಹವ್ಯಾಸಕ್ಕೆ ಬೀಳಲಿಲ್ಲ. ವಕೀಲ ವೃತ್ತಿಯನ್ನೇನೋ ಮಾಡಿದರು; ಆದರೆ ಹಣಕ್ಕಾಗಿ ಅಲ್ಲ. ೧೯೪೦ ರಲ್ಲಿ ಉತ್ತರ ಲಂಡನ್ ನ್ಯಾಯಾಲಯವೊಂದರಲ್ಲಿ, ಇಂಗ್ಲಂಡಿನಲ್ಲಿ ಅಕ್ರಮ ಪ್ರವೇಶ ಮಾಡಿದನೆಂದು ಆರೋಪಕ್ಕೊಳಗಾಗಿದ್ದವನೊಬ್ಬನನ್ನು ಬಿಡಿಸಲು ಅವರು ಮಹಾ ಸಾಹಸದಿಂದ ಹೋರಾಡಿದರು. ಅವರಿಗೆ ಗೆಲವೂ ದೊರೆಯಿತು. ಬಿಡುಗಡೆ ಹೊಂದಿದ ಅವರ ಪಕ್ಷಕಾರ ಕೃತಜ್ಞತೆಯಿಂದ ಅವರಿಗೆ ೪೦ ಪೌಂಡು ಫೀ ಕೊಡಲು ಬಂದನು. ಮೆನನ್ನರು ಅದನ್ನು ತಿರುಗಿ ಕೊಟ್ಟರು. ಪಕ್ಷಕಾರ ಚಕಿತನಾದ. ಮೆನನ್ ಅಂದರು: "ನನಗೆ ಅದು ಬೇಡ. ಹಣದಿಂದ ನನಗೇನೂ ಆಗಬೇಕಾದ್ದಿಲ್ಲ." ಮೆನನ್ನರ ನುಡಿ ಸರಳವಾಗಿತ್ತು. ಶ್ರೀಮದ್ಗಾಂಭೀರ್ಯದ ಛಾಯೆ ಕೂಡ ಅದರಲ್ಲಿರಲಿಲ್ಲ.

ಇದೊಂದು ಆಕಸ್ಮಿಕ ಘಟನೆಯೇನಲ್ಲ. ಕೃಷ್ಣ ಮೆನನ್ನರ ಪ್ರವೃತ್ತಿ ಮೊದಲಿನಿಂದ ಹೀಗೇ ಇತ್ತು. ಈಗಲೂ ಹಾಗೇ ಇದೆ. ಯುರೋಪಿಯನ್ ಪೋಷಾಕು ಧರಿಸಿದರೂ ಅಸಂಗ್ರಹ ವೃತ್ತಿಯನ್ನು ಅಕ್ಷರಶಃ ಪಾಲಿಸುವವರೆಂದರೆ ಕೃಷ್ಣ ಮೆನನ್. ಅವರು ಲಂಡನಿನಲ್ಲಿ ಭಾರತದ ಹೈಕಮಿಶನರರಿದ್ದಾಗ ಸಂಬಳವನ್ನೇ ತೆಗೆದುಕೊಳ್ಳುತ್ತಿದ್ದಿಲ್ಲ. ಇವೊತ್ತಿಗೂ ಅವರ ಆಸ್ತಿಯನ್ನೆಲ್ಲ ಒತ್ತಟ್ಟಿಗೆ ಕೂಡಿಸಿದರೆ ಒಂದು ಸೂಟುಕೇಸಿನಲ್ಲಿ ತುಂಬಿಸಬಹುದು.

ಅವರ ನಿರಾಡಂಬರ ಜೀವನ ಹೆಸರಾದದ್ದು. ಲಂಡನ್ನಿನಲ್ಲಿ ಅವರು ಮೂವತ್ತೈದು ವರ್ಷಕಾಲ ಒಂದೇ ಥಂಡಿಯಾದ ಕೋಣೆಯಲ್ಲಿ, ಕೂತರೆ ಎದ್ದರೆ ಕಿರಿಚುವ ಮಂಚದ ಮೇಲೆ, ಜೀವನ ಸಾಗಿಸಿದರು. ಅವರು ಮದುವೆಯಾಗಿಲ್ಲ. ಬಿಸ್ಕೀಟು, ಗಂಗಾಳಗಟ್ಲೆ ಚಹಾ ಇವಿಷ್ಟು ಅವರ ಆಹಾರ. ಮಾಂಸವನ್ನು ಮುಟ್ಟಿದವರಲ್ಲ, ಮದ್ಯವನ್ನು ಮೂಸಿದವರಲ್ಲ. ಒಳ್ಳೇ ಆಸೆಯಾದರೆ ಲಂಡನಿನ ಮಲಯಾಳಿ ಬಂಧುಗಳಿಂದ ಮಲಬಾರಿನ ಖಾರಸಾರು, ಪಲ್ಯ ಪಡೆದು ಸೇವಿಸುವವರು. ಹೈಕಮಿಶನರರಾದ ಮೇಲೆ ವೈಭವಪೂರ್ಣ ಭಾರತ ಭವನದಲ್ಲಿ ವಾಸಿಸಿದರೂ ಅವರು ತಮಗಾಗಿ ಇಟ್ಟುಕೊಂಡದ್ದು ಒಂದು ಕೋಣೆ ಮಾತ್ರ. ಹೈಕಮಿಶನರ ಕಚೇರಿಯಲ್ಲಿ ಒಂದು ಡಜನ್ ಥಳಥಳಿಸುವ ರಾಲ್ಸ್‌ರಾಯ್ಸ ಕಾರುಗಳು ಅವರಿಗಾಗಿ ಸಿದ್ಧವಿರುತ್ತಿದ್ದವು. ಮೆನನ್ನರು

ಸರಕಾರದ ಕೆಲಸದ ವೇಲೆ ಹೋಗುವುದಿದ್ದರೆ ಆ ಕಾರುಗಳನ್ನೇರುತ್ತಿದ್ದರು. ಅದು ಕೇವಲ ಭಾರತದ ಗೌರವ ಗಾಂಭೀರ್ಯರಕ್ಷಣೆಗಾಗಿ. ಸ್ವಂತ ಕೆಲಸವಿದ್ದಾಗ ಅವರು ತಮ್ಮ ಪುರಾತನ ರಥಗಳಾದ ಲಂಡನ್ ಸಿಟಿಬಸ್ಸುಗಳನ್ನೇ ಏರುವವರು. ಹೈಕಮಿಶನರರಾದ ಮೇಲೆ ಅವರಲ್ಲಿ ಕಾಣಿಸಿದ ಒಂದೇ ಒಂದು ಬದಲಾವಣೆಯೆಂದರೆ ಅವರ ವೇಷ ಹೆಚ್ಚು ಸಭ್ಯವಾಯಿತು. ಗತಕಾಲದಲ್ಲಿ ಅವರ ಪ್ಯಾಂಟು ಕೋಟುಗಳು ಯಾರಿಗಾಗಿಯೋ ಮಾಡಿಸಿದಂತೆ ಇರುತ್ತಿದ್ದವು. ಈಗ ಅವು ತುಸು ಠೀಕುಠಾಕಾಗಿವೆ. ಇಂಥವರಿಗೆ ಹಣದಿಂದೇನಾಗಬೇಕಾಗಿದೆ ?

ರಾಷ್ಟ್ರರಾಷ್ಟ್ರಗಳೊಳಗಿನ ಜಗಳ ತೀರಿಸಲು ಟೆನಿಸ್ ಚೆಂಡಿನಂತೆ ದಿಲ್ಲಿಯಿಂದ ಕೈರೋ, ಕೈರೋದಿಂದ ಲಂಡನ್, ಲಂಡನ್ನಿನಿಂದ ಮಾಸ್ಕೋ, ಮಾಸ್ಕೋದಿಂದ ನ್ಯೂಯಾರ್ಕಿಗೆ ಹಾರಾಡುವ ಕೃಷ್ಣಮೆನನ್ನರು ಜನರನ್ನು ಮೆಚ್ಚಿಸುವುದರಲ್ಲಿ ಖಂಡಿತವಾಗಿ ಚತುರರಲ್ಲ ಎಂಬುದೀಗ ಅವರಲ್ಲಿರುವ ವೈಚಿತ್ರ್ಯ. ಅವರು ಎಂದೂ ಜನಪ್ರಿಯರಾದವರಲ್ಲ. ಅವರ ಶತ್ರುಗಳು ಕೂಡ ಅವರನ್ನು ಗೌರವಿಸುತ್ತಾರೆ; ಆದರೆ ಮಿತ್ರರು ಕೂಡ ಪ್ರೀತಿಸುತ್ತಾರೆ ಎನ್ನುವುದು ಕಷ್ಟ.

ಕಾರಣವಿಷ್ಟೇ. ಕೃಷ್ಣಮೆನನ್ ಬುದ್ಧಿಜೀವಿ; ಚುರುಕುಬುದ್ಧಿಯವರನ್ನು ಜನ ಮೆಚ್ಚುವುದು ಕಡಿಮೆ. ಮೆಚ್ಚಿಸಬೇಕೆಂದು ಒಂದು ಶಬ್ದ ಆಡುವವರೂ ಅವರಲ್ಲ. ಅವರು ಸ್ಪಷ್ಟವಾದಿ, ತರ್ಕವಾದಿ. ಲಂಡನ್ನಿನಲ್ಲಿ ಇಂಡಿಯಾ ಲೀಗಿನ ಕಾರ್ಯದರ್ಶಿಯಾಗಿ ಭಾರತ ಸ್ವಾತಂತ್ರ್ಯಕ್ಕಾಗಿ ಹಗಲಿರುಳು ದುಡಿಯುವುದರ ಸಂಗಡ ಬ್ರಿಟಿಶ ಕೂಲಿಕಾರ ಪಕ್ಷದ ಸದಸ್ಯರಾಗಿ ಕೂಲಿಕಾರರ ಪರವಾಗಿಯೂ ಹೋರಾಡಿದರವರು. ಪಕ್ಷದ ಪರವಾಗಿ ಅವರು ಸೆಂಟ್ ಪಂಕ್ರಾಸ ಬರೋದ ಸದಸ್ಯರಾಗಿ ಆರಿಸಿಬಂದು ಸ್ಮರಣೀಯವಾದ ಸೇವೆ ಸಲ್ಲಿಸಿದರು. ಅವರಲ್ಲಿ "ರಾಜಕೀಯ ಚಾಕಚಕ್ಯ" ಇರಲಿಲ್ಲ. ಒಮ್ಮೆ ಅವರಿಗೆ ಕೂಲಿಕಾರ ಪಕ್ಷದಿಂದ ಪಾರ್ಲಿಮೆಂಟಿಗೆ ಆರಿಸಲ್ಪಡುವ ಸಂದರ್ಭ ಕೈಗೆ ನಿಲುಕುವಂತಾಗಿದ್ದಾಗ ೧೯೩೯ ರ ಯುದ್ಧ ಬಂದು ಅದನ್ನು ತಪ್ಪಿಸಿತು. ಅವರು ಕೂಲಿಕಾರ ಪಕ್ಷದ ಭಾರತ ನೀತಿಯನ್ನು ಪ್ರತಿಭಟಿಸಿ ಅದಕ್ಕೆ ರಾಜೀನಾಮೆಯಿತ್ತರು. ೧೯೪೫ ರಲ್ಲಿ ಪುನಃ ಅದರ ಸದಸ್ಯರಾದರು.

ವಿ. ಕೆ. ಕೆ. ಯವರನ್ನು ಕಮ್ಯುನಿಸ್ಟ್, ಕಮ್ಯುನಿಸ್ಟ್ ಪಕ್ಷಪಾತಿ ಇತ್ಯಾದಿಯಾಗಿ ಟೀಕಿಸಲಾಗುತ್ತದೆ. ಅವರು ಕಮ್ಯುನಿಸ್ಟ್ ಪಕ್ಷದ ಸದಸ್ಯರಾಗಿ ಎಂದೂ ಇದ್ದಿಲ್ಲ. ಅವರಂಥ ಸ್ವತಂತ್ರ ನಿರ್ಭಯ ವ್ಯಕ್ತಿಗೆ ಅದು ಅಸಾಧ್ಯವಾಗಿದೆ. ಆದರೆ ಕಮ್ಯುನಿಸ್ಟರೊಡನೆ ಅವರು ಭಾರತ ಸ್ವಾತಂತ್ರ್ಯದ ಬಗ್ಗೆ ಸಹಕರಿಸಿದ್ದುಂಟು. ಕೂಲಿಕಾರ ಪಕ್ಷಕ್ಕೆ ಇದೇ ಕಣ್ಣುಕಿಸರಾಯಿತು.

ಮೆನನ್ನರ ಲಂಡನ್ ಕಾಲದಿಂದಲೂ ಅವರು ಜವಾಹರಲಾಲರ ಮಿತ್ರರು. ಸ್ವಾತಂತ್ರ್ಯ ಬಂದ ಮೇಲೆ ಈ ಮೈತ್ರಿ ರಾಜಕೀಯ ಜೊತೆಗಾರಿಕೆಯಾಗಿ ರೂಪುಗೊಂಡಿತು. ಎರಡನೇ ಕ್ಯಾಬಿನೆಟ್ ನಿಯೋಗ ಮತ್ತು ಮೌಂಟಬ್ಯಾಟನ್ನರೊಡನೆ ನಡೆದ ಸಂಧಾನಗಳಲ್ಲಿ ಮೆನನ್ನರ ಪಾತ್ರ ತಕ್ಕಮಟ್ಟಿಗೆ ಇತ್ತೆಂದು ಅನೇಕರಿಗೆ ಗೊತ್ತಿರಲಿಕ್ಕಿಲ್ಲ. ಇಂಗ್ಲಂಡಿನಲ್ಲಿ ಭಾರತಕ್ಕಾಗಿ ವರ್ಷಾನುಗಟ್ಟಳೆ ಹೋರಾಡಿದ ಕೃಷ್ಣಮೆನನ್ನರ ಹೆಗಲ ಮೇಲೆ ಭಾರತ-ಇಂಗ್ಲಂಡುಗಳ ಮೈತ್ರಿಯನ್ನು ಅಧಿಕಾರ ಹಸ್ತಾಂತರದ ಕಷ್ಟಕಾಲದಲ್ಲಿ ಜೀವಂತವಾಗಿಡುವ ಧುರ ಹೊರಿಸಲ್ಪಟ್ಟಿತು.

ಹೈಕಮಿಶನ್ನಿನಿಂದ ನಿವೃತ್ತರಾದ ಮೇಲೆ ಕೃಷ್ಣ ಮೆನನ್ ಅಂತರಾಷ್ಟ್ರೀಯ ರಂಗದಲ್ಲಿ ಭಾರತದ ಸಂಚಾರಿ ರಾಯಭಾರಿಯಾಗಿದ್ದಾರೆ. ಪ್ರಧಾನಮಂತ್ರಿ ನೆಹರೂ ಅವರ ಇನ್ನೊಂದು ಅವತಾರ ಎನ್ನುವಂತೆ ಅವರಿದ್ದಾರೆ.

ನೋಡಿದರೆ ನೆಹರೂ-ಮೆನನ್ನರಂಥ ಪರಸ್ಪರ ವಿಜಾತೀಯವಾದ ಒಂದು ಜೋಡಿ ಸಿಗುವುದು ಅಪರೂಪ. ಒಬ್ಬ ಕೋಟ್ಯಂತರ ಜನರ ಆರಾಧ್ಯದೇವತೆ, ಇನ್ನೊಬ್ಬ ಜನಪ್ರಿಯತೆಯನ್ನು ತುಚ್ಛವಾಗಿ ಕಾಣುವ ನಿವೃತ್ತಿಮಾರ್ಗಿ; ಒಬ್ಬ ಪ್ರಪಂಚದ ಸುಖಗಳನ್ನು ಕಂಡು ಮೂಗು ಮುರಿಯದ ಭೋಗಿ, ಇನ್ನೊಬ್ಬ ಬಡತನವನ್ನು ನಚ್ಚಿ

ಕೊಂಡ ತ್ಯಾಗಿ; ಒಬ್ಬ ಕೋಟ್ಯಂತರ ಜನರ ಹೃದಯವನ್ನು ಅಲುಗಿಸುವಂತೆ ಮಾತಾಡಬಲ್ಲ ವಾಗ್ಮಿ; ಇನ್ನೊಬ್ಬ ಚಳವಳಿ, ವಾದವಿವಾದ ಗಳಲ್ಲಿ ಜೀವನವನ್ನೆಲ್ಲ ಸಾಗಿಸಿ ಜಗತ್ತಿನ ಹೋರಾಟಗಳನ್ನು ಶಾಂತಗೊಳಿಸಲು ಗುಪ್ತ-ಗಹನ ಸಂಧಾನಗಳನ್ನು ಕೈಕೊಂಡ ರಾಯಭಾರಿ; ಒಬ್ಬನ ನುಡಿ ಅಮೃತ, ಇನ್ನೊಬ್ಬನದು ಸಂದರ್ಭ ಬಂದಾಗ ಖಡ್ಗ; ಒಬ್ಬ ಕಾರ್ಯಮಗ್ನ, ಇನ್ನೊಬ್ಬ ಚಿಂತನಮಗ್ನ. ಆದರೆ ಎರಡೂ ದೇಹಗಳಲ್ಲಿ ಉರಿಯುವ ಆತ್ಮಪ್ರದೀಪ ಒಂದೇ. "ಲೋಕಾಃ ಸಮಸ್ತಾಃ ಸುಖಿನೋ ಭವಂತು" ಎಂಬುದೇ ಅದು. ಈ ಸಮಾನಾತ್ಮವೇ ಅವರ ಸ್ನೇಹವನ್ನು ಸ್ಥಾಯಿಯಾಗಿಟ್ಟ ಶಕ್ತಿ. ಮಂತ್ರಿಮಂಡಲದ ಒಂದು ವರ್ಗದ ವಿರೋಧವಿದ್ದರೂ ಮೆನನ್ನರನ್ನು ಮಂತ್ರಿ ಮಂಡಲದೊಳಗೆ ತಂದ ಶಕ್ತಿ ಇದೇ. ನೆಹರೂರ ಸ್ವಭಾವದಲ್ಲಿ ಇಲ್ಲದ್ದು ಮೆನನ್ನರಲ್ಲಿದೆ, ಮೆನನ್ನರಲ್ಲಿಲ್ಲದ್ದು ನೆಹರೂರಲ್ಲಿದೆ. ಒಂದಕ್ಕೊಂದು ಪೂರಕವಾಗಿರುವ ಅವರ ವ್ಯಕ್ತಿತ್ವಗಳು ಜಾಗತಿಕ ರಾಜಕಾರಣದಲ್ಲಿ ಒಂದು ಶಾಂತಿಪರವಾದ ಅಯಸ್ಕಾಂತ ಕ್ಷೇತ್ರವನ್ನು ನಿರ್ಮಿಸಿವೆ. ಭಾರತದ ಹೃದಯ ಮತ್ತು ಬುದ್ಧಿ ಒಂದೆಡೆ ಕೂಡಿದಂತಾಗಿದೆ. ಈ ಜೋಡಿಯಿಲ್ಲದಿದ್ದರೆ ಸುಯೇಜದ ಕಾಲುವೆಯಲ್ಲಿ ರಕ್ತ ಇಷ್ಟರಲ್ಲೇ ಹರಿಯಬಹುದಾಗಿತ್ತು.

## ಪ್ರೇರಣೆ

ಜ್ಯೋತಿಷಿಯೊಬ್ಬ ಒಮ್ಮೆ "ಈ ಊರಿನಲ್ಲಿ ಇನ್ನು ೧೨ ವರ್ಷಗಳ ವರೆಗೆ ಮಳೆಯೇ ಆಗುವುದಿಲ್ಲ" ಎಂದು ಭವಿಷ್ಯ ಹೇಳಿದ.

ಜ್ಯೋತಿಷಿಯ ಭವಿಷ್ಯವನ್ನು ಕೇಳಿದ ಓರ್ವ ರೈತ ಯೋಚಿಸಿದ. "ಹನ್ನೆರಡು ವರ್ಷಗಳ ವರೆಗೆ ಮಳೆಯಾಗದಿದ್ದರೆ ನನಗೆ ಒಕ್ಕಲತನದ ಕೆಲಸವೇ ಮರೆತು ಹೋದೀತು."

ತನಗೆ ಅಂಥ ಮರೆವಾಗದಿರಲಿ ಎಂದು ಆ ರೈತ ಗುದ್ದಲಿ ತೆಗೆದುಕೊಂಡು ಒಣಗಿದ ಭೂಮಿಯನ್ನೇ ಕಡಿಯತೊಡಗಿದ.

ಆಕಾಶ ಮಾರ್ಗದಲ್ಲಿ ತೇಲಿ ಹೋಗುತ್ತಿದ್ದ ಮೋಡಗಳಿಗೆ ರೈತ ಒಣಗಿದ ಹೊಲವನ್ನು ಕಡಿಯುವದನ್ನು ಕಂಡು ವಿಚಿತ್ರವೆನಿಸಿತು. ಆಶ್ಚರ್ಯವಾಯಿತು. ಒಂದು ಮೋಡ ಅವನ ಬಳಿಗೆ ಬಂದು ಅವನಿಂದ ಕಾರಣವನ್ನು ಕೇಳಿಕೊಂಡಿತು.

ರೈತನ ಮಾತು ಕೇಳಿ ಮೋಡಕ್ಕೂ ಒಂದು ವಿಚಾರ ಬಂತು. "ಹನ್ನೆರಡು ವರ್ಷ ನಾನು ಮಳೆಗೆರೆಯದಿದ್ದರೆ ನನಗೂ ಮಳೆಗರೆಯುವದೇ ಮರೆತು ಹೋದೀತಲ್ಲ!"

ಮತ್ತೇನು? ಮುಂದೆ ಎಲ್ಲ ಮೋಡಗಳೂ ಸಂತತ ಧಾರೆಯಿಂದ ಮಳೆ ಸುರಿಸಿದವು.

—ಜಪಾನಿ ಜಾನಪದ ಕಥೆ

# ದೇಶೀ ಸಂಸ್ಥಾನಗಳ ಉತ್ತರಪೂಜೆ

ಈ ನವಂಬರ ೧ ರಂದು ಭಾರತದ ಎಲ್ಲ ದೇಶೀ ಸಂಸ್ಥಾನಿಕರು ತಮ್ಮ ಅಧಿಕಾರವನ್ನು ಸಂಪೂರ್ಣವಾಗಿ ಕಳೆದುಕೊಂಡು ಭಾರತದ ಸಾಮಾನ್ಯ ನಾಗರಿಕರ ಮಟ್ಟಕ್ಕೆ ಬರುವರು. ಭಾರತದ ರಾಜಕೀಯ ಇತಿಹಾಸದಲ್ಲಿ ನರೇಂದ್ರರನ್ನು ಕುರಿತ ಸಂಪುಟವು ಮುಚ್ಚಿದಂತಾಯಿತು. ಅದು ಇನ್ನೊಮ್ಮೆ ತೆರೆಯುವ ಸಂಭವವಿಲ್ಲ.

ಬ್ರಿಟಿಶರು ಈ ದೇಶದಲ್ಲಿ ತಳವೂರಿದ ನಂತರದ ನಮ್ಮ ದೇಶೀ ರಾಜರ ಚರಿತ್ರೆ ರಾಜಕೀಯ ಚಾಣಾಕ್ಷತನದಲ್ಲಾಗಲಿ ಸ್ವಾಭಿಮಾನ ದೇಶಾಭಿಮಾನಗಳಲ್ಲಾಗಲಿ ಒಟ್ಟಿನ ಮೇಲೆ ಅಷ್ಟು ಅಭಿನಂದನಾರ್ಹವಾಗಿದ್ದಿಲ್ಲೆಂದು ವಿಷಾದದಿಂದ ಹೇಳಬೇಕಾಗಿದೆ. ಇದಕ್ಕೆ ಹಲಕೆಲವು ಅಪವಾದಗಳಿದ್ದವೆಂಬುದು ನಿಜವಾಗಿದ್ದರೂ ತಮ್ಮ ಸ್ವಾಭಿಮಾನಕ್ಕೆ ಮೇಲಿಂದ ಮೇಲೆ ಬ್ರಿಟಿಶರಿಂದ ಬಂದ ಆಘಾತಗಳನ್ನು ಬಹು ಜನ ನರೇಂದ್ರರು ಹೇಡಿತನದಿಂದ ನುಂಗಿಕೊಂಡರು.

ಬ್ರಿಟಿಶರ ಕೊನೆಯ ವರ್ಷಗಳಲ್ಲಿ ದೇಶಕ್ಕೆ ಬರಲಿದ್ದ ಸ್ವಾತಂತ್ರ್ಯದ ಉದಯವನ್ನು ಕೆಲಕಾಲ ತಡೆಯಲು ಕೂಡ ಅವರು ಕಾರಣರಾದರು. ೧೮೭೭ ರಲ್ಲಿ ವೈಸರಾಯರಾದ ಲಾರ್ಡ್ ಲಿನ್‌ಲಿತ್‌ಗೋರವರು ಭಾರತದಲ್ಲಿ ಬ್ರಿಟಿಶ ಪ್ರಭುತ್ವದ ಭದ್ರತೆಗೆ ದೇಶೀ ಸಂಸ್ಥಾನಗಳ ಅಸ್ತಿತ್ವ ಅತ್ಯಗತ್ಯವಾಗಿದೆಯೆಂದು ಹೇಳಿದಾಗ ಅವರು ನರೇಂದ್ರರ ಮುಖಸ್ತುತಿ ಮಾಡುತ್ತಿರದೆ ಸತ್ಯವನ್ನೇ ಹೇಳಿದ್ದರು.

ಬ್ರಿಟಿಶ ಈಸ್ಟ್ ಇಂಡಿಯಾ ಕಂಪನಿಯ ಆಶ್ರಿತರಾಗಿ ಬಿಟ್ಟರೆ ಮುಂದೆ ಯಾವ ಚಿಂತೆಯೂ ಇಲ್ಲೆಂದು ಸಂಸ್ಥಾನಿಕರು ಬಗೆದಿದ್ದ ಕಾಲವೊಂದಿತ್ತು. ೧೮೪೮ ರಲ್ಲಿ ಗವರ್ನರ ಜನರಲ್ ಲಾರ್ಡ್ ಡಾಲ್‌ಹೌಸಿಯು ಸಂಸ್ಥಾನಿಕರ ದತ್ತಕಹಿಡಿಯುವ ಹಕ್ಕಿಗೆ ಕೊಡಲಿ ಹಾಕಲೆಳ

"ಸಂಯುಕ್ತ ಕರ್ನಾಟಕ"ದ ಲೇಖದ ರೂಪಾಂತರ

ಸಿದ್ದರಿಂದ ತಮ್ಮ ಸಾರ್ವಭೌಮಾಧಿಕಾರವು ಬರಿಯ ಭ್ರಮೆಯೆಂದು ನರೇಂದ್ರರಿಗೆ ಸ್ಪಷ್ಟವಾಯಿತು.

ಆದರೂ ೧೮೫೭ ರ ಸಿಪಾಯಿಗಳ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಒಗ್ಗಟ್ಟಾಗಿ ಧುಮುಕಲು ನರೇಂದ್ರರು ಮನಸು ಮಾಡಲಿಲ್ಲ. ದಕ್ಷಿಣದ ಕೆಲ ಸಂಸ್ಥಾನಿಕರಷ್ಟೇ ವಿಫಲವಾದ ಹೋರಾಟ ನಡೆಸಿ ನಷ್ಟರಾದರು.

ಬಂಡಾಯದ ನಂತರ ೧೮೫೮ ರಲ್ಲಿ ವಿಕ್ಟೋರಿಯಾ ರಾಣಿ ಕೊಟ್ಟ ಆಶ್ವಾಸನದ ಮೇರೆಗೆ ದೇಶೀ ಸಂಸ್ಥಾನಗಳ ಒಳ ಆಡಳಿತದಲ್ಲಿ ಕೈಹಾಕುವುದನ್ನು ಬ್ರಿಟಿಶರು ನಿಲ್ಲಿಸಿದರು. ಇದರಿಂದ ಸಂಸ್ಥಾನಿಕರಿಗೆ ಭದ್ರತೆಯೇನೋ ಸಿಕ್ಕಿತಾದರೂ ಅವರ ನಿಜವಾದ ಅಧಿಕಾರ-ಸ್ಥಾನಮಾನಗಳು ಬೆಳಗಿನ ನೆರಳಿನಂತೆ ಇಳಿಯುತ್ತ ಹೋದವು; ಅವರ ಸ್ವಚ್ಛಂದ ಸುಖಲೋಲುಪತೆಯು ಸಂಜೆಯ ನೆರಳಿನಂತೆ ವರ್ಧಿಸುತ್ತ ಸಾಗಿತು.

ಬ್ರಿಟಿಶರ ಕಾಲದಲ್ಲಿ ಎಲ್ಲ ಸಂಸ್ಥಾನಗಳಲ್ಲಿ ಬ್ರಿಟಿಶ ಪ್ರಭುತ್ವದ ಪ್ರತಿನಿಧಿಯಾದ ರೆಸಿಡೆಂಟನು ದೇಶಿ ಸಂಸ್ಥಾನಿಕರಿಗಿಂತ ಹೆಚ್ಚಿನ ಅಧಿಕಾರ ಪಡೆದವನಾದನು. ಮೊದಲು ದೇಶೀ ಸಂಸ್ಥಾನಿಕರ ಸ್ಥಾನಮಾನವು ಅವರಿಗಿರುವ ತೋಫುಗಳ ಸಲಾಮಿಯ ಸಂಖ್ಯೆಯನ್ನು ಅವಲಂಬಿಸಿತ್ತು. ೧೮೭೭ ರಲ್ಲಿ ವಿಕ್ಟೋರಿಯಾ ಮಹಾರಾಣಿಯು ಹಿಂದುಸ್ಥಾನದ ಚಕ್ರವರ್ತಿನಿ ಎಂಬ ಪದವಿಯನ್ನು ಧರಿಸುವವರೆಗೆ ಇದು ಜಾರಿಯಲ್ಲಿದ್ದಿತು. ಹೈದರಾಬಾದ ನಿಜಾಮರಿಗೆ ಮಾತ್ರ ಆಗ ೨೧ ತೋಫುಗಳ ಸಲಾಮಿಯ ಗೌರವ ವಿದ್ದಿತು. ಸಿಂಧ್ಯ ಮತ್ತು ಹೋಳಕರರಿಗೆ ತಮ್ಮ ಸಂಸ್ಥಾನಗಳಲ್ಲಿ ವೈಸರಾಯರಿಗಿಂತ ಹೆಚ್ಚಿನ, ಸಂಸ್ಥಾನಗಳ ಹೊರಗೆ ವೈಸರಾಯರಿಗೆ ಸಮಾನವಾದ ಸ್ಥಾನಮಾನ ೧೮೭೭ರ ವರೆಗೆ ಇದ್ದಿತು. ಆದರೆ ೧೮೭೭ರಲ್ಲಿ ಸಿಂಧ್ಯ ಮತ್ತು ಹೋಳಕರರು ಈ ಹಕ್ಕು ಬಾಧ್ಯತೆಗಳನ್ನು ಬಿಟ್ಟುಕೊಡಬೇಕಾಯಿತು.

೧೮೯೭ ರಲ್ಲಿ ವಿಕ್ಟೋರಿಯಾ ಮಹಾರಾಣಿಯ ರಾಜ್ಯಾರೋಹಣದ ರಜತಮಹೋತ್ಸವವು ನಡೆಯಿತು. ಬ್ರಿಟಿಶ ಸಾಮ್ರಾಜ್ಯದ ಇತಿಹಾಸದಲ್ಲಿಯೇ ಇದು ಮಹತ್ವದ ಘಟನೆಯಾಗಿ ಪರಿಣಮಿಸಿತು. ಈ ಸಮಾರಂಭದಲ್ಲಿ ಭಾಗವಹಿಸಲು ದೇಶೀ ಸಂಸ್ಥಾನಿಕರು ಇಂಗ್ಲಂಡಿಗೆ ಪ್ರಯಾಣ ಬೆಳೆಸಿದ್ದರು.

ಈ ಸಮಾರಂಭದ ಕಾಲಕ್ಕೆ ವಿಕ್ಟೋರಿಯಾ ಮಹಾರಾಣಿಯು ವಿಂಡಸರ ಅರಮನೆಯಲ್ಲಿ ದೇಶೀ ಸಂಸ್ಥಾನಿಕರನ್ನು ಸ್ವಾಗತಿಸಿ ಹಿಂದುಸ್ಥಾನದ ಬಗ್ಗೆ ತನಗಿರುವ ಗೌರವದ ಪ್ರತೀಕವಾಗಿ ಹಿಂದುಸ್ತಾನಿ ಭಾಷೆಯಲ್ಲಿ ಭಾಷಣ ಮಾಡಿದಳು.

ಸಮಾರಂಭಕ್ಕೆ ಆಗಮಿಸಿದ ಎಲ್ಲ ಸಂಸ್ಥಾನಿಕರಿಗೆ ಅವಳು ಎನಾಮಲ್‌ದಲ್ಲಿ ಕೆತ್ತಿದ ತನ್ನ ಚಿತ್ರದ ಪದಕಗಳನ್ನು ಕಾಣಿಕೆಯಾಗಿ



ಕೊಟ್ಟಳು. ಇದಕ್ಕೆ ಪ್ರತಿಯಾಗಿ ಬಿಕಾನೇರ ಮಹಾರಾಜರಾದ ಸರ್ ಪ್ರತಾಪಸಿಂಗರು ತಮ್ಮ ಖಡ್ಗವನ್ನು ರಾಣಿಯ ಪಾದಗಳ ಮುಂದೆ ಇಟ್ಟು "ನನ್ನ ಸಂಪತ್ತೆಲ್ಲವೂ ತಮ್ಮ ಅಡಿದಾವರೆಗಳ ಸೇವೆಗೆ ಮೀಸಲು" ಎಂದು ಹೇಳಿ ತಮ್ಮ ಕಿರೀಟದಲ್ಲಿಯ ಮುತ್ತಿನ ಆಭರಣವನ್ನು ರಾಣಿಗೆ ಕಾಣಿಕೆಯಾಗಿ ಅರ್ಪಿಸಿದರು.

ಕೂಚಬಿಹಾರದ ಮಹಾರಾಣಿಯು ವಜ್ರ ಖಚಿತ ಆಭರಣವನ್ನು ವಿಕ್ಟೋರಿಯಾ ಮಹಾರಾಣಿಗೆ ಉಡುಗೊರೆ ಕೊಟ್ಟಳು.

ವಿಂಡಸರ ಅರಮನೆಯಿಂದ ಮಹಾರಾಣಿಯು ಹೊರಗೆ ಬರುತ್ತಲೇ ಚಿನ್ನದ ಚಿಲಕತ್ತು ಧರಿಸಿ ಅಶ್ವಾರೂಢರಾಗಿ ಬಂದ ಮೊರಾರದ ಠಾಕೂರ ಸಾಹೇಬರು ಕುದುರೆಯಿಂದ ಇಳಿದು ಮಹಾರಾಣಿಗೆ ಚಿಲಕತ್ತನ್ನೂ ಕುದುರೆಯನ್ನೂ ಸ್ವೀಕರಿಸಬೇಕೆಂದು ಬೇಡಿಕೊಂಡರು.

ಬ್ರಿಟಿಶ ದರಬಾರದಲ್ಲಿ ಅನುಸರಿಸಬೇಕಾದ ಕೆಲವೊಂದು ಸಂಪ್ರದಾಯಗಳನ್ನು ಪಾಲಿಸಲೇ ಬೇಕೆಂಬ ನಿರ್ಬಂಧವನ್ನು ಸಂಸ್ಥಾನಿಕರ ಮಟ್ಟಿಗೆ ಸಡಿಲಿಸಲಾಯಿತು. ಉದಾಹರಣಾರ್ಥ ಸರ್ ಪದವಿಯನ್ನು ಸ್ವೀಕರಿಸುವಾಗ ಬ್ರಿಟಿಶ ಸಾರ್ವಭೌಮನ ಮುಂದೆ ಮೊಳಕಾಲೂರಿ ಕುಳಿತು ಅದನ್ನು ಸ್ವೀಕರಿಸಬೇಕೆಂಬ ಸಂಪ್ರದಾಯವಿದ್ದು ಸಂಸ್ಥಾನಿಕರು ಈ ಪದವಿ ಸ್ವೀಕರಿಸುವಾಗ ಮೊಳಕಾಲೂರಿ ಕುಳಿತುಕೊಳ್ಳಬೇಕೆಂಬ ವಿಧಿಯಿಂದ ಮುಕ್ತಗೊಳಿಸಲಾಗಿತ್ತು.

ಆದರೆ ಜರಬರುತ್ತ ಸಂಸ್ಥಾನಿಕರಿಗೆ ಅನೇಕ ಅವಮಾನಗಳನ್ನು ಅನುಭವಿಸುವ ಗತಿ ಪ್ರಾಪ್ತವಾಯಿತು.

ಬ್ರಿಟನ್ನದಲ್ಲಿ ಸಾರ್ವಭೌಮರನ್ನು ಕಾಣಲು ಸಂಸ್ಥಾನಿಕರು ಹೋದಾಗ ದರಬಾರದ ಉಡುಪು ತೊಡಪುಗಳಲ್ಲಿ ಹೋಗತಕ್ಕದ್ದೆಂಬ ಸಂಪ್ರದಾಯವನ್ನು ಪಾಲಿಸುವದು ಅನಿವಾರ್ಯವಾಯಿತು. ವಿಂಡಸರ ಅರಮನೆಯಲ್ಲಿ ಏರ್ಪಡಿಸಿದ ಭೋಜನ ಸಮಾರಂಭದಲ್ಲಿ ಓರ್ವ ಮಹಾರಾಜನು ತನಗಿರುವ ವಿವಿಧ ಬಿರುದು ಬಾವಲಿಗಳನ್ನು ಅಸ್ತವ್ಯಸ್ತವಾಗಿ ಧರಿಸಿದ್ದನ್ನು ಐದನೇ ಜಾರ್ಜ ಬಾದಶಹನು ನೋಡಿ ಈ ಬಗೆಯ ದುರ್ಲಕ್ಷ್ಯಕ್ಕಾಗಿ ಅಲ್ಲಿಯೇ ಆ ಮಹಾರಾಜನನ್ನು ಜರೆದು ಮಾತನಾಡಿದನು.

೧೯೧೧ ರಲ್ಲಿ ನಡೆದ ದಿಲ್ಲಿ ದರಬಾರವು ದಿಲ್ಲಿಯಲ್ಲಿ ನೂರಾರು ವರ್ಷಗಳಲ್ಲಿ ನಡೆದ ಸಮಾರಂಭಗಳಲ್ಲಿ ಅತ್ಯಂತ ವೈಭವಶಾಲಿ ಸಮಾರಂಭವಾಗಿ ಪರಿಣಮಿಸಿತು. ಈ ದರಬಾರದಲ್ಲಿ ೧೬೧ ಸಂಸ್ಥಾನಿಕರು ಉಪಸ್ಥಿತರಾಗಿದ್ದರು. ಪ್ರತಿಯೊಬ್ಬ ಸಂಸ್ಥಾನಿಕನು ಉಳಿದವರಿಗಿಂತ ತಾನೇ ಹೆಚ್ಚು ಆಕರ್ಷಕವಾಗುವಂತೆ ತನ್ನ ಸಂಪತ್ತಿನ ಪ್ರದರ್ಶನ ನಡೆಸಲು ಸ್ಪರ್ಧೆ ನಡೆಸಿದ್ದರಿಂದ ಇಡೀ ಸಮಾರಂಭವು ವೈಭವದ ಪ್ರದರ್ಶನವಾಗಿ ಮಾರ್ಪಟ್ಟಿತು.

ಉದಯಪುರದ ಮಹಾರಾಣಾರು ತಾವು ಸಿಸೋದಿಯಾ ವಂಶದ ಕ್ಷತ್ರಿಯರಾದುದರಿಂದ



ಮೆರವಣಿಗೆಯಲ್ಲಿ ಹೈದರಾಬಾದ ನಿಜಾಮರ ಹಿಂದಿನಿಂದ ನಡೆಯಲು ನಿರಾಕರಿಸಿದರು. ಇದನ್ನು ಲಕ್ಷಿಸಿ ಅವರನ್ನು ಚಕ್ರವರ್ತಿಯ ಮುಖ್ಯ ಅಂಗ ರಕ್ಷಕರನ್ನಾಗಿ ಮಾಡಲಾಯಿತು. ಇದರಿಂದ ಮೆರ ವಣಿಗೆಯಲ್ಲಿ ಉಳಿದ ಸಂಸ್ಥಾನಿಕರಂತೆ ತಮ್ಮ ಅಂತಸ್ತಿಗನುಸಾರ ನಿರ್ಧರಿಸಲ್ಪಟ್ಟ ರೀತಿಯಲ್ಲಿ ಹೋಗುವದನ್ನು ಇವರ ಮಟ್ಟಿಗೆ ತಪ್ಪಿಸಲಾಯಿತು. ಇದಲ್ಲದೆ ದರಬಾರ ಭವನದಲ್ಲಿ ಛತ್ರ ಚಾಮರಗಳ ಸಮೇತ ಕುಳಿತುಕೊಳ್ಳಲು ಇವರಿಗೆ ಮಾತ್ರ ಅವಕಾಶ ಕೊಡಲಾಯಿತು.

ದರಬಾರ ಭವನದಲ್ಲಿ ಚಕ್ರವರ್ತಿಗೆ ವಂದನೆಗಳನ್ನು ಸಮರ್ಪಿಸಿ ಮರಳುವಾಗ ಯಾವ ಸಂಸ್ಥಾನಿಕನೂ ಚಕ್ರವರ್ತಿಗೆ ತನ್ನ ಬೆನ್ನು ತೋರಿಸಲಾಗದು ; ಚಕ್ರವರ್ತಿಯ ಕಡೆಗೆ ನೋಡುತ್ತಲೇ ಹಿಂದಕ್ಕೆ ಸರಿಯುತ್ತ ತಮ್ಮ ಆಸನಗಳ ವರೆಗೆ ಹೋಗತಕ್ಕದ್ದು ಎಂದು ವಿಧಿಸಲಾಗಿತ್ತು. ಈ ಸೂಚನೆಗೆ ಬಡೋದೆಯ ಗಾಯಕವಾಡರನ್ನು ಬಿಟ್ಟು ಉಳಿದೆಲ್ಲ ಸಂಸ್ಥಾನಿಕರೂ ಒಪ್ಪಿಕೊಂಡಿದ್ದರು. ದರಬಾರದಲ್ಲಿ ನಡೆದುಕೊಳ್ಳುವ ಸಂಪ್ರದಾಯದ ಬಗ್ಗೆ ಯಾರನ್ನೂ ಅಪವಾದವೆಂದು ಗಣಿಸಲಾಗುವದಿಲ್ಲವೆಂದು ಗಾಯಕವಾಡರಿಗೆ ಮುನ್ನೆಚ್ಚರಿಕೆಯನ್ನು ಕೊಡಲಾಯಿತು.

ದರಬಾರದ ದಿನವು ಸಮೀಪಿಸುತ್ತಲೇ ಗಾಯಕವಾಡರು ದರಬಾರದಲ್ಲಿ ಯಾವ ರೀತಿ ನಡೆದುಕೊಳ್ಳಬಹುದೆಂಬ ಬಗ್ಗೆ ಊಹಾಪೋಹ ನಡೆಯಿತು. ದರಬಾರದ ಆ ಮಹಾದಿನವು ಬಂದಿತು. ದರಬಾರದಲ್ಲಿ ಮಹಾರಾಜರು ಒಬ್ಬೊಬ್ಬರಾಗಿ ಬ್ರಿಟಿಶ ಚಕ್ರವರ್ತಿಯ ಮುಂದೆ ತಮ್ಮ ಖಡ್ಗವನ್ನು ಇಟ್ಟು ಚಕ್ರವರ್ತಿಗೆ ನಿಷ್ಠರಾಗಿ ಉಳಿಯುವದಾಗಿ ಸಾರಿ ಆಸನದ ವರೆಗೆ ಹಿಂದಕ್ಕೆ ಸರಿಯುತ್ತ ಬಂದರು.

ಬಡೋದೆಯ ಗಾಯಕವಾಡರ ಸರತಿಯು ಬಂದಿತು. ಗಾಯಕವಾಡರು ಧೈರ್ಯದಿಂದ ಮುಂದೆ ಹೋಗಿ ಚಕ್ರವರ್ತಿಗೆ ಮನಸ್ಸಿಲ್ಲದ ಮನಸ್ಸಿನಿಂದ ವಂದನೆ ಸಲ್ಲಿಸಿ ಸರ್‍ರನೆ ತಿರುಗಿ ನೇರವಾಗಿ ತಮ್ಮ ಆಸನದತ್ತ ಹೊರಟದ್ದನ್ನು ನೋಡಿ ದರಬಾರದಲ್ಲಿ ಎಲ್ಲರೂ ಗಾಬರಿಯಿಂದ ಅವರತ್ತ ನೆಟ್ಟ ದೃಷ್ಟಿಯಿಂದ ನೋಡತೊಡಗಿದರು.

ಜಾರ್ಜ ಅರಸರಿಗೆ ಈ ಔದ್ಧತ್ಯವನ್ನು ಕಂಡು

**ನಿಜಾಮರ ಬಡತನ !**

ನಿಜಾಮರ ಸಂಪತ್ತು ಒಂದು ಸಾವಿರ ಕೋಟಿ ರೂಪಾಯಿ ಬೆಲೆ ಬಾಳಬಹುದೆಂದು ಅಂದಾಜಿದೆ. ಅವರಲ್ಲಿರುವ ಮುತ್ತುಗಳೇ ಒಂದು ದೊಡ್ಡ ಕೆರೆಯನ್ನು ತುಂಬುವಷ್ಟಾಗಬಹುದಂತೆ.

ಆದರೆ ನಿಜಾಮರು ಮಹಾ ಜಿಪುಣ. ಒಮ್ಮೆ ಅವರು ತಮ್ಮ ಮುತ್ತುಗಳನ್ನೆಲ್ಲ ಎಣಿಸಿ ಬೆಲೆ ಕಟ್ಟಲು ಒಬ್ಬ ತಜ್ಞರನ್ನು ಕರೆಸಿದರಂತೆ. ಕೆಲ ದಿನಗಳ ನಂತರ ನಿಜಾಮರು “ ಮುತ್ತುಗಳ ಬೆಲೆ ಕಟ್ಟಲು ಎಷ್ಟು ದಿನ ಬೇಕಾದೀತು ? ” ಎಂದು ಕೇಳಿದರು. ತಜ್ಞ “ ಎರಡು ವರ್ಷ ” ಎಂದ.

“ ಹಾಗಾದರೆ ಬೇಡ ಮಹಾರಾಯಾ. ಅಷ್ಟು ದಿನ ಸಂಬಳ ಕೊಡಲು ನನಗೆ ಶಕ್ತಿಯಿಲ್ಲ ! ” ಎಂದರಂತೆ ನಿಜಾಮರು.

ನಿಜಾಮರು ತರುಣರಿದ್ದಾಗ ಒಮ್ಮೆ ಒಂದು ರಾತ್ರಿಯ ಮಟ್ಟಿಗೆ ರಾಮಪುರ ನವಾಬರಲ್ಲಿಗೆ ಹೋದರಂತೆ. ಸಂಗಡ ಅವರ ಇನ್ನೂರು ಜನ ಜನಾನಾ ಹೆಂಡಂದಿರಿದ್ದರು. “ ಈ ಮಹಿಳೆಯರಿಗೆ ಹೆಚ್ಚು ಹೊರಗೆ ಹೋಗುವುದಾಗುವುದಿಲ್ಲ. ಅದಕ್ಕಾಗಿ ಇದೊಂದು ಸಲವಾದರೂ ‘ ಔಟಿಂಗ್ ’ ಆಗಲಿ ಎಂದು ಕರಕೊಂಡು ಬಂದೆ ” ಎಂದರಂತೆ ನಿಜಾಮರು ನವಾಬರಿಗೆ.

ಸಿಟ್ಟು ಬಂದಿತು. ಆದರೆ ವಿಚಾರ ಮಾಡಿದ ನಂತರ ಗಾಯಕವಾಡರ ಮೇಲೆ ಈ ಬಗ್ಗೆ ಕ್ರಮ ಕೈಕೊಳ್ಳಕೂಡದೆಂದು ನಿರ್ಧರಿಸಿದರು. ಹಿಂದಿನಿಂದ ಗಾಯಕವಾಡರು ವೈಸರಾಯರಿಗೆ ಪತ್ರ ಬರೆದು ತಮ್ಮ ಪ್ರಕೃತಿ ಸರಿಯಾಗಿ ಇಲ್ಲದ್ದರಿಂದ ಆ ರೀತಿ ನಡೆದುಕೊಂಡ ಬಗ್ಗೆ ಕ್ಷಮೆ ಕೋರಿದರು. ಆದರೆ ಗಾಯಕವಾಡರು ದರಬಾರದಲ್ಲಿ ನಡೆದುಕೊಂಡ ರೀತಿಯ ಬಗ್ಗೆ ಅವರನ್ನು ಬ್ರಿಟಿಶ ಪ್ರಭುತ್ವವು ಎಂದೂ ಕ್ಷಮಿಸಲಿಲ್ಲ.

ಬ್ರಿಟಿಶ ಅರಸರಿಗಿಂತ ಹೆಚ್ಚು ವೈಭವದ ಪ್ರದರ್ಶನ ಮಾಡುವ ಸಂಸ್ಥಾನಿಕರ ಆಗಮನದಿಂದ ಬ್ರಿಟಿಶ ಅರಸರಿಗೆ ಅಸಮಾಧಾನವಾಗುತ್ತಿದ್ದಿತು. ಬಕಿಂಗಹ್ಯಾಮ ಅರಮನೆಗಿಂತ ಭವ್ಯವಾದ ಅರಮನೆಗಳನ್ನು ಕಟ್ಟಿಸಿ ಅಲ್ಲಿ ವಾಸಿಸುತ್ತಿರುವ ಹೈದರಾಬಾದ ನಿಜಾಮ, ಜಯಪುರದ ಮಹಾರಾಜರಂಥ ಅತಿಥಿಗಳನ್ನು ಸ್ವಾಗತಿಸಬೇಕಾಗುವದರಿಂದ ಭವ್ಯವಾದ ಸರಕಾರೀ ಭವನವನ್ನು ಕಟ್ಟಿಸುವದು ಅಗತ್ಯವೆಂದು ವೈಸರಾಯರು ವಾದಿಸಿ ದಿಲ್ಲಿಯಲ್ಲಿ ೫೪೦ ಕೋಣೆಗಳುಳ್ಳ ಭವ್ಯವಾದ ಸರಕಾರೀ ಭವನವನ್ನು ಕಟ್ಟಿಸಿದರೆಂದು ಹೇಳಲಾಗುತ್ತದೆ. ( ಇಂದಿದು ರಾಷ್ಟ್ರಪತಿ ಭವನವಾಗಿದೆ).

ಬ್ರಿಟಿಶ ಅಧಿಕಾರಿಗಳು ಹಾಗೂ ಹಿಂದುಸ್ತಾನದಲ್ಲಿಯ ಬ್ರಿಟಿಶ ವರ್ತಕರು ಸಂಸ್ಥಾನಿಕರನ್ನು ತೀರ ಕೀಳಾಗಿ ಕಾಣುತ್ತಿದ್ದರು. ಮುಂಬಯಿ, ಕಲಕತ್ತಾಗಳಲ್ಲಿಯ ಯುರೋಪಿಯನರ ಕ್ಲಬ್ಬುಗಳಲ್ಲಿ ಸಂಸ್ಥಾನಿಕರಿಗೆ ಸಹ ಪ್ರವೇಶನಿರ್ಬಂಧವಿದ್ದಿತು.

ಬಿಕಾನೇರದ ಮಹಾರಾಜರಿಗೆ ಮುಂಬಯಿಯ ಯುರೋಪಿಯನ್ ಕ್ಲಬ್ಬಿನ ಸೆಕ್ರೆಟರಿಯು "ಸಾಮಾನ್ಯವಾಗಿ ಹಿಂದುಸ್ತಾನದ ಜನರಿಗೆ ಕ್ಲಬ್ಬಿನಲ್ಲಿ ಪ್ರವೇಶದ ಅವಕಾಶವಿಲ್ಲ. ಆದರೆ ನಿಮಗೆ ಅವಕಾಶ ಕೊಡಲಡ್ಡಿಯಿಲ್ಲ" ಎಂದು ತಿಳಿಸಿದಾಗ ಅವರು ' ಈ ಬಗ್ಗೆ ನಿಮಗೆ ಆಭಾರಿಯಾಗಿದ್ದೇನೆ. ನಾನು ಬಕಿಂಗಹ್ಯಾಮ ಅರಮನೆಯಲ್ಲಿ ನಿಮ್ಮ ಅರಸನೊಡನೆ ಊಟಮಾಡಿ ಬಂದವನಿರುವೆ. ನಿಮ್ಮ ಕ್ಲಬ್ಬಿನ ಅಗತ್ಯ ನನಗೇನೂ ಇಲ್ಲ" ಎಂದು ಉತ್ತರ ಕೊಟ್ಟರು.

ಬ್ರಿಟಿಶ ಪ್ರಾಂತಗಳಲ್ಲಿ [illegible] ಸ್ವಾತಂತ್ರ್ಯದ [illegible] ಸಂಸ್ಥಾನಗಳಲ್ಲಿಯೂ [illegible]. ಆದರೆ ಸಂಸ್ಥಾನಿಕರು [illegible]

---

## ದುಂದುಗಾರಿಕೆ

ಅನೇಕ ನರೇಂದ್ರರು ಬೊಕ್ಕಸದ ಹಣದಿಂದ ತಮ್ಮ ಖಾಸಗಿ ದುಂದುಗಾರಿಕೆಗೆ ಹಣ ಪೂರೈಸಿಕೊಳ್ಳುತ್ತಿದ್ದರು. ದುಂದಿನ ಕೆಲ ಉದಾಹರಣೆಗಳು :

* ಒಬ್ಬ ಮಹಾರಾಜನು ಒಂದು ಭೋಜನ ಕೂಟದಲ್ಲಿ ಪ್ರತಿಯೊಬ್ಬ ಅತಿಥಿಗೂ ತಾಟಿನ ಬಳಿ ಒಂದೊಂದು ಸಿಗರೇಟು ಪೆಟ್ಟಿಗೆ ಇರಿಸಿದ್ದ. ಅವೆಲ್ಲ ಅಚ್ಚ ಬಂಗಾರದವಿದ್ದವಲ್ಲದೆ ಪ್ರತಿಯೊಂದರ ಮೇಲೆ ಆಯಾ ಅತಿಥಿಯ ಹೆಸರನ್ನು ಕೆತ್ತಲಾಗಿತ್ತು.

* ಇನ್ನೊಬ್ಬ ಮಹಾರಾಜನು ತನ್ನ ಮಗನ ಹುಟ್ಟಿದ ಹಬ್ಬಕ್ಕೆ ಹತ್ತು ಲಕ್ಷ ರೂಪಾಯಿ ವೆಚ್ಚ ಮಾಡಿದನಂತೆ. ತನ್ನ ಪ್ರತಿಯೊಬ್ಬ ಆಶ್ರಿತನಿಗೂ ಅವನು ಒಂದು ಮನೆ, ಎರಡು ಹೊಸ ಬ್ಯುಕ್ ಕಾರುಗಳು ಮತ್ತು ಅರ್ಧ ಗ್ರಾಮವನ್ನು ಉಡುಗರೆ ಕೊಟ್ಟಿದ್ದ.

* ಮತ್ತೊಬ್ಬ ಮಹಾರಾಜನು ದಿಲ್ಲಿಗೆ ಭೆಟ್ಟಿಯಿತ್ತಾಗ ಒಂದೇ ಸಂಜೆಯಲ್ಲಿ ಒಂದು ಜವಳಿ ಅಂಗಡಿಯಲ್ಲಿ ೪,೦೦,೦೦೦ ರೂಪಾಯಿ ಬೆಲೆಯ ಜವಳಿಯನ್ನೂ ಒಂದು ಬಂದೂಕಿನಂಗಡಿಯಲ್ಲಿ ೬ ಲಕ್ಷ ೫೦ ಸಾವಿರ ರೂಪಾಯಿ ಬೆಲೆಯ ಬೇಟೆಯ ಆಯುಧಗಳನ್ನೂ ಕೊಂಡದ್ದುಂಟು.

ಗಳನ್ನು ತಾವು ಸಹಿಸುವದಿಲ್ಲವೆಂಬುದನ್ನು ಬ್ರಿಟಿಶರಿಗೆ ತೋರಿಸಿಕೊಡಲು ಸ್ವಾತಂತ್ರ್ಯ ಹೋರಾಟದ ಸೈನಿಕರನ್ನು ಅತ್ಯಂತ ಕಠೋರ ರೀತಿಯಲ್ಲಿ ದಂಡಿಸುತ್ತಿದ್ದರು.

ಸ್ವಾತಂತ್ರ್ಯದ ಹೋರಾಟದಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಿದಂಥ ಕಪುರ್ಥಲಾ ರಾಜಮನೆತನ ದಂಥವರೂ ಇಲ್ಲದಿಲ್ಲ. ಕಪುರ್ಥಲಾ ಸಂಸ್ಥಾನದ ಅಧಿಪತಿಗಳಾದ ರಾಜಾ ಹರನಾಮಸಿಂಗರ ಮಗ ಳಾದ ರಾಜಕುಮಾರಿ ಅಮೃತ ಕುವರರು, ತಮ್ಮ ತಂದೆಯು ಅನೇಕ ರಾಷ್ಟ್ರೀಯ ಧುರೀಣರೊಡನೆ, ವಿಶೇಷವಾಗಿ ಗೋಪಾಲಕೃಷ್ಣ ಗೋಖಲೆಯವ ರೊಡನೆ ನಿಕಟವಾದ ಸಂಬಂಧವನ್ನಿಟ್ಟುಕೊಂಡಿ ದ್ದಾಗಿ ಹೇಳಿದ್ದಾರೆ. ಮಹಾತ್ಮಾ ಗಾಂಧಿಯ ವರು ಭಾರತದ ಸಲುವಾಗಿ ಮಹಾಕಾರ್ಯ ಮಾಡಲು ಜನ್ಮ ತಾಳಿದವರೆಂದು ಹರನಾಮರು ಅಭಿಪ್ರಾಯ ತಾಳಿದ್ದರಲ್ಲದೆ ಮಹಾತ್ಮಾ ಗಾಂಧಿ ಯವರನ್ನು ಕಾಣಲು ಹೋಗಬೇಕೆಂದು ಮಗ ಳನ್ನು ಪ್ರೇರೇಪಿಸುತ್ತಿದ್ದರಂತೆ.

ರಾಷ್ಟ್ರೀಯ ಹೋರಾಟದ ಬಗ್ಗೆ ಸಹಾನು ಭೂತಿ ತಳೆದ ಇನ್ನೊಂದು ರಾಜಮನೆತನವು ನಾಭಾದ ರಾಜರದಾಗಿತ್ತು. ಸ್ವಾತಂತ್ರ್ಯ ಆಂದೋಲನದ ಬಗ್ಗೆ ಸಹಾನುಭೂತಿಯುಳ್ಳವ ರಾದುದರಿಂದ ನಾಭಾದ ನರೇಂದ್ರರು ಸಂಸ್ಥಾನದ ಗಾದಿಗೆ ಎರವಾದರು.

೧೯೪೦ ರಲ್ಲಿ ಅಮೇರಿಕೆಯ ಪತ್ರಿಕೋದ್ಯಮಿ ಯಾದ ಲುಯಿ ಫಿಶರರೊಂದಿಗೆ ಮಾತನಾಡು ವಾಗ ದಿವಂಗತ ಶ್ರೀಮತಿ ಸರೋಜಿನಿ ನಾಯಡು ರವರು ಕಾಂಗ್ರೆಸ ಕಾರ್ಯಸಮಿತಿಯೊಡನೆ ಅನೇಕ ಸಂಸ್ಥಾನಿಕರು ಗುಪ್ತವಾಗಿ ಪತ್ರವ್ಯವ ಹಾರ ನಡೆಸುತ್ತಿರುವರೆಂಬ ಹಾಗೂ ಕಾಂಗ್ರೆಸ್ಸಿಗೆ ವಿಶೇಷ ಧನಸಹಾಯ ಮಾಡುತ್ತಿರುವರೆಂಬ ಅಂಶ ವನ್ನು ಬಹಿರಂಗಪಡಿಸಿದರು.

ಸಂಸ್ಥಾನಿಕರ ಕೊನೆಯ ಅಧ್ಯಾಯ ೧೯೪೭ ರಲ್ಲಿ ಭಾರತ ಸ್ವಾತಂತ್ರ್ಯದೊಡನೆ ಪ್ರಾರಂಭ ವಾಗಿ ಒಂಭತ್ತೇ ವರ್ಷದೊಳಗೆ ಪರಿಸಮಾಪ್ತಿ ಹೊಂದಿತು.

ಈ ಅಧ್ಯಾಯವು ಭಾರತದ ಆಧುನಿಕ ಇತಿ ಹಾಸದ ಅತಿ ಮಹತ್ವದ ಅಧ್ಯಾಯಗಳಲ್ಲೊಂ- ದಾಗಿದೆ. ಪರಕೀಯ ಪ್ರಭುತ್ವದ ಬೆಂಬಲ ತಪ್ಪಿದೊಡನೆ ದೇಶೀಯ ನಿರಂಕುಶಾಧಿಕಾರವು ಇಸ್ಪೇಟಿನ ಮನೆಯಂತೆ ಕುಸಿದುಬಿದ್ದಿತು. ಭಾರತಕ್ಕೆ ೧೯೪೭ ಅಗಸ್ಟ ೧೫ ರಂದು ಸ್ವಾತಂತ್ರ್ಯ ದೊರೆತೊಡನೆ ಸಂಸ್ಥಾನಿಕರು ಭಾರತ ಸರಕಾರದ ಅಧೀನದಿಂದ ಮುಕ್ತರಾಗಿ ಸ್ವತಂತ್ರರಾಗುವ ರೆಂದು ಬ್ರಿಟಿಶ ಸರಕಾರವು ಸಾರಿತ್ತು. ಆದರೆ

**ಪೇಪರ-ವೇಟಗೆ ಪಚ್ಚೆರತ್ನ**

**ಭಾರತದ ನರೇಂದ್ರರಲ್ಲಿ ಖಾಸಗಿ ಐಶ್ವರ್ಯ ದಲ್ಲಿ ಹೈದರಾಬಾದ ನಿಜಾಮರು ಎಲ್ಲರಿಗೂ ಮುಂದೆ. ಅನಂತರ ಬಿಕಾನೇರ ಮಹಾ ರಾಜರು ಮತ್ತು ಬಡೋದಾ ಮಹಾ ರಾಜರು ಬರುತ್ತಾರೆ.**

**ಮೂರನೆಯವರಾದ ಬಡೋದಾ ರಾಜರ ವಾರ್ಷಿಕ ಖಾಸಗಿ ಉತ್ಪನ್ನವೇ ಸುಮಾರು ನಾಲ್ಕು ಕೋಟಿ ರೂಪಾಯಿಗಳಾಗಬಹು ದೆಂದು ತರ್ಕಿಸಲಾಗಿತ್ತು.**

**ಹೈದರಾಬಾದ ನಿಜಾಮರ ಸಂಪತ್ತಂತೂ ಅಗಣಿತ. ನ್ಯೂಯಾರ್ಕ ಟೈಮ್ಸಿನ ಸುದ್ದಿ ಗಾರ ರಾಬರ್ಟ ಟ್ರಂಬುಲ್ಲರು ಒಮ್ಮೆ ಹೈದರಾಬಾದದ ಅಧಿಕಾರಿಯೊಬ್ಬನಿಗೆ " ನಿಜಾಮರು ಒಂದು ದೊಡ್ಡ ಕೆತ್ತದಿರುವ ಕಚ್ಚಾ ವಜ್ರವನ್ನು ಮೇಜಿನ ಮೇಲೆ ಪೇಪರ ವೇಟಾಗಿ ಇಟ್ಟುಕೊಳ್ಳುತ್ತಿದ್ದಾರಂತೆ ನಿಜವೆ ? " ಎಂದು ಕೇಳಿದರು.**

**ಆ ಅಧಿಕಾರಿಯ ಉತ್ತರ ಹೀಗಿತ್ತು : " ಸುಳ್ಳೇ ಸುಳ್ಳು. ಅದು ವಜ್ರವಲ್ಲ, ಬರೇ ಪಚ್ಚೆ ರತ್ನ ! "**

ಅವರು ಭಾರತ-ಪಾಕಿಸ್ತಾನಗಳಲ್ಲಿ ಯಾವದೊಂದ ರಲ್ಲಿ ಸೇರ್ಪಡೆ ಹೊಂದುವದೊಳಿತೆಂದೂ ಅದು ಸಲಹೆ ಕೊಟ್ಟಿತ್ತು.

ಕೆಲ ನರೇಂದ್ರರು ಕಾಲಧರ್ಮವನ್ನರಿತು ಹೆಚ್ಚು ತೊಂದರೆ ತೆಗೆದುಕೊಳ್ಳದೆ ಭಾರತದಲ್ಲಿ ಸೇರ್ಪಡೆ ಹೊಂದುವ ಪತ್ರಕ್ಕೆ ಅಂಕಿತ ಹಾಕಿದರು. ಆದರೆ ತಿರುವಾಂಕೂರು, ಭೋಪಾಳ, ಹೈದರಾಬಾದ ಮೊದಲಾದ ಕೆಲ ಸಂಸ್ಥಾನಗಳ ನರೇಂದ್ರರು "ಸ್ವತಂತ್ರ"ರಾಗಲು ಯತ್ನಿಸಿ ನೋಡಿದರು. ಆದರೆ ಅವರು ಎರಡು ಮಗ್ಗಲುಗಳಿಂದ ಹೋರಾಡಬೇಕಾಯಿತು. ಒಂದು ತಮ್ಮ ಅಸಂತೃಪ್ತ ಪ್ರಜೆಗಳೊಡನೆ, ಇನ್ನೊಂದು ಭಾರತ ಸರಕಾರದ ಒತ್ತಾಯದೊಡನೆ. ಕೊನೆಗೆ, ಅವರು ಸೇರ್ಪಡೆಗೆ ಒಪ್ಪಲೇಬೇಕಾಯಿತು. ಸರದಾರ ಪಟೇಲರ ಮುತ್ಸದ್ದಿತನದಿಂದ ಇದು ಸಾಧ್ಯವಾಯಿತು. ಹೈದರಾಬಾದ ನಿಜಾಮರೊಬ್ಬರ ಮೇಲೆ ಮಾತ್ರ ಬಲ ಪ್ರಯೋಗ ಮಾಡಬೇಕಾಯಿತು.

ಇದರಿಂದೀಚೆಗೆ ನರೇಂದ್ರರು ರಾಜಕೀಯ ಅಧಿಕಾರಗಳನ್ನು ಪ್ರಜೆಗಳಿಗೆ ಒಂದೊಂದಾಗಿ ಬಿಟ್ಟುಕೊಡಬೇಕಾಗಿ ಬಂತು. ಕೆಲ ಮಹಾರಾಜರು "ರಾಜಪ್ರಮುಖ" ರೆನಿಸಿದರು. ಇನ್ನು ಮೇಲೆ ಅವರು ಕೇವಲ ಹೆಸರಿಗೆ ಮಾತ್ರ ರಾಜ ಮಹಾರಾಜರೆನಿಸಲಿದ್ದಾರೆ.

"ಸಮೀಕರಣ"ದಲ್ಲಿ ಬಹಳ ಸಂಸ್ಥಾನಗಳು ಅಸ್ತಿತ್ವ ಕಳೆದುಕೊಂಡವು. ತಮ್ಮ ಅಖಂಡತೆಯನ್ನು ಕಾಯ್ದುಕೊಂಡಿದ್ದವುಗಳಲ್ಲಿ ನಿಜಾಮರ ಹೈದರಾಬಾದ, ಒಡೆಯರ ಮೈಸೂರು, ನವಾಬರ ಭೋಪಾಳ ಇವೇ ಪ್ರಮುಖವಾಗಿದ್ದವು. ಪ್ರಜಾಸತ್ತೆಗೆ ತಲೆವಾಗಿ ಈ ಮಹಾರಾಜರು ಬರಿ ಘಟನಾತ್ಮಕ ಅಧಿಪತಿಗಳಾಗಿ ಉಳಿದಿದ್ದರೂ ಅವರ ರಾಜ್ಯಗಳು ಹೆಚ್ಚು ಕಡಿಮೆ ಅಖಂಡವಾಗಿ ಉಳಿದಿದ್ದವು.

ಈ ನವೆಂಬರದಿಂದ ಅವೂ ಉಳಿಯುವದಿಲ್ಲ. ಮೈಸೂರು ಇತರ ಪ್ರದೇಶಗಳ ಸೇರ್ಪಡೆಯಿಂದ ವಿಸ್ತಾರಗೊಳ್ಳಲಿದೆ. ಭೋಪಾಳ ಉತ್ತರ ಪ್ರದೇಶದಲ್ಲಿ ಸೇರಿಹೋಗಿ ಸಮುದ್ರದ ಹನಿಯಾಗಲಿದೆ. ಹೈದರಾಬಾದ ಒಡೆದು ಮೂರು ಭಾಗವಾಗಿ ಮೂರು ಭಾಷಾರಾಜ್ಯಗಳಲ್ಲಿ ಸೇರಿ ಹೋಗಲಿದೆ. ಮೈಸೂರೊಂದೇ ಹೆಸರನ್ನಾದರೂ ಉಳಿಸಿಕೊಳ್ಳುವದು. ರಾಜಪ್ರಮುಖ ಹುದ್ದೆ ಕೂಡ ನಿರ್ನಾಮವಾಗಲಿದೆ. ಮಹಾರಾಜರಲ್ಲಿ ಯಾರಾದರೂ ಅಧಿಕಾರ ಸ್ಥಾನದಲ್ಲಿ ಉಳಿದರೆ ಅವರು ರಾಜ್ಯಪಾಲರೆಂದು ಉಳಿಯುವರು ಹೊರತು ವಂಶಪಾರಂಪರ್ಯದಿಂದ ಬಂದ ಪ್ರಭುಗಳೆಂದಲ್ಲ.

ಹೀಗೆ ಭಾರತವು ಹದಿನಾರಾಣೆ ಪ್ರಜಾರಾಜ್ಯವಾಗುವದು. ಹೀಗೆ ಬಹುಭಾಗ ರಾಷ್ಟ್ರೀಯ ಅವಮಾನ, ಪ್ರಜಾಪೀಡನೆ, ವಿಕ್ಷಿಪ್ತ ಆಳಿಕೆ ಮತ್ತು ವಿದೇಶಗಳಲ್ಲಿ ಭಾರತಕ್ಕೆ ಅಪಹಾಸ್ಯಕರ ಕೀರ್ತಿ ಇವುಗಳ ಪ್ರತೀಕವಾಗಿದ್ದ ಸಂಸ್ಥಾನೀ ದರ್ಬಾರಿನ ಅವಸಾನವಾಗುತ್ತಿದೆ.

ನರೇಂದ್ರರ ಅವಸಾನವನ್ನು ಘೋಷಿಸುತ್ತ ಅವರ ಕುಂದು ಕೊರತೆಗಳನ್ನು ಸ್ಮರಿಸಿದಂತೆ ಅವರ ಕೆಲ ಗುಣಗಳನ್ನೂ ವರ್ಣಿಸದಿದ್ದರೆ ತಪ್ಪಾದೀತು. ಸ್ವಾಭಿಮಾನವನ್ನು ಆಗಾಗ್ಗೆ ಪ್ರದರ್ಶಿಸಿದವರಿದ್ದರೆಂಬುದಲ್ಲದೆ, ಪ್ರಜಾಹಿತಕ್ಕಾಗಿ, ಶಿಕ್ಷಣ ಪ್ರಗತಿಗಾಗಿ ನಿಜವಾಗಿ ದುಡಿದ ಮೈಸೂರರಸರು, ತಿರುವಾಂಕೂರು ರಾಜರು ಹಾಗು ಬಡೋದಾ ಮಹಾರಾಜರೇ ಮೊದಲಾದವರು ಪ್ರಜೆಗಳ ನಿಜವಾದ ಪ್ರೀತಿ ಸಂಪಾದಿಸಿದ್ದಾರೆ. ಸಾಮಾನ್ಯವಾಗಿ ಎಲ್ಲ ಆಸ್ಥಾನಗಳಲ್ಲಿಯೂ ಸಂಗೀತಾದಿ ಕಲೆಗಳಿಗೂ ವಿದ್ವಾಂಸರಿಗೂ ಆಶ್ರಯ ದೊರೆತದ್ದನ್ನು ಮರೆಯುವಂತಿಲ್ಲ. ಸ್ವಾತಂತ್ರ್ಯಾನಂತರವೂ ನರೇಂದ್ರರನ್ನು ಸಂಘಟಿಸಿ ಭಾರತ ಸರಕಾರವನ್ನು ಹಣ್ಣು ಮಾಡಬೇಕೆಂದು ಹವಣಿಸಿದ ಭೋಪಾಲ ನವಾಬರ ತಂತ್ರಗಳು ಬಿಕಾನೇರ ಮಹಾರಾಜರಂಥ ದೇಶಾಭಿಮಾನಿಗಳ ವಿರೋಧದಿಂದಲೇ ವ್ಯರ್ಥವಾದವೆಂದು ತಿಳಿದುಬಂದಿದೆ.

# ಕೆಂಡದ ಮೇಲೆ ಕುಣಿಯುವುದನ್ನು ಕಂಡೆ

ಕುಲಮರ್ವ ಬಾಲಕೃಷ್ಣ



‘ನಿಗಿ ನಿಗಿ ಕೆಂಡದ ರಾಶಿ; ಅದರಲ್ಲಿ ಬೆಂಕಿ ನಗುತ್ತಿತ್ತು! ಸುತ್ತ ನೆರೆದ ಜನರ ಕಡೆಗೆ ನನ್ನ ಲಕ್ಷ್ಯವಿದ್ದಿಲ್ಲ. ಆ ಕೆಂಡದ ರಾಶಿಯ ಮೇಲೆ ನಲಿದಾಡುವ ಭೂತಗಳನ್ನು ಎವೆಯಿಕ್ಕದೆ ನಾನು ನೋಡುತ್ತಿದ್ದೆ, ಆ ಅಪರ ರಾತ್ರಿಯಲ್ಲಿಯೂ.

ನನ್ನ ಎದೆ ಒಂದೇ ಸವನೆ ಹೊಡೆಯುತ್ತಿತ್ತು. ಎರಡು ಭೂತಗಳು ಸೇರಿ ಇನ್ನೊಂದು ಭೂತವನ್ನು ಆ ಕೆಂಡದ ರಾಶಿಯಲ್ಲಿ ಕೆಡವಿದವು. ಬಿದ್ದ ಭೂತದ ಕಾಲನ್ನು ಒಂದು, ಕೈಯನ್ನು ಇನ್ನೊಂದು ಭೂತ ಹಿಡಿದು ಕೆಂಡದ ಮೇಲೆ ಹೊರಳಾಡಿಸಿದುವು; ಮುಸುಕು ಜೋಳವನ್ನು ಬೆಂಕಿಯಲ್ಲಿ ಬೇಯಿಸುವಂತೆ.

ಸ್ವಲ್ಪ ಹೊತ್ತಿನ ಮೇಲೆ, ಕೆಡವಲ್ಪಟ್ಟ ಭೂತವು ಚಟಕ್ಕನೆ ಮೇಲಕ್ಕೆ ಎದ್ದಿತು. ‘ಭೂತದ ಸತ್ಯವಲ್ಲದಿದ್ದರೆ ಬೆಂಕಿ ಸುಡದಿರುವುದುಂಟೆ?’ ನನ್ನನ್ನು ನಾನೇ ಪ್ರಶ್ನಿಸಿಕೊಂಡೆ.

ನಗುತ್ತ ಎದ್ದು ಬಂದ ಆ ಭೂತ ಮತ್ತು ಉಳಿದ ಭೂತಗಳು ಮತ್ತೆ ಕುಣಿದುವು. ಊರಿನ ಕೂಡುಕಟ್ಟಿನವರ ಯೋಗಕ್ಷೇಮವನ್ನು ಅವು ಅಟ್ಟಹಾಸದೊಡನೆ ವಿಚಾರಿಸಿದುವು. ಆ ಭೂತಗಳ ಒಡೆಯ ವಿಷ್ಣುಮೂರ್ತಿ ಜಾತ್ರೆಗೆ ನೆರೆದ ಎಲ್ಲರ ಹರಕೆಗಳನ್ನೂ ಬಯಕೆಗಳನ್ನೂ ಕೇಳಿಕೊಂಡಿತು.

ಅಷ್ಟರಲ್ಲಿ ಬೆಳಗಾಗುತ್ತ ಬಂದಿತ್ತು. ಭೂತದ “ಪಾತ್ರಿ”*ಗಳ ಪರಿವಾರದವನು ಎಳೆನೀರುಗಳನ್ನು ತಂದು ನೀಡಿದನು. ಅವನ್ನು ಭೂತಗಳು ಕುಡಿದ ಮೇಲೆ ವ್ಯಾಜ್ಯಗಳ ತೀರ್ಮಾನವಾಯಿತು; ದೈವದಿಂದ ಕೊನೆಗೆ ಅನುಗ್ರಹ ಅರಸಿನ ಪುಡಿಯ ಪ್ರಸಾದ. ಕುಡಿ ಬಾಳೆಯ

* ಪಾತ್ರಿಯೆಂದರೆ ಭೂತ ಅಥವಾ ದೇವತೆಯ ಆವೇಶ ತರಿಸಿಕೊಂಡು ಕುಣಿಯುವವ. ಹೆಚ್ಚಾಗಿ ಪಾತ್ರಿಗಳು ಪಾರಂಪರ್ಯವಾಗಿ ಈ ಉದ್ಯೋಗ ಮಾಡುತ್ತಾರೆ.

ಎಲೆಯಲ್ಲಿ ಎಳನೀರಿನೊಂದಿಗೆ ಆ ಪ್ರಸಾದವನ್ನು ಎಲ್ಲರಿಗೂ ಹಂಚಿದ್ದಾಯಿತು. ಆ ಬೆಳಗಿನ ಸೂರ್ಯ ಮೂಡಿದಾಗ ಉರಿಗಣ್ಣು ಉಜ್ಜುತ್ತ ನಾನು ಮನೆಗೆ ಮರಳಿದೆ.

ಹೀಗೆ ಮೊದಲ ಬಾರಿ ನಾನು ಕೆಂಡದ ಮೇಲೆ ನಡೆಯುವ ದೈವದ "ಕೋಲ" ವಾದ ಒತ್ತೆಕ್ಕೋಲವನ್ನು ನೋಡಿದೆ.

ಒತ್ತೆಕ್ಕೋಲವು ಮಧ್ಯರಾತ್ರಿಯ ನಂತರ ಬಯಲಿನಲ್ಲಿ ನಡೆಯುವ ಒಂದು ರೀತಿಯ ಭೂತಾರಾಧನೆ. ಕಾಸರಗೋಡಿನಲ್ಲಿ ಸಮಸಂಖ್ಯೆಯಲ್ಲಿರುವ ಮಲೆಯಾಳಿಗಳು,ತುಳುವರು ಸಮಾನವಾಗಿ ಈ "ಕೋಲ"ವನ್ನು ಆ ತಾಲೂಕಿನ ಹಳ್ಳಿಗಳಲ್ಲಿ ಆಚರಿಸುವರು. ತುಳುವ ಜನರು ಈ ಕೋಲವನ್ನು ಆಚರಿಸಿದರೆ "ಬಯಲಕೋಲ"ವೆಂದು ಕರೆಯುತ್ತಾರೆ—ಎಂಬುದಿಷ್ಟೆ ಇವುಗಳಲ್ಲಿ ವ್ಯತ್ಯಾಸ.

ನಮ್ಮೂರ ಜನರು ಉಳಿದ ದೈವಗಳ ಕೋಲವನ್ನು ವರ್ಷಕ್ಕೊಮ್ಮೆ ನಡೆಸುವಂತೆ ಒತ್ತೆಕ್ಕೋಲವನ್ನೂ ನಡೆಸುತ್ತಾರೆ. ಇದು ಎಪ್ರಿಲ್ ತಿಂಗಳ ಕೊನೆಯಲ್ಲಿ ಅಥವಾ ಮೇ ತಿಂಗಳ ಮೊದಲಲ್ಲಿ ಒಂದು ಹುಣ್ಣಿಮೆಯ ರಾತ್ರಿ ನಡೆಯುತ್ತದೆ. ತಮ್ಮ ಇಷ್ಟಾರ್ಥಗಳ ಸಿದ್ಧಿಗಾಗಿ ಕೆಲವರು ಹರಕೆಯ ಕೋಲ ನಡೆಸುವುದೂ ಉಂಟು.

ಕೋಲ ಎಂದರೆ ಹೆಚ್ಚಾಗಿ ರಾತ್ರಿಯಲ್ಲಿ ನಡೆಯುವ ಭೂತಾರಾಧನೆಗೆ ದಕ್ಷಿಣ ಕನ್ನಡದಲ್ಲಿ ಪ್ರಚಲಿತವಿರುವ ಹೆಸರು. ಒತ್ತೆಕ್ಕೋಲವು ಉಳಿದ ದೈವಗಳ ಕೋಲಕ್ಕಿಂತ ಹೆಚ್ಚು ಗಂಭೀರವಾದುದು. ಮಲೆಯಾಳಿ ಗಾಣಿಗರೂ ಈಡಿಗರೂ ಇದರ "ಪಾತ್ರಿ"ಗಳಾಗಿರುವರು. ತುಳುವರಾದ "ಆಟದ ಹೊಲೆಯರು" ಅಥವಾ "ಪರವ"ರು ಬಯಲ ಕೋಲದ ಪಾತ್ರಿಗಳು. ಕೋಲದ ದಿನ ಇವರು ಸಂಪೂರ್ಣ ಉಪವಾಸ ಮಾಡುವರು. ರಾತ್ರಿ ಹತ್ತು ಗಂಟೆಯ ಸುಮಾರಿಗೆ ಒತ್ತೆಕ್ಕೋಲದ ಬೆಳ್ಚವಾಡರು–ಎಂದರೆ ಪಾತ್ರಿಗಳು ಕೋಲದಲ್ಲಿ ಕುಣಿಯುವ ಭೂತ ವೇಷದಲ್ಲಿ ಊರೆಲ್ಲಾ ತಿರುಗಾಡಿ ಪ್ರತಿಯೊಂದು ಮನೆಯ ಇದಿರು ಕುಣಿಯುವರು. ಕುಣಿಯುತ್ತ ಕುಣಿಯುತ್ತ ಅವರಿಗೆ ಆವೇಶ ಬಂದಾಗ ಕೈಯ ಖಡ್ಗದಿಂದ ಎದೆಗೆ ಜೋರಾಗಿ ಹೊಡೆದುಕೊಂಡು ಆರ್ಭಟಿಸುವರು. ಅಂಗಳಕ್ಕೆ ಬರುವಾಗಲೇ ಆರ್ಭಟಿಸುತ್ತ ಬರುವ ಬೆಳ್ಚವಾಡರ ಕಾಲಗೆಜ್ಜೆಯ ದನಿಯು ಎಲ್ಲರ ನಿದ್ದೆಯನ್ನು ಓಡಿಸಿಬಿಡುತ್ತದೆ. ಅನಂತರ ಕೋಲಕ್ಕೆ ಆಮಂತ್ರಣವಿತ್ತು ಅವರು ಹೊರಟುಹೋಗುವರು.

ಕೋಲನಡೆಯುವ ಸುಮಾರು ಒಂದು ತಿಂಗಳ ಮೊದಲಿಗೇ ಊರಿನವರು ಕೂಡಿ ಆಬಗ್ಗೆ ಆಲೋಚನೆ ನಡೆಸುತ್ತಾರೆ. ಬರುವ ಖರ್ಚುವೆಚ್ಚಗಳ ಬಗ್ಗೆ ಈ ಸಭೆಯಲ್ಲಿ ಒಂದು ನಿರ್ಧಾರಮಾಡಿಕೊಂಡ ನಂತರ ಕೆಂಡಕ್ಕಾಗಿ ಬೇಕಾಗುವ ಕಟ್ಟಿಗೆಯನ್ನು ಸಂಗ್ರಹಿಸುತ್ತಾರೆ. ಕೆಂಡಕ್ಕಾಗಿ ಹಾಕುವ ಕಟ್ಟಿಗೆ ಹೆಚ್ಚಾಗಿ ಹಾಲುಮರಗಳದ್ದೇ (ಕಡಿದರೆ ಮೇಣದಂತೆ ರಸ ಜಿನುಗಿಸುವ ಮರಗಳು) ಇರುವುವು.

ಒತ್ತೆಕ್ಕೋಲವನ್ನು ಊರಿನ ಹಿರಿಯರು ದೈವಾರಾಧನೆಯೆಂಬ ದೃಷ್ಟಿಯಿಂದ ಜರುಗಿಸುತ್ತಾರಾದರೂ ನಮ್ಮಂತಹ ಕಿರಿಯರಿಗೆ ಅದೊಂದು ಭಯಾನಕ ಕೌತುಕದ ವಿಷಯವೇ ಆಗುತ್ತಿತ್ತು. ವಿಷ್ಣುಮೂರ್ತಿ ಭೂತದ ಗಂಭೀರ ಕುಣಿತ, ಉಳಿದ ಭೂತಗಳ ತಿರುಬೊಬ್ಬೆ ಇವು ಉಳಿದ ಭೂತಾರಾಧನೆಗಳಿಗಿಂತ ಒತ್ತೆಕ್ಕೋಲವು ಜನರನ್ನು ಹೆಚ್ಚು ಆಕರ್ಷಿಸುವುದಕ್ಕೆ ಕಾರಣವಾಗಿದೆ.

ಒತ್ತೆಕ್ಕೋಲದ ಭೂತವೇಷಧಾರಿಗಳ [illegible] ಘೋರವಾಗಿರುತ್ತದೆ. ಅವರು ಮುಖಕ್ಕೆ ಬಳಿದುಕೊಳ್ಳುವ ಸುಣ್ಣ-ಬಣ್ಣದ ಪಟ್ಟಿಗಳು, ಗಾತ್ರವನ್ನು ಅವಾಸ್ತವವಾಗಿ ಎತ್ತರಿಸಿ ತೋರಿಸುವ ಅವರ ಕಿರೀಟದಂಥ "ಅಣಿ"ಗಳು, ಸೊಂಟಕ್ಕೆ ಅವರು ಕಟ್ಟಿಕೊಳ್ಳುವ ತೆಂಗಿನ ಎಳೆಯ ಗರಿಗಳು, ಎದೆಕಟ್ಟು, ಆ ಖಡ್ಗ, ಬಿಲ್ಲು, ಬಾಣಗಳು, ಅವರ ಆಟೋಪ ಆರ್ಭಟಗಳು ಆ ಬೆಳುದಿಂಗಳ ಅಪರರಾತ್ರಿಯ ಸನ್ನಿವೇಶದಲ್ಲಿ ನಿಜವಾದ – ಭೂತಲೋಕದ ಸನ್ನಿವೇಶವನ್ನೇ ಸೃಷ್ಟಿಸಿಬಿಡುತ್ತವೆ. ಕೆಂಡದ ಮೇಲಿನ ಕುಣಿತ

ಮತ್ತು ಹೋರಾಟ ಇವೇ ಭಯಾನಕ ದೃಶ್ಯಕ್ಕೆ ಕಳಸವಿಟ್ಟಂತಿರುತ್ತದೆ. ಆ ತಾಂಡವ ಮುಗಿಸಿ ಅವು ನಮ್ಮನಿಮ್ಮಂತೆ ಸಾದಾ ನೆಲಕ್ಕಿಳಿದು ಭಕ್ತರ ಅಹವಾಲುಗಳನ್ನು ವಿಚಾರಿಸಲಾರಂಭಿಸಿದಾಗ ನಾವು ಮಹಾ ಅನಾಹುತವೊಂದರ ದಂಡೆಯುವರೆಗೂ ಹೋಗಿ ಹಿಂದಿರುಗಿದವರಂತೆ ಸಮಾಧಾನದ ನಿಟ್ಟುಸಿರು ಬಿಡುತ್ತೇವೆ, ಮತ್ತು ಹುಲುಮಾನವರ ಸುಖದುಃಖಗಳನ್ನು ವಿಚಾರಿಸಲು ಮನಸ್ಸುಮಾಡಿದ ಆ ಉಗ್ರದೇವತೆಯಲ್ಲಿ ಅನುಗ್ರಹವನ್ನು ಬೇಡುವ ಮನೋಭಾವಕ್ಕೆ ಬರುತ್ತೇವೆ.

ಒತ್ತೆಕ್ಕೋಲದ ಭೂತಗಳು ಬೆಂಕಿಯ ಮೇಲೆ ನಡೆಯುವುದು ಹೇಗೆ ಸಾಧ್ಯವಾಗಿದೆ? ಎಂಬ ಬಗ್ಗೆ ನಮ್ಮೂರ ಜನರು ಹಲವಾರು ಕಾರಣಗಳನ್ನು ಹೇಳುತ್ತಾರೆ.

ಭೂತವು ದೈವಾಂಶವುಳ್ಳದ್ದಾದುದರಿಂದ ಅದರ ಆವೇಶ ಹೊಂದಿದವರಿಗೆ ಬೆಂಕಿ ತಾಗದು; ಭೂತದ ಪಾತ್ರಿಯು ಮಂತ್ರವಿದ್ಯೆಯನ್ನು ಬಲ್ಲವನು, ಅವನಿಗೆ ಬೆಂಕಿ ಸುಡದಂತೆ ತಡೆಗಟ್ಟುವ ಔಷಧಿಯೂ ಗೊತ್ತಿದೆ; ಇವು ಅವರು ಹೇಳುವ ಮುಖ್ಯ ಕಾರಣಗಳು. ಸಣ್ಣವನಾಗಿದ್ದಾಗಿನಿಂದ ಮನಸಿಗೆ ತೃಪ್ತಿಯಾಗುವಷ್ಟು ಒತ್ತೆಕ್ಕೋಲಗಳನ್ನು ನೋಡಿದ್ದೇನೆ; ಆದರೆ ಬೆಂಕಿಯಾಟದ ರಹಸ್ಯ ನನ್ನ ಪಾಲಿಗೆ ಇನ್ನೂ ಅಭೇದ್ಯವಾಗಿಯೇ ಉಳಿದಿದೆ.

ಕಳೆದ ವರ್ಷ ನಾನು ಬೆಂಗಳೂರಿನಲ್ಲಿದ್ದಾಗ ಧರ್ಮರಾಯನ ಕರಗ ಉತ್ಸವ ನಡೆಯುತ್ತಿತ್ತು. ಈ ಉತ್ಸವದಲ್ಲಿ ಭಾಗವಹಿಸಿದ ವ್ರತಿಗಳೂ ಬೆಂಕಿಯ ಹೊಂಡವನ್ನು ಹಾಯ್ದು ಹೋಗುವುದನ್ನು ನೋಡಿದೆ. ಕರ್ನಾಟಕದ ಬೇರೆ ಕಡೆಗಳಲ್ಲಿಯೂ ಬೆಂಕಿಯ ಮೇಲೆ ನಡೆಯುವ ಚಮತ್ಕಾರಗಳು ಆಗುತ್ತವೆ ಎಂದು ತಿಳಿದಿದ್ದೇನೆ; ಆದರೆ ಒತ್ತೆಕ್ಕೋಲದ ಆ ರೌದ್ರ ದೃಶ್ಯ ಇವೆಲ್ಲವುಗಳಿಗಿಂತ ಭಯಂಕರವೆಂದು ನನ್ನ ಮತ. ಈ ಭೂತಗಳು ಕೆಂಡದ ಮೇಲೆ ಹಾಗೆ ಹೋಗಿ ಹೀಗೆ ಬರುವುದಿಲ್ಲ. ಸಾಕಷ್ಟು ಹೊತ್ತು ತಮ್ಮ ಉಗ್ರ ನೃತ್ಯವನ್ನು ನಡೆಸುತ್ತವೆ.

ಈ ಬಗ್ಗೆ ಮದ್ರಾಸಿನಲ್ಲಿ ಹಿಂದೆ ಹೌಸ ಸರ್ಜನರಾಗಿದ್ದ ಸ್ವಾಮಿ ನಾರಾಯಣಾನಂದರು ಒಂದು ಹೊಸ ಶೋಧನೆಯನ್ನು ಮಾಡಿರುವುದಾಗಿ ಹೇಳುತ್ತಾರೆ. ಒಮ್ಮೆ ಹಿಮಾಲಯದ ತಪ್ಪಲಲ್ಲಿ ಒಬ್ಬ ಆದಿವಾಸಿಯು ಬೆಂಕಿಯೊಡನೆ ಆಡುತ್ತಿರುವುದನ್ನು ನೋಡಿ ಅವನಿಂದ ಅದರ ರಹಸ್ಯವನ್ನು ಕಲಿತೆನೆಂದು ಅವರು ಹೇಳಿದ್ದಾರೆ. ಯಾವುದೋ ಒಂದು ಔಷಧಿಮೂಲಿಕೆಯ ರಸವನ್ನು ಹಚ್ಚಿಕೊಂಡರೆ ಬೆಂಕಿಯು ಸುಡುವುದಿಲ್ಲ, ವಿದ್ಯುತ್ತು ಕೂಡ ಮನುಷ್ಯನನ್ನು ಘಾತಿಗೊಳಿಸುವುದಿಲ್ಲ ಎಂದು ಅವರು ಅನುಭವ ಹೊಂದಿರುವರಂತೆ. ಈ ವನಸ್ಪತಿಯ ರಸ ಹಚ್ಚಿಕೊಂಡರೆ ಪರಮಾಣು ವಿಕಿರಣದ (Radiation) ದುಷ್ಪ್ರಭಾವದಿಂದ ಕೂಡ ತಪ್ಪಿಸಿಕೊಳ್ಳಬಹುದೆಂಬಲ್ಲಿವರೆಗೂ ಅವರು ಹೋಗಿದ್ದಾರೆ. ಅಣುಬಾಂಬಿನ ವಿಕಿರಣ ತಡೆಯುವುದಕ್ಕೆ ಇದು ಉತ್ತಮ ಉಪಾಯವೆಂದು ಅವರ ಮತ.

ಇದು ನಿಜವೇ ಆಗಿದ್ದರೂ ಇರಬಹುದು. ಯಾವುದೋ ಒಂದು ತೊಪ್ಪಲಿನ ರಸವನ್ನು ಕೋಲದ ಪಾತ್ರಿಗಳು ಹಚ್ಚಿಕೊಳ್ಳುತ್ತಾರೆಂದು ನಾನೂ ಕೇಳಿದ್ದೇನೆ. ಈ ವಿಷಯದಲ್ಲಿ ಈ ನಿರಕ್ಷರಿ-ಶ್ರದ್ಧಾಳು ಜನರ ಬಾಯಿಬಿಡಿಸುವುದು ತುಂಬಾ ಕಠಿಣ ಕೆಲಸ. ಆದರೆ ನಾನು ಸಣ್ಣವನಾಗಿದ್ದಾಗ ನೋಡಿದ ಒತ್ತೆಕ್ಕೋಲವು ಕಡಿಮೆ ಪವಾಡದ್ದೆಂದು ನನಗೆ ಅನಿಸುವದಿಲ್ಲ. ಏಕೆಂದರೆ ಭೂತದ ಪಾತ್ರಿಯು ತನ್ನ ಮುಖಕ್ಕೆ ದುಷ್ಟಪರಿಣಾಮ ಕೊಡುವ ಅರ್ದಾಳ ಹಚ್ಚಿಕೊಂಡು ಮುಖ ಎದೆ ತೋಳುಗಳಿಗೆ ಸುಣ್ಣದ ಬರೆಗಳನ್ನು ಎಳೆದುಕೊಳ್ಳುವನು. ಮೈತುಂಬ ಸುಣ್ಣಬಳಿದುಕೊಂಡಿರುವುದು ಸಾಮಾನ್ಯ ಜನರು ಆಲೋಚಿಸಲು ಸಾಧ್ಯವಾಗುವ ವಿಷಯವಲ್ಲ. ಅದಕ್ಕೇ ಆ ಕೋಲಗಳನ್ನು ನೆನೆದರೆ ನನ್ನ ಎದೆ ಈಗಲೂ ಬಡಿದುಕೊಳ್ಳುತ್ತದೆ.



**ಚರ್ಚಿಲ್ಲರು ತಮ್ಮ ಜ್ಞಾನ ಪ್ರದರ್ಶಿಸಬಯಸುತ್ತಿದ್ದರು ; ಗುರುಗಳು ಅವರ ಅಜ್ಞಾನವನ್ನು ಬಯಲಿಗೆಳೆಯಲು ಯತ್ನಿಸುತ್ತಿದ್ದರು**

# ಚರ್ಚಿಲ್ಲರಿಗೂ ಸಾಲೆಯೆಂದರೆ ಸೇರುತ್ತಿರಲಿಲ್ಲ

ವಿದ್ಯಾಭ್ಯಾಸ ನನ್ನನ್ನು ಬಾಧಿಸತೊಡಗಿದ್ದು "ಗವರ್ನೆಸ್"* ಎಂಬ ಅಭಿಧಾನದ ಅವಲಕ್ಷಣ ವ್ಯಕ್ತಿ ನಮ್ಮ ಮನೆಗೆ ಬಂದಾಗ. ಅವಳು ಬರಲಿದ್ದಾಳೆಂದು ಕೇಳಿ ನನ್ನ ದಾದಿ ಶ್ರೀಮತಿ ಎವರೆಸ್ಟಳು ನನಗಾಗಿ ಒಂದು ಪುಸ್ತಕ ತಂದಳು. ಅದರ ಹೆಸರು "Reading without Tears"—ಕಣ್ಣೀರಿಲ್ಲದೆ ಓದಲು ಕಲಿಸುವ ಪುಸ್ತಕ ಎಂದು. ನನ್ನ ಪಾಲಿಗೆ ಮಾತ್ರ ಅದರ ಹೆಸರು ಅನ್ವರ್ಥಕವಾಗಲಿಲ್ಲ. ದಾದಿ ಲೆಕ್ಕಣಿಕೆಯಿಂದ ಅಕ್ಷರಗಳನ್ನು ತೋರಿಸುತ್ತ ಅವುಗಳನ್ನು ನನಗೆ ಗುರುತು ಮಾಡಿ ಕೊಡಲು ಯತ್ನಿಸಿದಳು. ಇವೆಲ್ಲಿಯ ತಲೆಬೇಸರ ಅನಿಸಿತು ನನಗೆ.

ಕೊನೆಗೆ ಆ ದುರ್ದಿನ ಬಂದೇಬಿಟ್ಟಿತು. ಗವರ್ನೆಸ್ ನಮ್ಮಲ್ಲಿಗೆ ಬಂದಳು. ಪರಕೀಯರಿಂದ ಆಕ್ರಮಣಕ್ಕೊಳಗಾದ ಜನಾಂಗಗಳಂತೆ ನಾನು ಭೂಗತನಾದೆ: ಮನೆಯ ಸುತ್ತಲೂ ಕುರುಚಲು ಗಿಡಗಳಿದ್ದವು. ಅವುಗಳೆಡೆಯಲ್ಲಿ ನಾನು ಅವಿತುಕೊಂಡೆ. ನನ್ನನ್ನು ಶೋಧಿಸಿ ತೆಗೆದು ಗವರ್ನೆಸ್ಸಿಗೆ ಒಪ್ಪಿಸಬೇಕಾದರೆ ಸಾಕುಸಾಕಾಯಿತು.

* ಗವರ್ನೆಸ್ ಎಂದರೆ ಮನೆಯಲ್ಲೇ ಇದ್ದು ಮಕ್ಕಳಿಗೆ ಪಾಠಹೇಳುವ ಶಿಕ್ಷಿಕೆ.

ವಿನ್‌ಸ್ಟನ್ ಚರ್ಚಿಲ್ಲರ "ರೋವಿಂಗ್ ಕಮಿಶನ್" ನಿಂದ

ಅನಂತರ ನಿತ್ಯಕಷ್ಟ ಪ್ರಾರಂಭವಾಯಿತು. ಅಕ್ಷರಗಳೊಡನೆ ಮಾತ್ರವಲ್ಲದೆ ಶಬ್ದಗಳೊಡನೆ ನಾವು ಹೆಣಗಬೇಕಾಗಿತ್ತು. ಅದಕ್ಕಿಂತಲೂ ಮಹಾಪೀಡೆಗಳೆಂದರೆ ಅಂಕೆಗಳು. ಇದ್ದದ್ದರಲ್ಲಿ ಅಕ್ಷರಗಳೇ ಸುಖ. ಅವು ಒಂದು ವರಸೆಯಲ್ಲಿ ಸಾಲು ಹಿಡಿದರೆ ಗುರುತು ಹಿಡಿಯಲು ಸಾಧ್ಯವಿದೆ. ಕಷ್ಟಪಟ್ಟರೆ ಅದು ಯಾವ ಶಬ್ದವೆಂದು ಊಹಿಸಿ ಓದಲೂಬಹುದು.

ಅಂಕೆಗಳದು ಮಾತ್ರ ತೊಡಕೇ ತೊಡಕು. ಒಮ್ಮೆ ಒಂದು ಅಂಕೆ ಇನ್ನೊಂದರಿಂದ ಸಾಲ ಇಸಕೊಳ್ಳುತ್ತದಂತೆ, ಒಂದು ಸಾಲಿನಿಂದ ಇನ್ನೊಂದಕ್ಕೆ ಒಂದು ಅಂಕೆಯನ್ನು ಮುಂದೆ ಒಯ್ಯಬೇಕಂತೆ, ತೆಗೆದುಕೊಂಡ ಉದ್ದರಿ ಹಿಂದುಗಡೆ ತೀರಿಸಬೇಕಂತೆ. ಈ ಜಂಜಾಟಗಳು ನನ್ನ ಜೀವನವ್ಯವಸ್ಥೆಯ ಮೇಲೆ ಹಬ್ಬಿಸಿದ ಕರಾಳ ಛಾಯೆ ದಿನದಿನಕ್ಕೆ ಗಾಢವಾಗತೊಡಗಿತು. ಆಟದ ಕೋಣೆಯಲ್ಲಿ ಎಂಥೆಂಥ ಸ್ವಾರಸ್ಯದ ಕೆಲಸಗಳಿರುತ್ತಿದ್ದವು. ಈ ಲೆಕ್ಕದ ಪಿಡುಗು ಅದಕ್ಕೆ ಅವಕಾಶವೇ ಕೊಡುವುದಿಲ್ಲವಲ್ಲ ಎಂದು ನನಗೆ ಚಿಂತೆಯಾಯಿತು.

ಅಷ್ಟರಲ್ಲಿ ಮತ್ತೂ ದೊಡ್ಡ ವಿಪತ್ತು ಎದುರಾಯಿತು. ನಾನು ಶಾಲೆಗೆ ಹೋಗಬೇಕಾಯಿತು. ನನಗಾಗ ಏಳು ವರ್ಷ. ಶಾಲೆಯ ವಿಷಯವಾಗಿ ಎಷ್ಟೋ ಅನಿಷ್ಟ ಸಂಗತಿಗಳನ್ನು ನಾನು ಕೇಳಿದ್ದೆ. ಅದು ಹಿಂದುಗಡೆ ವಾಸ್ತವಿಕವೆಂದು ಅನುಭವಸಿದ್ಧವಾಯಿತು. ಶಾಲಾದಿನಗಳೇ ಮನುಷ್ಯನ ಜೀವನದ ಸುಖತಮ ದಿನಗಳು ಎಂದು ನನಗೆ ಹೇಳುತ್ತಿದ್ದರು. ನಮ್ಮ ಬಳಗದ ಹುಡುಗರನ್ನು ವಿಚಾರಿಸಿದಾಗ ಇದಕ್ಕೇನೂ ಪುಷ್ಟಿ ದೊರೆಯಲಿಲ್ಲ. ಕೇಳಿದರೆ ಅವರು ಬರಿ ಹಲ್ಲು ಕಿರಿದರು ಮಾತ್ರ.

ನನ್ನ ಶಿಕ್ಷಣಕ್ಕಾಗಿ ನನ್ನ ತಂದೆಯವರು ಆರಿಸಿದ ವಿದ್ಯಾಲಯವು ಇಂಗ್ಲಂಡಿನಲ್ಲಿ ಅತ್ಯಂತ ಫ್ಯಾಶನಬಲ್ ಮತ್ತು ತುಟ್ಟಿಯಾದ ಗುರುಕುಲವಾಗಿತ್ತು. ಒಂದು ಇಯತ್ತೆಯಲ್ಲಿ ಹತ್ತೇ ಹುಡುಗರು; ಆ ಕಾಲದಲ್ಲಿ ಅದ್ಭುತವೇ ಅನಿಸಿದ್ದ ವಿದ್ಯುದ್ದೀಪಗಳು ; ಈಸುಕೊಳ ; ವಿಸ್ತಾರವಾದ ಆಟದ ಬಯಲು—ಎಲ್ಲ ಸೌಕರ್ಯಗಳಿದ್ದವು.

ನವಂಬರ ತಿಂಗಳ ಒಂದು ಮಬ್ಬುಗತ್ತಲಿನ ಸಂಜೆ ನನ್ನ ತಾಯಿ ನನ್ನನ್ನು ಕರೆದೊಯ್ದು ಗುರುಕುಲದ ಹೆಡ್ಮಾಸ್ತರರಿಗೆ ಒಪ್ಪಿಸಿದಳು. ತಾಯಿ ತಿರುಗಿ ಹೋದೊಡನೆ ನನ್ನನ್ನು ವರ್ಗಕ್ಕೆ ಕರೆದೊಯ್ಯಲಾಯಿತು. ವರ್ಗದ ಉಳಿದ ಹುಡುಗರೆಲ್ಲರೂ ಹೊರಗೆ ಹೋಗಿದ್ದರು. ಮಾಸ್ತರರ ಸಾನ್ನಿಧ್ಯದಲ್ಲಿ ನಾನೊಬ್ಬನೇ ಡೆಸ್ಕಿನ ಹಿಂದೆ ಕುಳಿತಿದ್ದೆ. ಅವರು ನನಗೆ ತೆಳ್ಳನ್ನ ಹಸುರು-ಕಂದು ಕಟ್ಟಿನ ಪುಸ್ತಕವೊಂದನ್ನು ತೋರಿಸಿದರು.

"ಇದು ಲ್ಯಾಟಿನ್ ವ್ಯಾಕರಣ" ಎಂದು ಹೇಳಿ, ಅದನ್ನು ತೆರೆದು ಒಂದು ಪುಟದಲ್ಲಿದ್ದ ಕೆಲ ಶಬ್ದಗಳನ್ನು ತೋರಿಸಿ, ''ಇದನ್ನು ನೀನು ಕಲಿಯಬೇಕು. ಅರ್ಧ ತಾಸಿನಲ್ಲಿ ತಿರುಗಿ ಬರುವೆ. ಎಷ್ಟು ಕಲಿಯುವಿಯೋ ನೋಡುವೆ" ಎಂದರು.

ಆ ಮಬ್ಬುಸಂಜೆಯಲ್ಲಿ ಲ್ಯಾಟಿನ್ನಿನ ''ಮೆನ್ಸಾ'' ಶಬ್ದದ ವಿಭಕ್ತಿಗಳ ಮುಂದೆ ಸೋತ್ಕಂಠ ಹೃದಯದಿಂದ ಕುಳಿತಿದ್ದ ನನ್ನ ರೂಪ ನೋಡುವ ಹಾಗಿತ್ತು.

Mensa—ಮೇಜು
Mensa—ಎಲೈ ಮೇಜೇ
Mensam—ಮೇಜನ್ನು
Mensæ—ಮೇಜಿನ
Mensæ—ಮೇಜಿಗೆ ಅಥವಾ ಮೇಜಿಗಾಗಿ
Mensa—ಮೇಜಿನಿಂದ ಅಥವಾ ಮೇಜಿನ ದೆಸೆಯಿಂದ

ನಾನು ಕೌತುಕದಿಂದ ಚಿಂತಿಸಿದೆ. ಇದರರ್ಥ ಏನಾಗಿರಬಹುದು ? ಇದರ ತಾತ್ಪರ್ಯವೇನಿದ್ದೀತು? ನನಗಂತೂ ಅದು ಶುದ್ಧ ಕಗ್ಗವೆಂದು ತೋರಿತು. ಆದರೆ ಬಾಯಿಪಾಠ ಕಲಿಯುವಲ್ಲಿ ನಾನು ಯಾವಾಗಲೂ ನಿಸ್ಸೀಮ. ಕಲಿತೆ.

ಯಥಾಕಾಲದಲ್ಲಿ ಮಾಸ್ತರರು ತಿರುಗಿ ಬಂದರು. "ಕಲಿತೆಯಾ ?" ಎಂದು ಕೇಳಿದರು. ನಾನು ಕಲಿತದ್ದನ್ನು ಒಪ್ಪಿಸಿದೆ.

ಅವರಿಗೆ ತುಂಬ ಸಮಾಧಾನವಾದಂತೆ ತೋರಿದ್ದರಿಂದ ನಾನು ಧೈರ್ಯಗೊಂಡು ಒಂದು ಪ್ರಶ್ನೆ ಕೇಳಿದೆ.

"ಇದರ ಅರ್ಥವೇನು, ಸಾರ್ ?"

"ಅದರಲ್ಲಿ ಏನು ಹೇಳಿದೆಯೋ ಅದೇ ಅರ್ಥ. ಮೆನ್ಸಾ ಅಂದರೆ ಮೇಜು. ಪ್ರಥಮಾ ವಿಭಕ್ತಿ ಏಕವಚನ."

"ಹಾಗಾದರೆ ಮೆನ್ಸಾ ಅಂದರೆ 'ಎಲೈ ಮೇಜೇ' ಹೇಗಾಯಿತು ? ಮೇಲಾಗಿ 'ಎಲೈ ಮೇಜೇ' ಅಂದರೇನು ?" ನಾನು ಪ್ರಶ್ನಿಸಿದೆ.

"ಮೆನ್ಸಾ-ಎಲೈ ಮೇಜೇ-ಇದು ಸಂಬೋಧನ ವಿಭಕ್ತಿ. ಮೇಜನ್ನು ಸಂಬೋಧಿಸುವಾಗ ಈ ಶಬ್ದ ಉಪಯೋಗಿಸಬೇಕು." ಇದು ನನಗೆ ಅರ್ಥವಾಗಲಿಲ್ಲೆಂದು ಅವರಿಗೆ ಹೊಳೆದದ್ದರಿಂದ ಮತ್ತೆ ವಿವರಿಸಿದರು. "ಮೇಜಿನೊಡನೆ ಮಾತನಾಡುವಾಗ ಅದನ್ನುಪಯೋಗಿಸಬೇಕು."

"ಆದರೆ ಮೇಜಿನೊಡನೆ ನಾನು ಮಾತನಾಡುವುದಿಲ್ಲವಲ್ಲ !" ಎಂದು ನಾನು ಆಶ್ಚರ್ಯ ತಡೆಯಲಾರದೆ ಅಂದುಬಿಟ್ಟೆ.

ಮಾಸ್ತರರ ಉತ್ತರ ನಿಸ್ಸಂದಿಗ್ಧವಾಗಿತ್ತು. "ಅಧಿಕ ಪ್ರಸಂಗ ಮಾಡಿದಿ ಅಂದರೆ ಹೊಡೆತ ಬೀಳುವುದು—ಒಳಿತಾಗಿ ಬೀಳುವುದು, ತಿಳಿಯಿತೆ ?"

ಅಭಿಜಾತ ಭಾಷಾಸಾಹಿತ್ಯಕ್ಕೆ ನನ್ನ ಪ್ರಥಮ ಪ್ರವೇಶದ ಅನುಭವ ಹೀಗಿತ್ತು.

ಈಟನ್ ಶಾಲೆಯ ಮಾದರಿಯಲ್ಲಿ ಭೂರ್ಜದ ಕೋಲಿನಿಂದ ಥಳಿಸುವುದು ನಮ್ಮ ಶಾಲೆಯ ಪಾಠಕ್ರಮದ ಮಹಾ ಲಕ್ಷಣಗಳಲ್ಲೊಂದಾಗಿತ್ತು. ತಿಂಗಳಿಗೆ ಎರಡು ಮೂರು ಸಾರೆ ಇಡೀ ಶಾಲೆಯನ್ನೇ ಪುಸ್ತಕಾಲಯದಲ್ಲಿ ಕೂಡಿಸಲಾಗುತ್ತಿತ್ತು. ಒಬ್ಬ ಅಥವಾ ಹೆಚ್ಚು ಜನ ತಪ್ಪುಗಾರರನ್ನು ಹತ್ತಿರದ ಕೋಣೆಗೆ ಎಳೆದೊಯ್ದು, ಅಲ್ಲಿ ಅವನಿಗೆ ರಕ್ತ ಬರುವ ವರೆಗೆ ಪ್ರಹಾರ ಮಾಡುತ್ತಿದ್ದರು. ಉಳಿದ ಹುಡುಗರು ಅವರ ಕ್ರಂದನವನ್ನು ಆಲಿಸಿ ಥರಥರ ನಡುಗುತ್ತ ಕುಳಿತಿರಬೇಕು. ಈ ಶಾಲೆಯನ್ನು ನಾನೆಷ್ಟು ದ್ವೇಷಿಸುತ್ತಿದ್ದೆ! ಅಲ್ಲಿ ನಾನು ಎರಡು ವರ್ಷಕ್ಕಿಂತ ಹೆಚ್ಚು ಕಾಲವನ್ನು ಎಂಥ ಕ್ಲೇಶದಿಂದ ದೂಡಿದೆ! ಪಾಠಗಳಲ್ಲಿ ನಾನೇನೂ ಪ್ರಗತಿ ಸಾಧಿಸಲಿಲ್ಲ; ಆಟಗಳಲ್ಲಂತೂ ಇಲ್ಲವೇ ಇಲ್ಲ. ಈ ಹೇಯ ಗುಲಾಮಗಿರಿಯಿಂದ ಪಾರಾಗಿ ಮನೆ ಸೇರಲು ಅವಕಾಶ ಕೊಡುವ ರಜಾಕಾಲ ಎಂದು ಬರುವುದೆಂದು ನಾನು ದಿನ-ದಿನ, ತಾಸು-ತಾಸು ಎಣಿಸತೊಡಗಿದೆ.

ಹನ್ನೆರಡು ವರ್ಷ ತುಂಬುತ್ತಲೇ ನಾನು ಪರೀಕ್ಷೆಗಳ ಅನುದಾರ ಪ್ರಾಂತವನ್ನು ಪ್ರವೇಶಿಸಿದೆ. ಪರೀಕ್ಷಕರಿಗೆ ಅತ್ಯಂತ ಪ್ರಿಯವಾದ ವಿಷಯಗಳು ಹೆಚ್ಚು ಕಡಿಮೆ ಯಾವಾಗಲೂ ನನಗೆ ಅತ್ಯಂತ ಅಪಥ್ಯವಾಗಿದ್ದವು. ಇತಿಹಾಸ, ಕಾವ್ಯ ಮತ್ತು ಪ್ರಬಂಧಲೇಖನ ಇವುಗಳಲ್ಲಿ ಪರೀಕ್ಷೆ ತೆಗೆದುಕೊಂಡಿದ್ದರೆ ನನಗೆ ತುಂಬ ಒಪ್ಪಿಗೆಯಾಗಬಹುದಿತ್ತು. ಆದರೆ ಪರೀಕ್ಷಕರು ಲ್ಯಾಟಿನ್ ಮತ್ತು ಗಣಿತದ ಪಕ್ಷಪಾತಿಗಳು. ಅವರ ಇಚ್ಛೆಯೋ ನನ್ನ ಇಚ್ಛೆಯೋ ? ಅಲ್ಲದೆ ನನಗೆ ಗೊತ್ತಿದ್ದ ವಿಷಯಗಳನ್ನು ಕೇಳಿದರೆ ನನಗೆ ಬಹಳ ಸಂತೋಷ. ಅವರು ಯಾವಾಗಲೂ ನನಗೆ ಗೊತ್ತಿಲ್ಲದ್ದನ್ನೇ ಕೇಳಲು ಯತ್ನಿಸುತ್ತಿದ್ದರು. ನಾನು ನನ್ನ ಜ್ಞಾನವನ್ನು ಪ್ರದರ್ಶಿಸಲು ಹಾತೊರೆಯುತ್ತಿದ್ದರೆ ಅವರು ನನ್ನ ಅಜ್ಞಾನವನ್ನು ಬಯಲಿಗೆಳೆಯಲು ಹವಣಿಸುತ್ತಿದ್ದರು. ಇದರ ಪರಿಣಾಮ ಗೊತ್ತೇ ಇದೆ. ನಾನು ಯಾವ ಪರೀಕ್ಷೆಯಲ್ಲಿಯೂ ಬೆಳಗಲಿಲ್ಲ.



## ಸರಸ—ಸಾಕ್ಷರ

ಸಾಕ್ಷರರು ವಿರುದ್ಧ ರಾದರೆ ರಾಕ್ಷಸರಾಗುವರು; ಸರಸರು ವಿಪರೀತರಾದರೂ ಸರಸತ್ವವನ್ನು ಬಿಡರು.

—ಸಂಸ್ಕೃತ ಸುಭಾಷಿತ

ಕೆರಳಿದರೆ ಭದ್ರಕಾಳಿ—ಆದರೆ ಈ ನಿಸರ್ಗ ಪ್ರಕೋಪದ ಉಪಕಾರ ಸ್ಮರಿಸಿ ತೀರದು

# ಜ್ವಾಲಾಮುಖಿಗಳನ್ನು ಶಪಿಸಬೇಡಿರಿ !

ಕರ್ನಾಟಕದ ಬಹುಭಾಗವು ನದಿಗಳಿಂದ ನೀರುಣಿಸಲ್ಪಟ್ಟ ಫಲವತ್ತಾದ ಕಪ್ಪು ಮಣ್ಣಿನಿಂದ ತನ್ನ ಮಕ್ಕಳಿಗೆ ಅನ್ನದಾನ ಮಾಡುವ ದಖ್ಖನ ಪೀಠಭೂಮಿಯಲ್ಲಿದೆ. ಈ ನಮ್ಮ ಪೀಠಭೂಮಿಯು ಭುವನ ಭಯಂಕರವಾದ ಜ್ವಾಲಾಮುಖಿಗಳ ದಾನ ವಾಗಿದೆಯೆಂದು ನೀವು ಬಲ್ಲಿರಾ ?

ಕೋಟ್ಯಂತರ ವರ್ಷಗಳ ಹಿಂದೆ, ಹಿಮಾಲಯ ಪರ್ವತಶ್ರೇಣಿ ಇನ್ನೂ ಹುಟ್ಟಿರದಿದ್ದಾಗ ಗಂಗೆಯ ಬಯಲು ಇನ್ನೂ ಸಮುದ್ರವಾಗಿದ್ದಾಗ ದಖ್ಖನ ಪೀಠಭೂಮಿಯು ಜಗತ್ತಿನ ಅತ್ಯುಗ್ರ ಜ್ವಾಲಾಮುಖಿ ಸ್ಫೋಟಗಳಲ್ಲೊಂದರ ಫಲವಾಗಿ ನಿರ್ಮಾಣವಾಯಿತು. ಆಗ ಹೊಮ್ಮಿ ಪಸರಿಸಿದ ಕುದಿಯುವ ಬಂಡೆಗಲ್ಲಿನ ರಸವು ದಖ್ಖನ ಪೀಠಭೂಮಿಯಲ್ಲಿ ಎರಡು ಮೈಲು ಆಳದ ವರೆಗೂ ನೀಡಿದೆ.

ದಕ್ಷಿಣಾಪಥಕ್ಕೆ ಜನ್ಮವಿತ್ತ ಜ್ವಾಲಾಮುಖಿ ಎಂದೋ ಶಾಂತವಾಗಿದೆ. ಆದರೆ ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿ ಇಂದಿಗೂ ಸುಮಾರು ೪೦೦ ಜ್ವಾಲಾಮುಖಿಗಳು " ಸಜೀವ "ವಾಗಿವೆ. ಇವು ನಿಸರ್ಗದ ಪ್ರಚಂಡ ಕುಲುಮೆಗಳು. ಇಲ್ಲಿ ಮಾನವ-ಇಂಜನಿಯರರಿಗೂ ಲೋಹಶಾಸ್ತ್ರಗಳಿಗೂ ಪಾತ್ರವಿಲ್ಲ. ಮನುಷ್ಯನಿಗೆ ಈ ಕುಲುಮೆಗಳನ್ನು ನಿಯಂತ್ರಿಸಲು ಸಾಧ್ಯವಿಲ್ಲ. ಆದರೆ ಅವುಗಳಿಂದ ಹೊರಬರುವ ಅಮೂಲ್ಯ ಪದಾರ್ಥಗಳಿಲ್ಲದೆ ಅವನ ನಿರ್ವಾಹವಾಗದು.

ಆದರೂ ಜ್ವಾಲಾಮುಖಿಯೆಂದರೆ ಮನುಷ್ಯನು ನಡುಗುತ್ತಾನೆ. ಅವನಿಗೆ ಅದರ ಉಪಕಾರಗಳು ಗೊತ್ತಿಲ್ಲ. ಶತಮಾನ ಶತಮಾನಗಳಿಂದ ಅವನು ಈ ಭದ್ರಕಾಳಿಯ ಕೋಪೋದ್ರೇಕದ ಅನುಭವ ಮಾತ್ರ ಹೊಂದಿದ್ದಾನೆ. ನೂರಾರು ವರ್ಷಗಳ ವರೆಗೆ ಶಾಂತವಾದಂತಿದ್ದ ಜ್ವಾಲಾಮುಖಿಗಳು ಒಮ್ಮಿಂದೊಮ್ಮೆ ಪೂತ್ಕರಿಸಿ ಸಾವಿರಗಟ್ಟಲೆ ನಿಶ್ಶಂಕ ಪ್ರಜೆಗಳನ್ನು ಯಮಲೋಕಕ್ಕಟ್ಟಿದ ಉದಾಹರಣೆಗಳಿವೆ. ಭೂಕಂಪವನ್ನು ಬಿಟ್ಟರೆ ಜ್ವಾಲಾಮುಖಿಯಂಥ ಬೇರೊಂದು ಘಾತಕ ಪ್ರಕೃತಿ ಪ್ರಕೋಪವಿರಲಾರದು.

ಕಳೆದ ೧೭೫ ವರ್ಷಗಳಲ್ಲಿ ಜ್ವಾಲಾಮುಖಿ ಮಾಡಿದ ಘೋರ ಕರ್ಮಗಳನ್ನು ನೋಡಿರಿ. ೧೭೮೩ರಲ್ಲಿ ಐಸ್‌ಲಂಡಿನ ಸ್ಕಪ್ತಾರ ಜ್ವಾಲಾಮುಖಿ ತನ್ನ ೨೨ ಬಾಯಿಗಳಿಂದ ಬೆಂಕಿ ಕಾರಿದಾಗ ಆ ದ್ವೀಪದ ಜನಸಂಖ್ಯೆಯಲ್ಲಿ ನೂರಕ್ಕಿಪ್ಪತ್ತೆರಡರಷ್ಟು ಜನರು ಸಾವಿಗೆ ತುತ್ತಾದರು. ೨೫ ವರ್ಷಗಳ ನಂತರ ಇಂಡೊನೇಶಿಯಾದ ತಂಬೋರೋ ಶಿಖರದ ಜ್ವಾಲಾಮುಖಿ ಉಕ್ಕಿ ಹರಿದಾಗ ೫೬,೦೦೦ ಜನರು ನೋಡನೋಡುತ್ತ ಸತ್ತರು.

ಜಾವಾ ಸುಮಾತ್ರಾ ದ್ವೀಪಗಳ ನಡುವಣ ಕ್ರಕಟೂ ಜ್ವಾಲಾಮುಖಿ ೧೮೮೩ರಲ್ಲಿ ಪುಟಿದೆದ್ದಿತು. ಅದರ ಸಪ್ಪಳ ೨,೦೦೦ ಮೈಲಿನಾಚೆಗಿದ್ದ ಹಡಗುಗಳಿಗೆ ಕೇಳಿಸಿತು. ಸ್ಫೋಟದ ದೆಸೆಯಿಂದ ಸಮುದ್ರದಲ್ಲಿ ೫೦ ಫೂಟೆತ್ತರ ಅದ್ಭುತ ತೆರೆಗಳೆದ್ದು ನೂರಾರು ಕರಾವಳಿ ಹಳ್ಳಿಗಳನ್ನು ಕೊಚ್ಚಿಕೊಂಡುಹೋಗಿ ೩೫,೦೦೦ ಜನರನ್ನು ಕಬಳಿಸಿದವು.

೧೯೦೨ರಲ್ಲಿ ಮಾರ್ಟಿನಿಕದಲ್ಲಿರುವ ಪೆಲೀ ಶಿಖರದ ಜ್ವಾಲಾಮುಖಿಯು ಉಗುಳಿದ ಸೂಕ್ಷ್ಮ

ಗಾರಿ ವೆಬ್‌ಸ್ಟರರ " ವಂಡರ್ಸ್ ಆಫ್ ಸಾಯನ್ಸ್ " ನಿಂದ ರೂಪಾಂತರ

ವಾದ ಕಿಡಿಗಳ ರಾಶಿಯು ಹತ್ತಿರದ ಸೆಂಟ್ ಪಿಯರಿ ಪಟ್ಟಣದ ಮೇಲೆ ಇಳಿಯಿತು. ಪಟ್ಟಣದ ೩೦,೦೦೦ ನಿವಾಸಿಗಳಲ್ಲಿ ಬದುಕಿದವರು ಇಬ್ಬರು ಮಾತ್ರ.



ಕೆಂಪು ಬಣ್ಣವು ಜಗತ್ತಿನ ಪ್ರಮುಖ ಜ್ವಾಲಾಮುಖಿ ಪ್ರದೇಶಗಳನ್ನು ತೋರಿಸುತ್ತದೆ

ಆದರೆ ಜೀವಂತವಿದ್ದರೂ ನಿರುಪದ್ರವಿಯಾದ ಜ್ವಾಲಾಮುಖಿಗಳೂ ಇವೆ. ಸಿಸಿಲಿ ದ್ವೀಪದ (ಭೂಮಧ್ಯ ಸಮುದ್ರ) ಉತ್ತರಕ್ಕಿರುವ ಸ್ಟ್ರಂಬೋಲಿ ಜ್ವಾಲಾಮುಖಿ ೨,೦೦೦ ವರ್ಷಗಳಿಂದ ತಾಸಿಗೊಮ್ಮೆ ಘೂತ್ಕರಿಸುತ್ತಿದ್ದರೂ ಮಾರಕವಾಗುವಷ್ಟು ಹಿಂಸೆಯನ್ನು ಒಮ್ಮೆಯೂ ಪ್ರದರ್ಶಿಸಿಲ್ಲ. ತಂಗನಿಯಾಕದ ನಂಗೊರೊಂಗೋರೊ ಶಿಖರವು ಒಂದಾನೊಂದು ಕಾಲದಲ್ಲಿ ಕೋಟ್ಯಂತರ ಖಂಡಿ ಲಾವಾರಸವನ್ನು ಕಾರಿದ್ದರೂ ಈಗ ಅದರ ೧೨ ಮೈಲುದ್ದದ ಬಾಯಿ ಮುಚ್ಚಿಹೋಗಿದೆ.

ಕಳೆದ ೪೦೦ ವರ್ಷಗಳಿಂದ ಜ್ವಾಲಾಮುಖಿಗಳು ಸುಮಾರು ೧,೯೦,೦೦೦ ಜನರನ್ನು ಕೊಂದಿರಬಹುದು. ಆದರೆ ಎರಡು ವರ್ಷದ ಮೋಟಾರ ಅಪಘಾತಗಳು ಜಗತ್ತಿನಲ್ಲಿ ಇದಕ್ಕಿಂತ ಹೆಚ್ಚು ಕೊಲೆಗಳನ್ನು ಮಾಡುತ್ತಿವೆ. ಜ್ವಾಲಾಮುಖಿಗಳು ಮಾಡಿದ ಉಪಕಾರ ನೋಡಿದರೆ ಅವುಗಳ ಉಪಟಳ ಏನೂ ಅಲ್ಲವೆನಿಸುವುದು.

ಜ್ವಾಲಾಮುಖಿಗಳು ನಮಗಾಗಿ ಸುಂದರ ಪರ್ವತ ಶಿಖರಗಳನ್ನು ಸೃಜಿಸಿವೆ, ದ್ವೀಪಗಳನ್ನುಂಟುಮಾಡಿವೆ. ಒಂದು ಲಕ್ಷ ವರ್ಷಕ್ಕೂ ಹಿಂದೆ ಶಾಂತ ಸಾಗರದ ಗರ್ಭದಲ್ಲಿ ೧೬,೦೦೦ ಅಡಿ ಆಳದಲ್ಲಿ ಕುದಿಯುತ್ತಿದ್ದ ಮೌನಾಲೋವಾ ಜ್ವಾಲಾಮುಖಿ ಕಾರಿದ ಲಾವಾರಸ ರಾಶಿಯಾಗಿ ಇಂದಿನ ಸುಂದರ ಹವಾಯಿ ದ್ವೀಪವಾಗಿದೆ. ಈ ದ್ವೀಪವಿಂದು ಸಮುದ್ರ ಮಟ್ಟದಿಂದ ೩ ಮೈಲೆತ್ತರದ ವರೆಗೂ ಏರಿದೆ. ಇದೆಲ್ಲ ಜ್ವಾಲಾಮುಖಿಯ ಕೆಲಸ. ಹಿಂದೀ ಸಾಗರದ ಕ್ರಿಸ್ಮಸ್ ದ್ವೀಪಗಳೂ ಉತ್ತರ ಅಟ್ಲಾಂಟಿಕದ ೬೦,೦೦೦ ಚದುರು ಮೈಲಿನಷ್ಟು ವಿಶಾಲವಾದ ದ್ವೀಪಗಳೂ ಜ್ವಾಲಾಮುಖಿಗಳ ಪ್ರಸಾದವೇ.

ಭೂಮಿಯ ಗತಯುಗಗಳಲ್ಲಿ ಲಾವಾರಸ ಧಾರಾಳವಾಗಿ ಹರಿಯುತ್ತಿದ್ದುದರಿಂದಲೇ ಇಂದು ಭೂತಲದ ಸ್ವರೂಪ ಹೀಗಾಗಿದೆ. ಜ್ವಾಲಾಮುಖಿಗಳಿಂದ ಮಾತ್ರವಲ್ಲ, ಭೂತಲದಲ್ಲಿದ್ದ ದೊಡ್ಡ ಬಿರುಕುಗಳಿಂದಲೂ ಭೂಗರ್ಭದ ಕುದಿಯುವ ರಸ ಹೊರಹೊಮ್ಮಿ ಅನೇಕ ಪರ್ವತಶ್ರೇಣಿಗಳನ್ನುಂಟುಮಾಡಿದೆ.

ಭಾರತ ದಖ್ಖನ ಪೀಠಭೂಮಿಯಲ್ಲದೆ ಅಮೇರಿಕ, ಅರ್ಜಂಟಿನಾ, ದಕ್ಷಿಣಆಫ್ರಿಕ, ಬ್ರೆಜಿಲಗಳಲ್ಲಿ ಲಕ್ಷಗಟ್ಟಲೆ ಚದುರ ಮೈಲು ಹಬ್ಬಿರುವ ಪೀಠಭೂಮಿಗಳು ಹೀಗೆಯೇ ಉಂಟಾಗಿವೆ.

ಜಗತ್ತಿನ ಅನೇಕ ಪ್ರದೇಶಗಳ ಭೂಮಿಗಳನ್ನು ಜ್ವಾಲಾಮುಖಿಗಳು ಹುಲುಸಾಗಿ ಮಾಡಿವೆ. ಲಾವಾದ ಸೂಕ್ಷ್ಮಕಣಗಳೂ ಪ್ರವಾಹಗಳೂ ಕಾಲಾಂತರದಲ್ಲಿ ಕೊಳೆತು ಮೆದುವಾದ ಮಣ್ಣಾಗುತ್ತವೆ. ಜಾವಾ, ಫ್ರಾನ್ಸ್, ಗೌಟೆಮಾಲಾ, ಸಾಲ್ವಡೋರ ಮೊದಲಾದೆಡೆಗಳಲ್ಲಿ ಇಂಥ ಭೂಮಿಗಳಿವೆ.

ಭೂಗರ್ಭದಲ್ಲಿ ಹುದುಗಿದ್ದ ಲೋಹ ಮೊದಲಾದ ಖನಿಜಗಳನ್ನು ಮನುಷ್ಯನ ಕೈಗೆ ನಿಲುಕುವಷ್ಟು ಹತ್ತಿರ ತಂದಿಟ್ಟ ಪುಣ್ಯ ಜ್ವಾಲಾಮುಖಿ



**ಜಗತ್ತಿನ ಅತ್ಯುನ್ನತ ಸಜೀವ ಜ್ವಾಲಾಮುಖಿ "ಕೊಟೊಪಾಕ್ಸಿ". ಸಮುದ್ರ ಮಟ್ಟದಿಂದ ೧೯,೪೯೮ ಫೂಟೆತ್ತರದಲ್ಲಿರುವ ಈ ಜ್ವಾಲಾಮುಖಿ ಇಕ್ವೆಡೋರದ ಆಂಡಿಯನ್ ಪರ್ವತಶ್ರೇಣಿಯಲ್ಲಿದೆ**

ಗಳದೇ. ತಾಮ್ರ, ಗಂಧಕ, ಬೊರಾಕ್ಸ ಮೊದಲಾದ ಹಲವು ಖನಿಜಗಳ ಗಣಿಗಳನ್ನು ಜ್ವಾಲಾಮುಖಿಗಳು ರಚಿಸಿವೆ.

ನಾವು ವಜ್ರವೆಂದು ಕರೆಯುವ ಆ "ತಳತಳಿಸುವ ಇದ್ದಲಿ" ಯನ್ನು ತಯಾರಿಸುವ ಕುಲುಮೆಯೂ ಜ್ವಾಲಾಮುಖಿಯೇ. ಆತ್ಯಂತಿಕ ಒತ್ತಡಕ್ಕೆ ಸಿಲುಕಿದ ಕುದಿಯುವ ಬಂಡೆಗಲ್ಲಿನ ರಸದಲ್ಲಿ ವಿಶಿಷ್ಟ ಕಣಗಳು ಒಂದೆಡೆ ಸೇರಿ ಪುಟಗೊಂಡು ಪಳಕುಗಳಾಗಿ ವಜ್ರವೆನಿಸುವವೆಂದು ನಂಬಲಾಗಿದೆ.

ಜಗತ್ತಿನ ಅತಿ ಸಮೃದ್ಧವಾದ ವಜ್ರದ ಗಣಿಗಳು ದಕ್ಷಿಣ ಆಫ್ರಿಕದಲ್ಲಿವೆ. ಇವೆಲ್ಲವೂ ಈಗ ಶಾಂತವಾದ ಜ್ವಾಲಾಮುಖಿ ಪ್ರದೇಶದಲ್ಲಿಯೇ ಇವೆ. ದೂರದಲ್ಲಿಯೂ ಕೆಲವೆಡೆ ರತ್ನಗಳು ಸಿಕ್ಕಿದ್ದುಂಟು. ಆದರೆ ಅವು ಕೂಡ ಈ ಸ್ಥಳಗಳಿಂದಲೇ ನದಿಗಳ ಪ್ರವಾಹದಲ್ಲಿ ಹರಿದು ಹೋದವುಗಳೆಂದು ನಂಬಲಾಗಿದೆ.

ವಜ್ರದ ಮಾತಂತಿರಲಿ, ನಮ್ಮ ಜೀವದ ಜೀವವಾದ ನೀರಿನ ಕತೆಯೇನು? ಈ ಭೂಮಿಯ ಮೇಲಿನ ನೀರಿನ ಬಹುಭಾಗವು, ಕೆಲ ಭೂಗರ್ಭಶಾಸ್ತ್ರಿಗಳ ಮತದಲ್ಲಿ ಎಲ್ಲ ಸಾಗರ ಸರೋವರ ನದಿಗಳ ಎಲ್ಲ ನೀರು, ಜ್ವಾಲಾಮುಖಿಗಳ ಮೂಲಕ ಉಗಿಯ ರೂಪದಲ್ಲಿ ಭೂಗರ್ಭದಿಂದ ಹೊರಗೆ ಬಂದದ್ದಾಗಿದೆ. ಜ್ವಾಲಾಮುಖಿಗಳ ಈ ಉಪಕಾರವಿಲ್ಲದಿದ್ದರೆ ಈ ಭೂಮಿಯ ಮೇಲೆ ನೀರೇ ಇರುತ್ತಿದ್ದಿಲ್ಲ. ಪರಿಣಾಮವಾಗಿ ನಾವೂ ಇರುತ್ತಿದ್ದಿಲ್ಲ.

ಜೀವನಿರ್ಮಾಣಕ್ಕೆ ಅತ್ಯಗತ್ಯವಾದ, ಮತ್ತು ಸಸ್ಯ ಜೀವನಕ್ಕೆ ಆಧಾರವಾದ ಅಂಗಾರಾಮ್ಲವೂ ಜ್ವಾಲಾಮುಖಿ ಉಗುಳಿದ್ದೇ. ಸಸ್ಯಗಳು ಪ್ರತಿ ವರ್ಷ ಕೋಟ್ಯಂತರ ಟನ್ ಅಂಗಾರಾಮ್ಲ ವಾಯುವನ್ನು ಗಾಳಿಯಿಂದ ಹೀರಿಕೊಳ್ಳುತ್ತವೆ. ಜ್ವಾಲಾಮುಖಿಗಳಿಲ್ಲದಿದ್ದರೆ ಈ ಕಳೆದು ಹೋದ ವಾಯುವನ್ನು ತುಂಬಿಕೊಳ್ಳುವದು ಅಸಾಧ್ಯವಾಗಿ ಜೀವಕೋಟಿಯ ಅಸ್ತಿತ್ವಕ್ಕೇ ವಿಪತ್ತು ಬರುತ್ತಿತ್ತು.

ಜ್ವಾಲಾಮುಖಿಗಳಿಂದ ಲಭ್ಯವಾಗುವ ಪದಾರ್ಥಗಳ ಪರಿಮಾಣವನ್ನು ಇನ್ನೂ ಸರಿಯಾಗಿ ಅಳೆಯುವುದಾಗಿಲ್ಲ. ಆದರೆ ಅಮೇರಿಕದ ಅಲಾಸ್ಕದ "ಸಹಸ್ರ ಧೂಮ ಕಂದರ" ವೊಂದರಲ್ಲೇ ನೀರಿನ ಆವಿಯಲ್ಲದೆ ೧೨.೫ ಲಕ್ಷ ಟನ್ ಹೈಡ್ರೊಕ್ಲೋರಿಕ್ ಆಮ್ಲ, ೨.೫ ಲಕ್ಷ ಟನ್ ಹೈಡ್ರೊಜನ್ ಸಲ್ಫೈಡ, ೨.೫ ಲಕ್ಷ ಟನ್ ಹೈಡ್ರೊಫ್ಲೋರಿಕ್ ಆಮ್ಲ ಇಷ್ಟು ಪ್ರತಿವರ್ಷ ಉತ್ಪಾದನೆ ಹೊಂದುತ್ತವೆಂದು ಒಬ್ಬ ವಿಜ್ಞಾನಿ ಲೆಕ್ಕಹಾಕಿದ್ದಾನೆ.

ಜ್ವಾಲಾಮುಖಿಯಿಂದ ವಿದ್ಯುತ್ತನ್ನು ಕೂಡ ತಯಾರಿಸಲಾಗುತ್ತದೆಂದರೆ, ಹಲವರಿಗೆ ಅಚ್ಚರಿಯಾದೀತು. ಇಟಲಿಯಲ್ಲಿ ೧೯೦೪ ರಿಂದಲೇ ನೈಸರ್ಗಿಕ ಉಗಿಯಿಂದ ವಿದ್ಯುತ್ತನ್ನು ತಯಾರಿಸುತ್ತಿದ್ದಾರೆ. ಈಗ ಟಸ್ಕನಿಯೊಂದರಲ್ಲೇ ಈ ರೀತಿ ೧ ಲಕ್ಷ ಕಿಲೋವಾಟ್ ವಿದ್ಯುತ್ತು ಹೊರಡುತ್ತದೆ. ಜ್ವಾಲಾಮುಖಿಯಿಂದ ಹವೆಗೆ ದೊರೆಯುವ ಉಷ್ಣತೆಯನ್ನೂ ಅಲಕ್ಷಿಸಲಾಗದು. ಅಮೇರಿಕದ ಯೆಲೊಸ್ಟೋನ್ ರಾಷ್ಟ್ರೀಯ ಉದ್ಯಾನದ ಬಿಸಿನೀರ ಬುಗ್ಗೆಗಳಿಂದ ಹೊರಡುವ ಉಷ್ಣತೆಯೊಂದರಿಂದಲೇ ವರ್ಷಕ್ಕೆ ೯.೪ ಕೋಟಿ ಟನ್ ಬರ್ಫ ಕರಗಿಸಬಹುದಂತೆ.

ಜ್ವಾಲಾಮುಖಿಯ ಕೊಡುಗೈ ಹೀಗಿದ್ದರೂ ಅದರ ಒಳಗುಟ್ಟು ಯಾರಿಗೂ ಸರಿಯಾಗಿ ಗೊತ್ತಿಲ್ಲ. ಎರಡು ಸಾವಿರ ವರ್ಷಗಳಿಂದ

ಶೋಧಿಸಿದರೂ ಜ್ವಾಲಾಮುಖಿಗಳ ಸಮಸ್ಯೆ ಸರಳವಾಗದೆ ಜಟಿಲವೇ ಆಗುತ್ತಿದೆ. ಅದು ಸ್ಫೋಟಗೊಳ್ಳಲು ಯಾವ ಶಕ್ತಿಗಳು ಕಾರಣ, ಅದಕ್ಕೆ ಅಗತ್ಯವಾದ ಉಷ್ಣತೆ ಎಲ್ಲಿಂದ ಒದಗುತ್ತದೆ ಎಂಬುದು ಪ್ರಶ್ನೆಯಾಗಿಯೇ ಉಳಿದಿದೆ.

ಸಮುದ್ರದ ನೀರು ಭೂಗರ್ಭದೊಳಗೆ ಒಸರಿ ಅಲ್ಲಿನ ಆಲ್ಕಲಿ ಮತ್ತು ಲೋಹಗಳಲ್ಲಿ ರಾಸಾಯನಿಕ ಕ್ರಿಯೆಯುಂಟುಮಾಡುವುದರಿಂದ ಹುಟ್ಟಿದ ಉಷ್ಣತೆಯಿಂದಲೇ ಜ್ವಾಲಾಮುಖಿಗಳು ಸ್ಫೋಟಗೊಳ್ಳುವವೆಂಬ ನಂಬಿಕೆ ೧೯೦೦ ವರೆಗೂ ಬಲವಾಗಿತ್ತು. ಈಗ ಅದನ್ನು ವಿಜ್ಞಾನಿಗಳು ತಿರಸ್ಕರಿಸಿದ್ದಾರೆ.

ಜ್ವಾಲಾಮುಖಿಗಳು ಹೆಚ್ಚಾಗಿ ಪರ್ವತ ಪ್ರದೇಶದಲ್ಲಿರುತ್ತವೆ. ಆದ್ದರಿಂದ ಕೆಲ ಸಂಶೋಧಕರು, ಪರ್ವತಗಳ ಭಾರವು ಭೂಮಿಯ ಹೊರ ಪದರಿನ ಮೇಲೆ ಅತಿಶಯವಾಗಿ ಬೀಳುವುದರಿಂದ ಕೆಳಗಿನ ಪದರುಗಳು ಕರಗಿ ಜ್ವಾಲಾಮುಖಿಗೆ ಬೇಕಾದ ಶಕ್ತಿಯನ್ನು ಹೊರಹೊಮ್ಮಿಸುವವೆಂದು ಅಭಿಪ್ರಾಯಪಡುತ್ತಾರೆ.

ಕೆಲ ವಿಜ್ಞಾನಿಗಳು ಯುರೇನಿಯಂ ಮೊದಲಾದ ವಿಕಿರಣಶೀಲ ಪದಾರ್ಥಗಳ ಕ್ರಿಯೆಯಿಂದ ಭೂಮಿಯಲ್ಲಿ 'ಬೊಕ್ಕೆ' ಗಳು ಏಳುವದರಿಂದ ಜ್ವಾಲಾಮುಖಿಗಳಾಗುತ್ತವೆನ್ನುತ್ತಾರೆ.

ಹವಾಯಿ ದ್ವೀಪಸ್ತೋಮದ ಜ್ವಾಲಾಮುಖಿಗಳ ಚರ್ಯೆಯಿಂದ ಅವುಗಳಿಗೂ ಸೂರ್ಯನ ಕಲೆಗಳಿಗೂ ಸಂಬಂಧವಿರಬಹುದೆಂದೂ ತರ್ಕಿಸಲಾಗಿದೆ. ಬೇರೆ ಕೆಲವರು ಸೂರ್ಯಚಂದ್ರರ ಗುರುತ್ವಾಕರ್ಷಣೆಯ ಸೆಳೆತವೇ ಜ್ವಾಲಾಮುಖಿಯ ಪ್ರಚೋದಕವೆನ್ನುತ್ತಾರೆ.

ಬಹುಶಃ ಇವೆಲ್ಲ ಕಾರಣಗಳೂ ಸೇರಿ ಜ್ವಾಲಾಮುಖಿಗಳು ಹೊರಹೊಮ್ಮುತ್ತಿರಬಹುದು.

ಜ್ವಾಲಾಮುಖಿಗಳಿಗೆ ಪ್ರಚೋದನೆ ಎಲ್ಲಿಂದಲೇ ಬರಲಿ, ನಿಸರ್ಗದ ಈ ಕುಲುಮೆಯಿಂದ ಹೊರಡುವ ಅಪರಿಮಿತಸಂಪತ್ತನ್ನು ನಾವೆಲ್ಲರೂ ಅನುಭವಿಸಲೇಬೇಕಲ್ಲವೆ ?



**ಸಿಸಿಲಿ ದ್ವೀಪದಾಚೆಗಿರುವ ಸ್ಟ್ರಾಂಬೋಲಿ ಜ್ವಾಲಾಮುಖಿ ಇದು ೧೯೩೦ರಲ್ಲಿ ಒಮ್ಮೆ ದೊಡ್ಡದಾಗಿ ಉರಿದೆದ್ದಿತು. ಇದಲ್ಲದೆ ಈ ಜ್ವಾಲಾಮುಖಿ ಆಗಿಂದಾಗ್ಗೆ ಸಾಧಾರಣವಾಗಿ ಘೂತ್ಕರಿಸುತ್ತಾ ಆಕಾಶದಲ್ಲಿ ೨೦೦ ಫೂಟಿನವರೆಗೂ ಬಸಾಲ್ಟಿನ ಕಿಡಿಗಳನ್ನು ಉಗುಳುತ್ತಿರುತ್ತದೆ.**



## ಕಾವ್ಯಗಣಿತ

ಕಾವ್ಯದ ಗಣಿತದಲ್ಲಿ ಮೊತ್ತವು ಅಂಶಗಳ ಕೂಟಕ್ಕಿಂತ ದೊಡ್ಡದಾಗಿರುತ್ತದೆ.

—ಜಾರ್ಜ್ ಬಾರ್ಕರ

# ಈ ಶತ್ರುವನ್ನು ಬಲ್ಲಿರಾ ?

ಒಂದು ಸ್ಥಳದಲ್ಲಿ ಹೆಚ್ಚು, ಒಂದು ಸ್ಥಳದಲ್ಲಿ ತುಸು ಕಡಿಮೆ ಪ್ರಮಾಣದಲ್ಲಿ ಕಂಡು ಬಂದರೂ ಸರ್ವವ್ಯಾಪಿಯಾಗಿರುವ ನೊಣಗಳನ್ನು ಎಲ್ಲರೂ ಬಲ್ಲರು. ಆಹಾರ ಪದಾರ್ಥಗಳಿಗೆ ಮುಕುರಿದಾಗ "ಏನು ತ್ರಾಸಪ್ಪಾ!" ಎಂದೊ, ಮಧ್ಯಾಹ್ನ ಮಲಗಿದಾಗ ಮೈಮೇಲೆ ಸಿಕ್ಕಲ್ಲಿ ಕುಳಿತು ನಿದ್ದೆಗೆ ವನ್ನಾದರೂ ನೊಣಗಳ ನಾಶಕ್ಕಾಗಿ ಮಾಡುವದಿಲ್ಲ. ಜನರಿಗೆ ಈ ನೊಣಗಳಲ್ಲಿರುವ ಕೇಡಿನ ಶಕ್ತಿಯ ಜ್ಞಾನವಿಲ್ಲದಿರುವದೇ ಇದಕ್ಕೆ ಕಾರಣವಾಗಿದೆ. ನೊಣಗಳು ಸೊಳ್ಳೆ, ತಗಣಿಗಳಂತೆ ಕಡಿಯುವದಿಲ್ಲವಾದ್ದರಿಂದ ಅವು ನಿರುಪದ್ರವಿಗಳೆಂದೇ ಸಾಮಾನ್ಯವಾಗಿ ನಾವು ಭಾವಿಸುತ್ತೇವೆ.




ಭಂಗ ತಂದಾಗ "ಹಾಳಾಗಲಿ" ಎಂದೊ ನಾವು ನೊಣಗಳನ್ನು ಶಪಿಸುತ್ತೇವೆಯೆ ವಿನಾ ಇತರ ಸಂದರ್ಭಗಳಲ್ಲಿ ಅವುಗಳ ಬಗ್ಗೆ ಹೆಚ್ಚು ವಿಚಾರ ಮಾಡುವದಿಲ್ಲ. ಸೊಳ್ಳೆಗಳ ಕಾಟ ತಪ್ಪಿಸಿಕೊಳ್ಳಲು, ತಗಣಿಯ ತೊಂದರೆ ನಿವಾರಿಸಿಕೊಳ್ಳಲು, ಮಾಡುವ ಪ್ರಯತ್ನಗಳಲ್ಲಿ ಒಂದು ಶತಾಂಶ ಪ್ರಯತ್ನ

ಆದರೆ ಸತ್ಯ ಸಂಗತಿ ಬೇರೆಯೆ ಇದೆ. ಅದನ್ನರಿತುಕೊಂಡಾಗ ," ಎಲಾ ! " ಎನ್ನುವಂತಾಗುವದು. ನೊಣವು ಜನರ ಶತ್ರು ನಂ. ೧ ಎಂದರೆ ಆಶ್ಚರ್ಯಾಘಾತವಾಗುವದು.

ಜಗತ್ತಿನ ತಾಪಗಳಲ್ಲಿ ಬಹಳಷ್ಟಕ್ಕೆ ಕಾರಣಗಳು ಮೊದಲಿಗೆ ತೀರ ಕ್ಷುಲ್ಲಕವಾಗಿ ಕಂಡು ಬರುತ್ತವೆ. ಮಳೆಯ ಹನಿಗಳು ವಿಪರೀತವಾಗಿ ಬಿದ್ದಾಗ ಮಹಾಪೂರ ಬರಬಹುದು. ಒಂದೇ

ಒಂದು ಚಿಕ್ಕ ಕಲ್ಲು ಸ್ಥಳ ತಪ್ಪಿದರೆ ಪರ್ವತದ ಭಾಗಕ್ಕೆ ಭಾಗವೇ ಕುಸಿದುಬೀಳಬಹುದು.

ಅದರಂತೆಯೆ ಮನೆ-ಮನೆಯಲ್ಲಿ ಅಂಗಡಿ-ಅಂಗಡಿಯಲ್ಲಿ ಕಂಡುಬರುವ ನೊಣವು ತನ್ನ ದೇಹ ಮತ್ತು ಬಾಯಿಯಲ್ಲಿ ರೋಗ ಪ್ರಸಾರಕ ಜಂತುಗಳನ್ನು ಅತ್ತಿಂದಿತ್ತ ಒಯ್ಯುವದು. ಚಿಕ್ಕ ಮಕ್ಕಳ ಅತಿಸಾರದಿಂದ ಹಿಡಿದು ವಿಷಮಜ್ವರದಂಥ ಭಯಂಕರ ರೋಗದ ವರೆಗೆ ಅನೇಕ ಜಾಡ್ಯಗಳ ಪ್ರಸಾರಕ್ಕೆ ನೊಣಗಳು ಕಾರಣವಾಗುವವು.

ಸೊಳ್ಳೆ ಮತ್ತು ಇನ್ನಿತರ ರಕ್ತ ಹೀರುವ ಕೀಟಕಗಳೊಂದಿಗೆ ಹೋಲಿಸಿ ನೋಡುವಾಗ ನೊಣ ತೀರ ಸಾಧು ಎನಿಸುವದು. ಆದರೆ ಸದಾ ಮನೆಯೊಳಗೆಯೆ ಇರುವ ಮತ್ತು ಯಾವ ಆಹಾರ ವಸ್ತುವೇ ದೃಷ್ಟಿಗೆ ಬೀಳಲಿ, ಅದರ ಮೇಲೆ ತಟಕ್ಕನೆ ಹೋಗಿ ಕೂಡ್ರುವ ನೊಣವು ಮನುಷ್ಯನಿಗೆ ಮೊದಲನೆಯ ಕ್ರಮಾಂಕದ ಹಾಗು ಅತಿ ಗಂಡಾಂತರಕಾರಿಯಾದ ಶತ್ರುವಾಗಿದೆ.

ನೊಣಗಳು ತಾಸಿಗೆ ಮೂವತ್ತು ಮೈಲು ವೇಗದಲ್ಲಿರುವ ಮೋಟರು ಅಥವಾ ಟ್ರೇನಿನೊಂದಿಗೆ ಓಡುವ ಸಾಮರ್ಥ್ಯ ಪಡೆದಿವೆ. ಇವುಗಳ ಕಾಲಿಗೆ ಮೆತ್ತನ್ನ ಗಾದಿಯಂಥ ಭಾಗವಿದ್ದು ಅದರಿಂದ ಒಂದು ಅಂಟುದ್ರವ ಹೊರಬೀಳುವದರಿಂದ ಇವು ಕನ್ನಡಿಯ ಮೇಲೆಯೂ ಮಾಡಿನ ಮೇಲೆ ತಲೆ ಕೆಳಗಾಗಿಯೂ ಚಲಿಸಬಲ್ಲವು.

ಮನೆಯ ನೊಣಗಳು ರೋಗವನ್ನು ಎಷ್ಟು ದೂರ ಒಯ್ಯಬಲ್ಲವೆಂಬುದು ಈಚೆಗೆ ಕ್ರಿಮಿಯಾ ಮತ್ತು ಟೆಕ್ಸಾಸದಲ್ಲಿನ ಪ್ರಯೋಗಗಳಿಂದ ತಿಳಿಯಿತು. ಕೆಲ ನೊಣಗಳಿಗೆ ರೇಡಿಯೊ ವಿಕಿರಣ ಪ್ರಯೋಗ ಮಾಡಿ ಅವನ್ನು ಬಿಡಲಾಯಿತು. ಟೆಕ್ಸಾಸದಲ್ಲಿ ಹೀಗೆ ಗುರುತು ಹಾಕಿದ ನೊಣಗಳು ೩೨೦ ಮೀಟರ (ಸುಮಾರು ಒಂದೂವರೆ ಫರ್ಲಾಂಗ್) ದೂರದ ವರೆಗೂ ಕಾಣಿಸಿದವು. ಇವು ಪಾಯಖಾನೆಗಳಲ್ಲಿ ಕುಳಿತ ನೊಣಗಳಾಗಿದ್ದುದರಿಂದ ಅವುಗಳ ರೋಗವಾಹಕ ಪಾತ್ರವನ್ನು ಸುಲಭವಾಗಿ ಊಹಿಸಬಹುದು.

ಬೇರೆ ಕೆಲ ಪರಿಶೀಲನೆಗಳಲ್ಲಿ ನೊಣಗಳು ೨೦ ಮೈಲು ದೂರದ ವರೆಗೂ ಹಾರಿದ್ದವೆಂದು ಕಂಡುಬಂತು.

ತಮ್ಮ ಸ್ವಂತ ರೆಕ್ಕೆಗಳ ಬಲವಲ್ಲದೆ ನೊಣಗಳೂ ಇತರ ಕೀಟಗಳೂ ಬೇರೆ ವಾಹನಗಳನ್ನೂ ಉಪಯೋಗಿಸುತ್ತವೆ. ರೇಲ್ವೆಯಿಂದ ಹಿಡಿದು ವಿಮಾನದ ವರೆಗೆ ಎಲ್ಲ ಮಾನುಷ ವಾಹನಗಳಲ್ಲಿಯೂ ಅವು ತಿಕೀಟಿಲ್ಲದ ಪ್ರಯಾಣಿಕರಾಗಿ ರೋಗಗಳನ್ನು ಹಬ್ಬಿಸುವ ಏಜಂಟರ ಕೆಲಸ ಮಾಡುತ್ತವೆ.

ರೋಗಪ್ರಸಾರ ಮಾಡಿ ನೊಣವು ಪ್ರತಿ ವರ್ಷವೂ ಜಗತ್ತಿನಲ್ಲಿ ಸಹಸ್ರಾರು ಜನರ ಮರಣಕ್ಕೆ ಕಾರಣವಾಗುತ್ತದೆ. ಇವುಗಳ ನಾಶಕ್ಕೆಂದು ಶೋಧಿಸಿದ ಔಷಧಗಳು ಇನ್ನೂ ಸಾಕಷ್ಟು ಪ್ರಯೋಜನಕಾರಿಯಾಗಿಲ್ಲ. ಡಿ. ಡಿ. ಟಿ. ಕೀಟಕನಾಶಕವನ್ನು ಕೆಲ ನೊಣಗಳು ದಕ್ಕಿಸಿಕೊಂಡುಬಿಟ್ಟಿವೆ. ಪ್ರತಿಯೊಂದು ಮನೆಯಲ್ಲೂ ಈ ನೊಣಗಳ ಕಾಟ ಕಡಿಮೆಯಾಗುವಂತೆ ಮಾಡುವದು ಆರೋಗ್ಯರಕ್ಷಣೆಗೆ ಅತ್ಯಂತ ಮಹತ್ವದ್ದಾಗಿದೆ. ಆಹಾರ ಪದಾರ್ಥಗಳನ್ನು ಸದಾ ಮುಚ್ಚಿಡುವದು ಕ್ಷೇಮಕರವಾಗಿದೆ.



## ಗೊತ್ತಿದ್ದರೆ ಹೇಳಿ!

ಕತ್ತೆಯ ಹಾಲನ್ನು ಮಾರುವ ದೇಶಗಳಿರುವಂತೆ ಇಂಗ್ಲಿಸ್ತಾನದಲ್ಲಿ ಸ್ತ್ರೀಯರ ಎದೆ ಹಾಲನ್ನೂ ಮಾರುತ್ತಾರೆ.



ಶೋಪನ್‌ಹೋರ ಹೇಳಿದ ಕಥೆ

# ಸಹ್ಯ ಅಂತರ

ಸಂಗ್ರಾಹಕರು: ಹಾ. ವೆಂ. ನಾಗೇಶ

ಅದೇ ಆಗ ಅಸಹನೀಯವಾದ ಚಳಿಗಾಳಿ ಬೀಸುತ್ತಲಿತ್ತು. ನೆಲವೆಲ್ಲ ಹಿಮದಿಂದ ಮುಚ್ಚಿ ಹೋಗಿತ್ತು. ಅಲ್ಲೊಂದು ಇಲ್ಲೊಂದು ಗೂಡಿನಲ್ಲಿ ಅಡಗಿಕೊಂಡಿದ್ದ ಹಕ್ಕಿಗಳು ಆ ಚಳಿಗಾಳಿಗೆ ಬೇಸತ್ತವು; ಬೇಸತ್ತು ಬೈದವು. ಒಬ್ಬರ ಗೋಳನ್ನು ಇನ್ನೊಬ್ಬರಲ್ಲಿ ತೋಡಿಕೊಳ್ಳಲಾರದಷ್ಟು ಅಂತರವಿತ್ತು ಅವುಗಳಲ್ಲಿ. ಚಳಿ ಇನ್ನೂ ಜೋರಾಗಿ ಮುತ್ತಿ ಬರಲು ಅವು ಹಾರುತ್ತ ಹಾರುತ್ತ ಪರಸ್ಪರ ಹತ್ತಿರಹತ್ತಿರ ಬಂದವು. ತಮ್ಮ ಗೋಳನ್ನು ಕಂಡಷ್ಟು ಕಾಣದಷ್ಟು ತಮ್ಮೊಳಗೆ ತೋಡಿಕೊಂಡವು. ಚಳಿ ಕಾಯಿಸಲೆಂದು ಗರಿಗೆದರಿ ಒಂದರ ಮೈಗೊಂದರಂತೆ ಹತ್ತಿಕೊಂಡವು. ತುಸು ಬೆಚ್ಚಗೆನಿಸಿತು. ಇನ್ನೂ ಕೆಲ ಕ್ಷಣ ಅವು ಒಂದಕ್ಕೊಂದು ಮೈತಿಕ್ಕಿಕೊಂಡವು. ಈಗ ಆ ಮೈಸೆಕೆ ತಡೆಯದಾಯಿತು. ಅವು ಕೂಡಲೇ ತಾವು ಬಂದ ಕಡೆಗೆ ಓಟಕಿತ್ತವು.

ತಿರುಗಿ ಅದೇ ಹಿಂದಿನ ಚಳಿಯ ಅನುಭವವಾಯಿತು ಆ ಹಕ್ಕಿಗಳಿಗೆ! ತಾವಿನ್ನು ಒಬ್ಬರೊಬ್ಬರ ಹತ್ತಿರವಿದ್ದರೇ ಚೆನ್ನೆಂದು ಪುನಃ ಅವು ಒಂದನ್ನೊಂದು ಸಮೀಪಿಸಿದವು. ಹತ್ತಿಕೊಂಡಿದ್ದರೆ ಮೈಸೆಕೆ ತಡೆಯಲಾರೆವೆಂದು ಒಂದಿಷ್ಟು ದೂರದಲ್ಲಿ ನಿಂತುಕೊಂಡವು. ತೀರ ದೂರವೆಂದರೆ ಅಸಾಧ್ಯ ಚಳಿ; ಹತ್ತಿರವೆಂದರೆ ಅಸಹ್ಯ ಸೆಕೆ. ಈ ನಡುವಣ ನಿಟ್ಟಿನಲ್ಲಿ ಅವುಗಳಿಗೆ ಹಾಗೂ ಹೀಗೂ ಬಾಳು ಸಹ್ಯವೆನಿಸಿತು.

ಆದರೆ, ಆಗಲೇ ಕೆಲವು ಹಕ್ಕಿಗಳು ತಾವು ತುಸು ಈಚೆ, ತಾವು ತುಸು ಆಚೆಯೆಂದು ಜಗಳ ಕೆದರಹತ್ತಿದ್ದವು. ತನಗೆ ಈ ಸ್ಥಳ ತನಗೆ ಆ ಸ್ಥಳವೆಂದು ಕಾಲು ಕೆದರಿ ಜಗಳಕ್ಕೆ ನಿಂತೂಬಿಟ್ಟವು. ತುಸು ಹೆಚ್ಚು ಸಹ್ಯವಾದ ಅಂತರಕ್ಕಾಗಿ ಅವು ಕಾದಾಟ ನಡೆಸಿದವು.

ಕಣ್ಣು ಕಾಣದ ದೂರಕ್ಕೆ ನಡೆದಾಗ ಅಸಾಧ್ಯ ಚಳಿಯೆಂದೂ ತೀರ ಹತ್ತಿರಕ್ಕೆ ಬಂದಾಗ ಅಸಹ್ಯ ಸೆಕೆಯೆಂದೂ ದೂರಿಕೊಂಡವು. ಸಹ್ಯವೆನಿಸುವ ಅಂತರದಲ್ಲಿ ನಿಂತುಕೊಂಡಾಗ ತಿರುಗಿ ಎಂದಿನಂತೆ ಜಗಳದಲ್ಲಿ ನಿರತವಾದವು.



# ಸಾಹಿತ್ಯದಲ್ಲಿ "ನಾವು"....

"ಜಬ ದಿಲ ಹೀ ಟೂಟ ಗಯಾ ಹಮ ಜೀಕೇ ಕ್ಯಾ ಕರೇಂಗೆ" ರಾತ್ರಿ ತಿರುಗಾಡಲು ಹೊರಬಿದ್ದಾಗ, ಈ ಹಾಡು ನನ್ನ ಕಿವಿಗೆ ಬಿತ್ತು. ಇರುಳಿನ ನೀರವತೆಯಲ್ಲಿ ಮನಸ್ಸು ವಿಚಾರದ ಗುಂಗಿನಲ್ಲಿ ಸಿಲುಕಿರುವಾಗ ಕಲ್ಪನೆಗೆ ತಡೆ ಎಲ್ಲಿ? ಹಾಡು ಮಧುರವಾಗಿತ್ತು. ಅವರ ಸ್ವರದಲ್ಲಿಯ ಕಾರುಣ್ಯ ಕರುಳಿರಿಯುತ್ತಿತ್ತು. ಯಾವುದೋ ನಿರಾಶೆಗೊಂಡ ಪ್ರಣಯಿಯ ಭಗ್ನಹೃದಯದ ಆರ್ತವಾದ ಕೂಗು ಹೃದಯವೇಧಕವಾಗಿತ್ತು. ಆದರೆ ನನ್ನ ಮನಸ್ಸನ್ನು ಸೂರೆಗೊಂಡ ವಿಚಾರವೇ ಬೇರೆ. ನನ್ನ ಕಲ್ಪನೆಯನ್ನು ಆ 'ಹಮ' ಶಬ್ದದ ಪ್ರಯೋಗ ಹೆಚ್ಚಾಗಿ ಕೆರಳಿಸಿತು. ಜೀವನದಲ್ಲಿಯ ಆಸೆ ಎಲ್ಲ ಬತ್ತಿಹೋಗಿ, ಏಕಾಕಿತ್ವದ ಶೂಲ ಇರಿಯುತ್ತಿದ್ದರೂ ಅವನು 'ನಾನು' ಎನ್ನದೆ 'ನಾವು ಬದುಕಿ ಮಾಡುವದಾದರೂ ಏನು ?' ಎನ್ನುತ್ತಾನೆ. ಬಹುವಚನದ ಪ್ರಯೋಗದಲ್ಲಿ ತುಂಬಿದ ಕರುಣೆ, ಧ್ವನಿ ರಮ್ಯತೆ, ದುಃಖದಲ್ಲಿಯೂ ಆತ್ಮಗೌರವವನ್ನು ಬಿಡದ ಮನೋವೃತ್ತಿ. ನನ್ನ ಕುತೂಹಲ ಕೆರಳಿತು, ಮನಸ್ಸು ಸಂಚಾರ ಹೊರಟಿತು.

ಈ ರೀತಿಯ ಪ್ರಯೋಗ ಕೇವಲ ಕವಿಸಹಜ ಪ್ರೇರಣೆಯಿಂದಲೇ ಆಗಬೇಕಾದದ್ದು. ಅದಕ್ಕೆ ಯಾವ ನಿಯಮ ನಿರ್ಬಂಧಗಳೂ ಇಲ್ಲ. ರಾಜ, ಸಂಪಾದಕ, ಧರ್ಮಾಧಿಕಾರಿಗಳಿಗೆ ಮಾತ್ರ ಮೀಸಲಾದ ಈ ಬಹುವಚನದ ಪ್ರಯೋಗ ಬೇರೆ ಕಡೆಯಲ್ಲಿಯೂ ಬರಬಹುದು. ಒಮ್ಮೊಮ್ಮೆ ಅದರ ಔಚಿತ್ಯ ಸಹ ಹೆಚ್ಚಾಗಬಹುದು. ಶಾಕುಂತಲ ನಾಟಕದಲ್ಲಿ, ಭ್ರಮರಪೀಡಿತೆಯಾದ ಶಕುಂತಲೆಯನ್ನು ನೋಡಿ ದುಷ್ಯಂತ ಆ ಭ್ರಮರವನ್ನು ಕೊಂಡಾಡುತ್ತಾನೆ. "ವಯಂ ತತ್ವಾನ್ವೇಷಾನ್ಮಧುಕರ ಹತಾಃ ತ್ವಂ ಖಲು ಕೃತೀ" (ನಾವು ತತ್ವಾನ್ವೇಷಣೆಯಿಂದ ಹಾಳಾದೆವು; ನೀನೋ ಕಾರ್ಯಸಾಧಿಸಿ ಧನ್ಯನಾದೆ.) ಇಲ್ಲಿ ದುಷ್ಯಂತ ರಾಜನೆಂಬ ಭಾವನೆಯೇ ನಮಗೆ ಬರಲಾರದು. ಶಕುಂತಲೆಯ ಪ್ರೇಮವನ್ನು ಯಾಚಿಸುವ ಪ್ರಣಯಿ ಅವನು. ಆದರೆ ಇನ್ನೂ ಅವಳೊಡನೆ ಮಾತನಾಡಿಲ್ಲ ಕೂಡ. ಆ ಕ್ಷಣದಲ್ಲಿ ಜಗತ್ತಿನಲ್ಲಿಯೇ ದುಷ್ಯಂತನಂಥ ಅಸಹಾಯ ಜೀವಿ ಮತ್ತಾರೂ ಇಲ್ಲ. ಇಲ್ಲಿಯ ಬಹುವಚನದ ಪ್ರಯೋಗ ಅವನ ಅಸಹಾಯತೆಯನ್ನು ಎತ್ತಿ ತೋರಿಸುತ್ತದೆ. ಮ್ಯಾಕಬೆಥ್ ನಾಟಕದಲ್ಲಿಯೂ ಹೀಗೆಯೇ. ಮ್ಯಾಕಬೆಥನ ಆಸೆಗಳನ್ನೆಲ್ಲ ವಿಧಿ ಅವನ ಕಣ್ಣ ಮುಂದೆಯೇ ಒಂದೊಂದಾಗಿ ನಾಶ ಮಾಡಿದ ಮೇಲೆ, ಮ್ಯಾಕಬೆಥ್ "ನಾವು ಇನ್ನು ಸಾಯಲು ಸಿದ್ಧರಾಗೋಣ" ಎನ್ನುತ್ತಾನೆ.

ಕುಮಾರ ವ್ಯಾಸ ಇಂಥ ಅಮೌಲ್ಯ ಪ್ರಯೋಗ

ಗಳಿಗೆ ಆಗರ. ಜೀವನದ ದಾರುಣತೆಯನ್ನೂ ಶೋಕದ ತುತ್ತತುದಿಯನ್ನೂ ಒಮ್ಮೊಮ್ಮೆ ಒಂದೊಂದು ಸರ್ವನಾಮದಲ್ಲಿಯೇ ಅವನು ನಿರೂಪಿಸಬಲ್ಲ. ಭಾರತದಲ್ಲಿ ಧೃತರಾಷ್ಟ್ರನಂಥ ಹತಭಾಗಿಗಳು ಮತ್ತಾರೂ ಇಲ್ಲ. ಅಂಧನಾಗಿಯೂ ತನ್ನ ಮಕ್ಕಳ ನೂರಾರು ಅವಿವೇಕದ ಕೃತಿಗಳಿಗೆ, ಅನ್ಯಾಯಗಳಿಗೆ, ಕೊನೆಗೆ ತನ್ನ ವಂಶದ ಘೋರವಿನಾಶಕ್ಕೇ ಅವನು ಸಾಕ್ಷಿಯಾಗಿದ್ದಾನೆ. ಆದರೆ ಒಂದನ್ನೂ ಸರಿಪಡಿಸಲು ಅವನಿಗೆ ಶಕ್ತಿಯಿಲ್ಲ, ಅಧಿಕಾರವಿಲ್ಲ. ಕೇವಲ ಕುರುಡುಗಣ್ಣಿನಿಂದ ನೀರು ಸುರಿಸುತ್ತ, ಸಂಜಯನು ಹೇಳುವ ವಾರ್ತೆಗಳನ್ನು ಕೇಳುವದೊಂದೇ ಸಮಾಧಾನ ಅವನಿಗೆ. ಅದರಲ್ಲಿಯೂ ಸಂಜಯ ಮಾತುಮಾತಿಗೆ ಚುಚ್ಚುತ್ತಾನೆ. ಬೇಕೆಂದೇ ಪಾಂಡವರನ್ನು ಹೊಗಳಿ, ಕೌರವರನ್ನು ತೆಗಳುವದಲ್ಲದೆ ಧೃತರಾಷ್ಟ್ರನ ವ್ಯಾಮೋಹವನ್ನೂ ತಿರಸ್ಕರಿಸುತ್ತಾನೆ. ಅದನ್ನೆಲ್ಲ ಈ ಅಂಧನೃಪ ಸಹಿಸಬೇಕು. ಮುಪ್ಪಿನಲ್ಲಿ ಊರುಗೋಲಾಗಬೇಕಾದ ಮಕ್ಕಳು ವಂಶವನ್ನೇ ನಾಶಗೈಯುತ್ತ, ಕೊನೆಗೆ ತಾವು ಉರಿಸಿದ ಕಿಚ್ಚಿನಲ್ಲಿ ತಾವೇ ಸಾಯಲುದ್ಯುಕ್ತರಾಗುತ್ತಾರೆ. ಮುಂದೆ ಪಾಂಡವರ ಆಶ್ರಯವೇ ತನಗೆ ದಿಕ್ಕಾಯಿತಲ್ಲ ಎಂಬ ಕೊರಗು ಧೃತರಾಷ್ಟ್ರನಿಗೆ. ಇಂಥ ಘೋರ ಮುಹೂರ್ತದಲ್ಲಿಯೇ ಸಂಜಯ ಕರ್ಣಾವಸಾನದ ವಾರ್ತೆಯನ್ನು ಹೇಳಲೋ ಬೇಡವೋ ಎಂದು ಅನುಮಾನಿಸುತ್ತಾನೆ. ಇಷ್ಟೇ ಅಲ್ಲ, 'ಕರ್ಣಾವಸಾನವ ಕೇಳಿ ಜೀವವ ಹಿಡಿಯಲಾಪ್ಪೆ ತಂದೆ ಧೃತರಾಷ್ಟ್ರ' ಎಂದು ಕನಿಕರಪಡುತ್ತಾನೆ. ಆದರೆ ಆ ಕನಿಕರದಲ್ಲಿ ತುಂಬಿದ ನಂಜು ಎಷ್ಟು ತೀಕ್ಷ್ಣವಾಗಿದೆ! ಆಗಲೇ ಧೃತರಾಷ್ಟ್ರ ನುಡಿಯುತ್ತಾನೆ: 'ಸಾವೆನಾನೆಂದಂಜದಿರು . . . . . ಕರ್ಣಾವಸಾನವ ಕೇಳಿ ಬದುಕುವ ಪರಮಸುಕೃತಿಗಳಾವು'! ಜಗತ್ತೆಲ್ಲ ಕೈಬಿಟ್ಟಾಗ ಮನುಷ್ಯ ತನಗೆ ತಾನೇ ಅಂಟಿಕೊಳ್ಳುತ್ತಾನೆ. ಒಬ್ಬನೇ ವ್ಯಕ್ತಿ ಇಬ್ಬರೆಂದು ತಿಳಿದುಕೊಂಡು ಸಮಾಧಾನ ಮಾಡಿಕೊಂಡಂತೆ ಇದೆ ಈ ರೀತಿ. ಭಾರತದ ಇನ್ನೊಂದು ಸಂದರ್ಭದಲ್ಲಿಯೂ ಈ ಬಹುವಚನ ಪ್ರಯೋಗದ ಅಮೋಘ ಪರಿಣಾಮವನ್ನು ಗುರುತಿಸಬಹುದು. ತಂದೆಯನ್ನು ಕಳೆದುಕೊಂಡು ಏಕಾಕಿಯಾಗಿದ್ದಾನೆ ಅಶ್ವತ್ಥಾಮ. ಆಗ ಕರ್ಣನಿಗೆ ಸೇನಾಪತಿ ಪಟ್ಟವನ್ನು ಕಟ್ಟುವ ಮಾತು ಬರುತ್ತದೆ. ದುರ್ಯೋಧನ ಅಶ್ವತ್ಥಾಮನ ಅಭಿಪ್ರಾಯ ಕೇಳಿಕೊಳ್ಳುತ್ತಾನೆ. ಅಶ್ವತ್ಥಾಮನಿಗೆ ಯಾವುದರಲ್ಲಿಯೂ ಆಸಕ್ತಿಯಿಲ್ಲ. ಕರ್ಣನನ್ನೂ ಅಲಕ್ಷ್ಯ ಮಾಡುವ ಉದಾಸೀನತೆ ಅವನಲ್ಲಿ ಬಂದಿದೆ. 'ಕರ್ಣನೇ ಸೇನಾಪತಿಯಾಗಿರಲಿ' ಎಂದು ಹೇಳಿ 'ನಮ್ಮ ಪುಣ್ಯದ ಬೆಳೆಗಳೊಣಗಿದೊಡಮ್ಮಿ ಮಾಡುವದೇನು?' ಎಂದು ನಿಟ್ಟುಸಿರುಗರೆಯುತ್ತಾನೆ. ಅತ್ಯಂತ ನಿಸ್ಸಹಾಯ ಪರಿಸ್ಥಿತಿಯಲ್ಲಿಯೇ ಮನುಷ್ಯನ ವ್ಯಕ್ತಿತ್ವ ತನ್ನನ್ನು ತಾನೇ ಬಹುವಚನದಿಂದ ಕರೆದುಕೊಳ್ಳುವಷ್ಟು ದೊಡ್ಡದಾಗುತ್ತದೇನೋ! ಕೃಷ್ಣ ರಣತಾಮಸಿಕೆಯಿಂದ ಚಕ್ರವನ್ನು ಹಿಡಿದು, ಭೀಷ್ಮನನ್ನು ಕೊಲ್ಲುತ್ತೇನೆಂದು ಬಂದಾಗ ಭೀಷ್ಮ 'ದೇವ ನಿಮ್ಮಯ ಖಾತಿಪರಿಯಂತಾವು ಲಕ್ಷ್ಯವೆ' ಎನ್ನುತ್ತಾನೆ. ಇಲ್ಲಿಯ ಬಹುವಚನದಲ್ಲಿಯ ವ್ಯಂಗ್ಯವಂತೂ ಕೃಷ್ಣನನ್ನೆ ಬಡಿದೆಬ್ಬಿಸುವಂತಹದು!

ಇನ್ನು ಆಧುನಿಕ ಕಾವ್ಯಕ್ಕೆ ತಿರುಗೋಣ. ಅಂಬಿಕಾತನಯದತ್ತರ 'ನಾವು ಬರತೇವಿನ್ನ ತಾಯಿ ನಮ್ಮ ನಮಸ್ಕಾರ ನಿಮಗ' ಎಂಬ ಕವಿತೆಯನ್ನು ಉದಾಹರಣೆಗೆ ತೆಗೆದುಕೊಳ್ಳಬಹುದು. ಕವಿ ಧಾರವಾಡವನ್ನು ಬಿಟ್ಟು ಸೊಲ್ಲಾಪುರಕ್ಕೆ ನಡೆದಾಗ ಬರೆದ ಹಾಡು ಅದು. ಧಾರವಾಡವನ್ನು ಅಗಲಬೇಕಾಗಿ ಬಂದಾಗ ಹೃದಯ ನೋವಿನಿಂದ ತುಂಬಿದೆ. ಪರದೇಶಿತನದ ಭಾವನೆ ಬಂದಿದೆ. ಆದರೂ ಧಾರವಾಡದ ನೆಲವೇ ಸೊಲ್ಲಾಪುರದವರೆಗೂ ತನ್ನ ನಿಡಿದೋಳನ್ನು ಚಾಚಿಲ್ಲವೇ, ತಾಯಿ ಅಲ್ಲಿಯೂ ಕಾಯಲಾರಳೇ ಎಂಬ ಅಭಯದ ಸೂಚನೆಯೂ ಇದೆ. 'ನಾವು' ಎಂಬ ಪದ ಪ್ರಯೋಗ ಇಂಥ ಕರುಣ ರಮ್ಯವಾದ ಸನ್ನಿವೇ

ಶದ ಉತ್ಕಟತೆಯನ್ನು ಹೆಚ್ಚಿಸುತ್ತದೆ. . . . .

ಆದರೆ ಎಷ್ಟು ಹೇಳಿದರೂ ಏಕವಚನದ ಬದಲಾಗಿ ಬಹುವಚನದ ಉಪಯೋಗ ಕಾವ್ಯದ ಚಿರಂತನ ಗೂಢಗಳಲ್ಲಿ ಒಂದಾಗಿದೆ. ಅದರ ರೀತಿ, ಔಚಿತ್ಯ ಅಥವಾ ಆಳ ಇವುಗಳನ್ನು ವಿವರಿಸುವದು ಸಾಧ್ಯವಿಲ್ಲ. ವಿಮರ್ಶೆಯ ತತ್ವಗಳಿಂದ ಇಂಥ ವಿಚಿತ್ರ ಪ್ರಯೋಗಗಳ ಸೌಂದರ್ಯವನ್ನು ಅಳೆಯಲು ಬಾರದು. ಇಂಥ ಸಂದರ್ಭಗಳಲ್ಲಿ ಕಾರಣವೂ ದೊರೆಯಲಾರದು. 'Unconscious responding to unconscious' ಎಂಬ ಇಲಿಯಟ್ಟನ ಮಾತು ಇಂಥ ಸಂಗತಿಗಳಲ್ಲಿ ನಿಜ. ಮಹಾಕವಿಗಳ ಮೌನ ಕೂಡ ಅರ್ಥಪೂರ್ಣವಾಗಿರುವಾಗ ಇಂಥ ಪ್ರಯೋಗಗಳೂ ಅರ್ಥಗೌರವವನ್ನು ಹೆಚ್ಚಿಸುವದಿಲ್ಲ ಎಂದು ಹೇಗೆ ಹೇಳಬಹುದು? ವಿಮರ್ಶೆಯ ತತ್ವಗಳನ್ನೂ ಮೀರಿ ಕಾವ್ಯ ಬೆಳಗಬಹುದು. ಗೊತ್ತಿದ್ದ ಕಾವ್ಯಭಾಗವನ್ನು ಗೊತ್ತಿದ್ದ ತತ್ವಗಳ ಒರೆಗೆ ಹಚ್ಚಿ ನೋಡಬಹುದು. ಭಾವ ಸಂಸ್ಕೃತಿಯನ್ನು ಹೆಚ್ಚಾಗಿ ಬೆಳೆಸಿಕೊಂಡ

–ಮನಸುಖರಾಯ



## ಸಾಹಿತ್ಯ ಪ್ರೇಮ

........ಸಾಹಿತ್ಯಪ್ರೇಮವು ಯೋಗ್ಯವೆಂಬುದು ನಿಜ. ಆದರೆ ಪ್ರೇಮಕ್ಕೆ ತಕ್ಕ ಸಾಧನೆಯು ಬೇಕು. ಸಾಧನೆಗೆ ಎರಡು ಭಾಗಗಳು. ಒಳಗಿನದೊಂದು, ಹೊರಗಿನದಿನ್ನೊಂದು. ಮೊದಲನೆಯದು ಸ್ವಬುದ್ಧಿ ಸಂವೇದನೆಗಳ ವಿಕಾಸವನ್ನವಲಂಬಿಸಿದೆ. ಇವನ್ನು ಪ್ರೇಮದಿಂದ ಮೊದಲು ಅರಳಿಸಿಕೊಳ್ಳಬೇಕು. ಹಲಕೆಲವರಲ್ಲಿ ಸಾಹಿತ್ಯವು ಸಹಜ ಸ್ವಭಾವವೇ ಆಗಿರಬಹುದು; ಆದರೆ ಇತರರು ಅನೇಕರು ಅದನ್ನು ಗಹನ ಗ್ರಂಥಾವಲೋಕನದಿಂದಲೂ ಸತ್ಸಂಗವ್ಯಾಸಂಗದಿಂದಲೂ ಸಂಘಸ್ಥಿತಿಗಳ ನಿಜ ಮಾಹಿತಿಯಿಂದಲೂ ಬೆಳೆಸಿಕೊಳ್ಳಬೇಕು. ವಿವೇಕವು ಇವೆಲ್ಲವನ್ನೂ ಒಡಗೂಡಿಕೊಂಡಿರಬೇಕು. ಇವೆಲ್ಲವೂ ನಾಟು ನುರಿತ ಹೃದಯದ ಹೊರಹೊಮ್ಮುವ ಪರಿಮಳಕ್ಕೇ ಸಾಹಿತ್ಯವೆನ್ನಬೇಕು. ಇಂಥ ಸಾಹಿತ್ಯದಲ್ಲಿ ಬಲವಾದ ವ್ಯಕ್ತಿತ್ವವಿದೆ. ಉಪದೇಶವಿದೆ. ಸೌಂದರ್ಯವಿದೆ. ಇವಿಲ್ಲದ ಬರೆಹ ಬರಿ ಗದ್ದಲ; ದರಿದ್ರ ವಿತಂತು ರೋದನ.

ಎರಡನೆ ಭಾಗವು ಪ್ರಕಾಶನ. ಇದು ಪ್ರಕಾಶಕರನ್ನು ಅವಲಂಬಿಸಿದೆ. ಕರ್ನಾಟಕದಲ್ಲಿ ಯೋಗ್ಯ ಪ್ರಕಾಶಕರು ಕಡಿಮೆ. ಇವರು ಕಡಿಮೆಯಾಗುವದಕ್ಕೆ ಕನ್ನಡಿಗರಲ್ಲಿ ಯೋಗ್ಯ ವಾಚನಾಭಿರುಚಿಯು ಕಡಿಮೆಯಾಗಿರುವದೇ ಕಾರಣ. ಹುಚ್ಚು ಬಿಡದೆ ಮದುವೆಯಾಗದು, ಮದುವೆಯಾಗದೆ ಹುಚ್ಚು ಬಿಡದು ಎಂಬಂತೆ ಈ ದುಃಸ್ಥಿತಿ. ಆದರೂ ಇದು ಅಸಾಧ್ಯ ಸಂಕಲನವಲ್ಲ ಎಂದು ನನಗೆ ತೋರುತ್ತದೆ. ಯೋಗ್ಯ ಬರೆಹಗಾರರು ಮೊದಲು ಬೇಕು. ಅನಂತರ ಬರೆಹಗಾರರ ಬಲವಾದ ಸಂಘಟನ ಬೇಕು. ಅದು ಸಾಕಷ್ಟು ತ್ಯಾಗಬುದ್ಧಿಯಿಂದ ಗುರಿಗೊಂಡಿರಬೇಕು. ಇವೆರಡಕ್ಕೆ ಸಾಧ್ಯವಾಗದ ಕೆಲಸವಿಲ್ಲ.

—ದಿವಂಗತ ತಾರಾನಾಥರ ಒಂದು ಪತ್ರದಿಂದ

ಟಿಪ್ಪು ಸುಲ್ತಾನ ಬರಿ " ಮೈಸೂರಿನ ಹುಲಿ " ಯಾಗಿರದೆ
ಮೈಸೂರನ್ನು ಕುಬೇರಭಂಡಾರವನ್ನಾಗಿ ಮಾಡಲೂ ಯತ್ನಿಸಿದ್ದನು

# ರಾಷ್ಟ್ರೀಕರಣದ ಪ್ರವರ್ತಕ—ಟಿಪ್ಪು

ಲೇಖಕರು: ಎಸ್. ಕೆ. ಮುತಾಲಿಕ

"ಮೈಸೂರಿನ ಹುಲಿ" ಟಿಪ್ಪುಸುಲ್ತಾನನ ಹಲವು ಯುದ್ಧಗಳ ಆಖ್ಯಾನಗಳ ಜಂಜಡದಲ್ಲಿ ಅವನ ಚರಿತ್ರೆಯ ಒಂದು ಮುಖ್ಯ ರಚನಾತ್ಮಕ ಭಾಗ ನಮ್ಮೆಲ್ಲರ ಗಮನವನ್ನು ಸೆಳೆಯದೆ ಉಳಿದಿದೆ. ಭಾರತದಲ್ಲಿ ಬ್ರಿಟಿಶರ ಉಚ್ಚಾಟನೆಗಾಗಿ ಹೆಣಗಿದ ದೊರೆಗಳಲ್ಲೆಲ್ಲ ಅವನೊಬ್ಬನೇ ರಾಜ್ಯ ತತ್ವದಲ್ಲಿ ವಿದೇಶ ಸಂಪರ್ಕದ ಮತ್ತು ವಾಣಿಜ್ಯೋದ್ಯಮಗಳ ವಿಕಾಸದ ಮಹತ್ವವನ್ನು ಮನಗಂಡು ಅವೆರಡೂ ರಂಗಗಳಲ್ಲಿ ಪ್ರಜ್ಞೆಯಿಂದ ಕಾರ್ಯಾರಂಭ ಮಾಡಿದವನು.

ವಿದೇಶ ಸಂಪರ್ಕದ ರಂಗದಲ್ಲಿ ಅವನು ಫ್ರೆಂಚರೊಡನೆ ಸಂಬಂಧ ಸ್ಥಾಪಿಸಿ ಬ್ರಿಟಿಷರ ವಿರುದ್ಧ ಅವರು ಕೈಕೊಂಡ ದಂಡಯಾತ್ರೆಗಳಿಗೂ ತನ್ನ ಮಿಲಿಟರಿ ಕ್ರಮಗಳಿಗೂ ತಳಕು ಹಾಕಲು ಯತ್ನಿಸಿದ್ದನ್ನು ನಾವು ಓದಿದ್ದೇವೆ.

ಆರ್ಥಿಕ ರಂಗದಲ್ಲಿಯೂ ಟಿಪ್ಪು ಆಧುನಿಕ ಯೌರೋಪ್ಯ ಕಲ್ಪನೆಗಳನ್ನು ಗ್ರಹಿಸಿಕೊಂಡು ಅವುಗಳ ಪ್ರಯೋಜನವನ್ನು ಮನಗಂಡಿದ್ದನು. ಅವನ ವೇಳೆಯೆಲ್ಲ ಯುದ್ಧಗಳಲ್ಲಿ ವ್ಯಯವಾಗದಿದ್ದರೆ ಭಾರತಕ್ಕೆ ಔದ್ಯೋಗಿಕ ಕ್ರಾಂತಿಯನ್ನು ಅವನೇ ತರಬಹುದಾಗಿತ್ತು.

ಆ ಕಾಲದ ಭಾರತೀಯ ಅರಸರಾರೂ ಮಾಡದ ಕೆಲ ಉಪಕ್ರಮಗಳನ್ನು ಅವನು ಕೈಕೊಂಡಿದ್ದನು. ಯೌರೋಪ್ಯರು ತಮ್ಮ ವಿದೇಶ ವಾಣಿಜ್ಯದ ಬೆಳವಣಿಗೆಗಾಗಿ ವ್ಯಾಪಾರ ಮಂಡಲಗಳನ್ನೂ ವಖಾರಗಳನ್ನೂ ಸ್ಥಾಪಿಸಿದಂತೆ ಇವನೂ ವಿದೇಶಗಳಲ್ಲಿ ಮೈಸೂರಿನ ವ್ಯಾಪಾರ ಮಂಡಲಗಳನ್ನು ಸ್ಥಾಪಿಸಿದನು. ಭಾರತದಲ್ಲಿ ಕಚ್ಛಪ್ರಾಂತದಲ್ಲಿ ಮುಂಭಿ ಮತ್ತು ಮುಂಡ್ರಾದಲ್ಲಿ ಅವನ ವ್ಯಾಪಾರಮಂಡಲಗಳಿದ್ದವಲ್ಲದೆ ಅರಬಸ್ತಾನದ ಮಸ್ಕತದಲ್ಲಿ ಕೂಡ ಒಂದು ವ್ಯಾಪಾರಮಂಡಲವಿತ್ತು.

ಪರಸ್ಪರ ಸುಂಕ ರಿಯಾಯತಿಯ ಒಪ್ಪಂದವೊಂದನ್ನು ಅವನು ಮಸ್ಕತದ ಸುಲ್ತಾನನೊಡನೆ



ಮೊಹಿಬುಲ್ ಹಸನ್‌ಖಾನರ " ಹಿಸ್ಟರಿ ಆಫ್ ಟಿಪ್ಪು ಸುಲ್ತಾನ " ಪುಸ್ತಕದಿಂದ

ಮಾಡಿಕೊಂಡದ್ದಂತೂ ಆಧುನಿಕ ಕಲ್ಪನೆಯೇ ಸೈ. ಮಸ್ಕತದಿಂದ ಕುಂಕುಮ ತಯಾರಿಕೆಗಾಗಿ ಕೇಶರೀ ಬೀಜ, ಮುತ್ತು, ದ್ವೀಪದ್ರಾಕ್ಷಿ, ಒಣ್ತೆ, ಕಲ್ಲುಪ್ಪು, ಗಂಧಕ, ತಾಮ್ರ ಇವುಗಳಲ್ಲದೆ ರೇಶ್ಮೆ ಹುಳ ಮತ್ತು ಕುದುರೆಗಳ ಆಯಾತ ಮೈಸೂರಿಗೆ ಆಗುತ್ತಿತ್ತು. ಪ್ರತಿಯಾಗಿ ಮೈಸೂರಿನ ಗಂಧದ ಕಟ್ಟಿಗೆ, ಮೆಣಸು, ಅಕ್ಕಿ, ಹಸ್ತಿದಂತ, ಬಟ್ಟೆ ಇವು ಮಸ್ಕತಕ್ಕೆ ನಿರ್ಯಾತವಾಗುತ್ತಿದ್ದವು. ಮೈಸೂರಿನ ಸರಕುಗಳಿಗೆ ಮಸ್ಕತದ ಇಮಾಮನು ಸೇಕಡಾ ೬ ಮಾತ್ರ ಸುಂಕ ತೆಗೆದುಕೊಳ್ಳುತ್ತಿದ್ದನು. (ಇತರರಿಗೆ ಸೇಕಡಾ ೧೦ರ ಸುಂಕ ಬೀಳುತ್ತಿತ್ತು.) ಪ್ರತಿಯಾಗಿ ಮೈಸೂರಲ್ಲಿ ಮಸ್ಕತದ ವ್ಯಾಪಾರಿಗಳಿಗೆ ಸುಂಕ ರಿಯಾಯತಿ ಮೊದಲಾದ ಹಲ ಸೌಕರ್ಯಗಳಿದ್ದವು.

ಜಿಡ್ಡಾ (ಅರಬಸ್ತಾನ)ವಲ್ಲಿಯೂ ಟಿಪ್ಪುವಿನ ವ್ಯಾಪಾರಮಂಡಲವಿತ್ತು. ಏಡನ್ ಮತ್ತು ಬಸ್ರಾಗಳಲ್ಲಿಯೂ ಇಂಥ ಮಂಡಲಗಳನ್ನು ಸ್ಥಾಪಿಸಲು ಯತ್ನಿಸಿದ್ದನವನು. ಓರಮುಜದಲ್ಲಿ ಅವನ ವ್ಯಾಪಾರ ಮಂಡಲಿ ಮುತ್ತುಗಳನ್ನು ಕೊಳ್ಳುತ್ತಿತ್ತು. ಪೇಗು (ಬರ್ಮ) ವಿನಲ್ಲಿ ವ್ಯಾಪಾರ ಮಂಡಲ ಸ್ಥಾಪನೆಗಾಗಿ ಮಹಮದ ಕಾಶೀಮ ಹಾಗು ಮಹಮದ ಇಬ್ರಾಹಿಮ ಎಂಬವರನ್ನು ಅವನು ಕಳಿಸಿದ್ದಾಗಿ ತಿಳಿದುಬಂದಿದೆ.

ಫ್ರಾನ್ಸ, ತುರ್ಕಸ್ಥಾನ, ಇರಾಣಗಳೊಡನೆ ವ್ಯಾಪಾರ ಬೆಳೆಸಲು ಟಿಪ್ಪು ಸುಲ್ತಾನ ರಾಯಭಾರಿಗಳನ್ನು ಕಳಿಸಿದನು. ಚೀನದೊಡನೆಯೂ ಮೈಸೂರಿನ ವ್ಯಾಪಾರವಿತ್ತು. ಸಮುದ್ರಗಳ್ಳರ ಉಪಟಳದಿಂದ ಚೀನೀ ವ್ಯಾಪಾರ ಹಡಗುಗಳನ್ನು ರಕ್ಷಿಸಲು ಟಿಪ್ಪು ತನ್ನ ಹಡಗುಪಡೆ ಮತ್ತು ಸೈನ್ಯಬಲವನ್ನು ಬೆಂಗಾವಲಿಗೆ ಕಳಿಸಿದ್ದನು.

ಆದರೆ ಅವನ ಆರ್ಥಿಕ ವಿಚಾರಗಳು ಇವೆಲ್ಲಕ್ಕಿಂತಲೂ ಎದ್ದು ಕಾಣುವಷ್ಟು ಮುಂದೆ ಹೋಗಿದ್ದವು. ರಾಷ್ಟ್ರೀಕರಣವೆಂಬ ಹೆಸರಿಗಲ್ಲದಿದ್ದರೂ ಆ ಕಲ್ಪನೆಗೆ ಅವನೇ ಈ ದೇಶದಲ್ಲಿ ಜನ್ಮದಾತ ಮತ್ತು ಪ್ರವರ್ತಕನಾಗಿದ್ದನೆಂದು ಹೇಳಿದರೆ ಆಶ್ಚರ್ಯವಾದೀತು.

ಅವನ ಯತ್ನಗಳನ್ನು ನೋಡಿರಿ. ಯಾವುದನ್ನು ಮಾಡಬೇಕೆಂದು ಇಂದು ಸಮಾಜವಾದಿಗಳು ಸರಕಾರಕ್ಕೆ ಒತ್ತಾಯಪಡಿಸುತ್ತಿದ್ದಾರೋ ಆ ವಿದೇಶ ವ್ಯಾಪಾರದ ಗುತ್ತಿಗೆ ಸರಕಾರದ್ದಿರಬೇಕೆಂದು ಟಿಪ್ಪು ಶಾಸನ ಮಾಡಿದನು.

ಆಂತರಿಕ ಕ್ಷೇತ್ರದಲ್ಲಿಯೂ ಕೆಲ ಸರಕುಗಳ ವ್ಯಾಪಾರವನ್ನು ಸರಕಾರದ ಸ್ವಾಧೀನ ಮಾಡಲು ಅವನು ಉಪಕ್ರಮಿಸಿದನು. ಬಂಗಾರದ ಅದಿರು, ತಂಬಾಕು, ಗಂಧದ ಕಟ್ಟಿಗೆ, ಆನೆಗಳು, ತೆಂಗಿನಕಾಯಿ, ಮೆಣಸು ಮತ್ತು ಸಾಗುವಾನಿ ಕಟ್ಟಿಗೆಗಳ ವ್ಯಾಪಾರವನ್ನು ರಾಷ್ಟ್ರೀಕರಿಸಲಾಗಿತ್ತು. ರಾಜಾ ರಾಮಚಂದ್ರನೆಂಬವನ ನೇತೃತ್ವದಲ್ಲಿ ಪ್ರತಿ ತಾಲೂಕಿನಲ್ಲಿ ಬಂಗಾರ, ಬೆಳ್ಳಿ, ಅರಿವೆ ಮೊದಲಾದವುಗಳನ್ನು ಮಾರುವ ಅಂಗಡಿಗಳನ್ನು ತೆರೆದನು.

ಖಾಸಗಿ ಹಣದ ಲೇವಾದೇವಿ ಮತ್ತು ವಿನಿಮಯ ಮಾಡುವ ಸಾವುಕಾರರನ್ನು ನಿರ್ಮೂಲ ಮಾಡಿ ಆ ಉದ್ಯಮವನ್ನೇ ರಾಷ್ಟ್ರೀಕರಿಸಲು ಅವನು ಯತ್ನಿಸಿದ್ದಂತೂ ಅತ್ಯಾಧುನಿಕ ಕಲ್ಪನೆಯಾಗಿತ್ತು. ಅವನು ಇದರಲ್ಲಿ ಯಶಸ್ವಿಯಾಗಿದ್ದರೆ ಇಂದು ನಾವು ಬ್ಯಾಂಕುಗಳ ರಾಷ್ಟ್ರೀಕರಣ ಎಂದು ಕರೆಯುತ್ತಿರುವುದನ್ನು ಅಂದೇ ಅವನು ಸಾಧಿಸಿದಂತಾಗುತ್ತಿತ್ತು.

ಸರಕಾರದಲ್ಲಿ ವಾಣಿಜ್ಯ ಶಾಖೆಯನ್ನು ತೆರೆದು ಕೇಂದ್ರ ಮಂಡಲವೊಂದರ ಅಧೀನದಲ್ಲಿ ಯೋಗ್ಯ ಜನರ ಮೂಲಕ ಅದನ್ನು ನಡೆಸಿಕೊಂಡು ಹೋಗಲಾಗುತ್ತಿತ್ತು.

ಪ್ರಜೆಗಳಿಗೆ ಸರಕಾರನಿಯಂತ್ರಿತ ವ್ಯಾಪಾರೋದ್ಯಮಗಳಲ್ಲಿ ಹಣ ತೊಡಗಿಸಲು ಪ್ರೋತ್ಸಾಹ ದೊರೆಯಲೆಂದು ಅವನು ಇಂದು ನಾವು ವ್ಯಾಪಾರಿ ಕಾರ್ಪೊರೇಶನ್ ಎಂದು ಕರೆಯುವ ಸಂಸ್ಥೆಯನ್ನು ಹೋಲುವ ಒಂದು ಸಂಸ್ಥೆಯನ್ನು ಸ್ಥಾಪಿಸಿ ಅದರ ಶೇರುಗಳನ್ನು ಜನರಿಗೆ ಮಾರಲು ತೆಗೆದನು. ಕಡಿಮೆ ಬೆಲೆಯ ಶೇರುಗಳಿಗೆ ಹೆಚ್ಚು ಲಾಭಾಂಶ ಕೊಡುವುದಾಗಿ ಹೇಳಿ ಅವನು ಸಾಮಾನ್ಯ ಜನರ ಉಳಿತಾಯವನ್ನು ಸರಕಾರಿ ವ್ಯಾಪಾರಕ್ಕೆ ಬಂಡವಳವಾಗಿ ಆಕರ್ಷಿ

ಸಲು ಹವಣಿಸಿದನು. ಆಧುನಿಕ ಸರಕಾರಗಳೂ ಇದನ್ನೇ ಮಾಡುತ್ತಿವೆ.

ಆಧುನಿಕ ರೀತಿಯ ಉದ್ದಿಮೆಗಳನ್ನು ಸ್ಥಾಪಿಸಲು ಅವನು ಮಾಡಿದ ಸಾಹಸ ಸ್ಮರಣೀಯವಾಗಿದೆ. ಇದಕ್ಕಾಗಿ ಇಂಗ್ಲೀಷ, ಫ್ರೆಂಚ, ಅರಬ ತಜ್ಞರನ್ನು ಅವನು ತರಿಸಿಕೊಳ್ಳಲು ಹಿಂಜರಿಯಲಿಲ್ಲ. ಟಿಪ್ಪು ಸ್ಥಾಪಿಸಿದ ಕಾರಖಾನೆಗಳಲ್ಲಿ ಶ್ರೀರಂಗಪಟ್ಟಣದ ಕಾಗದ ಕಾರಖಾನೆ, ಚನ್ನಪಟ್ಟಣದ ಕಾಜಿನ ಕಾರಖಾನೆ, ಬೇರೆ ಬೇರೆ ಕಡೆ ಚೀನೀ ತಜ್ಞರ ನೆರವಿನಿಂದ ಸ್ಥಾಪಿಸಿದ ಎರಡು ಮೂರು ಸಕ್ಕರೆ ಕಾರಖಾನೆಗಳು—ಈ ನಾಗರಿಕ ಉದ್ಯಮಗಳಲ್ಲದೆ ಚಾಕು-ಕತ್ತರಿ, ಬಂದೂಕು, ಮದ್ದುಗುಂಡುಗಳ ಮಿಲಿಟರಿ ಕಾರಖಾನೆಗಳೂ ಇದ್ದವು. ಅವನ ಕಾರಖಾನೆಗಳಲ್ಲಿ ತಯಾರಿಸಿದ ಮದ್ದುಗುಂಡುಗಳು ಇಂಗ್ಲೀಷರು ತಯಾರಿಸುತ್ತಿದ್ದವುಗಳಿಗಿಂತಲೂ ಶ್ರೇಷ್ಠತರಗತಿಯವಿದ್ದವೆಂಬುದನ್ನು ಬ್ರಿಟಿಶರೇ ಒಪ್ಪಿದ್ದಾರೆ.

ಮಲಬಾರ ಕಡಲ ಕರೆಯಲ್ಲಿ ಮುತ್ತುಗಳನ್ನು ಶೋಧಿಸಲು ವಿದೇಶಗಳಿಂದ ಮುಳುಕರನ್ನೂ ಅವನು ಕರೆಸಿದ್ದನು.

ಹುಚ್ಚು ಮಹಮದನ ಹೊಸ ವಿಚಾರಗಳಂತೆ ಟಿಪ್ಪುವಿನ ಕಲ್ಪನೆಗಳು ಮುಗಿಲಮಲ್ಲಿಗೆಯಾಗಿದ್ದಿಲ್ಲ. ಆದರೆ ಅವನು ಯೋಗ್ಯಕಾಲಕ್ಕಿಂತ ಸ್ವಲ್ಪ ಮುಂಚೆ ಹುಟ್ಟಿದನೇನೋ-ಅಥವಾ ಸ್ವಲ್ಪ ತಡವಾಗಿ ಎನ್ನೋಣವೇ? ಸ್ವಲ್ಪ ಮೊದಲು ಹುಟ್ಟಿದ್ದರೆ ಅವನ ನೇತೃತ್ವದಲ್ಲಿ ದಕ್ಷಿಣ ಭಾರತದಲ್ಲಿ ಔದ್ಯೋಗಿಕ ಪುನರುಜ್ಜೀವನವಾಗಿ ಮುಂದೆ ಬರಲಿದ್ದ ಬ್ರಿಟಿಶ ದಾಳಿಗಳನ್ನು ಹೆಚ್ಚು ಯಶಸ್ವಿಯಾಗಿ ಎದುರಿಸಬಹುದಾಗಿತ್ತು.



## ವಿಕ್ಷಿಪ್ತ ಮೃತ್ಯುಪತ್ರ

ಹದಿನೇಳನೇ ಶತಮಾನದಲ್ಲಿ ಲಂಡನ್ನಿನಲ್ಲಿ ವಾಸಿಸುತ್ತಿದ್ದ ಪೆಂಬ್ರೋಕಿನ ಅರ್ಲನು ಸಾಯುವಾಗ ತನ್ನ ವಿಕ್ಷಿಪ್ತ ಸ್ವಭಾವಕ್ಕೆ ತಕ್ಕ ಮೃತ್ಯುಪತ್ರವನ್ನೇ ಬರೆದಿಟ್ಟು ಹೋಗಿದ್ದನು.

"ನನ್ನ ದೇಹಸ್ಥಿತಿ ಕೆಟ್ಟಿದ್ದರೂ ಬುದ್ಧಿ ಸರಿಯಾಗಿಯೇ ಇದೆ. ನಾನು ನನ್ನ ದೇಹವನ್ನು ಬಿಡುತ್ತೇನೆ-ಯಾಕಂದರೆ ಅದನ್ನು ಇಟ್ಟುಕೊಳ್ಳಲು ಶಕ್ಯವಿಲ್ಲೆಂಬುದು ಸ್ಪಷ್ಟವಿದೆ. ಕಾರಣ, ಅದನ್ನು ಹುಗಿಯಿರಿ.

"ಹೆನ್ರಿ ವೈಲ್ಡ್‌ಮೇ ಎಂಬ ಮನುಷ್ಯನನ್ನೊಮ್ಮೆ ಒಳಿತಾಗಿ ಥಳಿಸಬೇಕೆಂಬ ಇಚ್ಛೆ ಎಂದಿನಿಂದಲೂ ನನಗಿತ್ತು. ಆದ್ದರಿಂದ ಆ ಕೆಲಸ ಮಾಡುವವನಾರಾದರೂ ಇದ್ದರೆ ಅವನಿಗೆ ೫೦ ಪೌಂಡು ಕೊಡಬೇಕು.

"ಥಾಮಸ್ ಮೇಗೆ ಐದು ಶಿಲಿಂಗ್ ಬಿಟ್ಟು ಹೋಗುತ್ತಿದ್ದೇನೆ. ಹಿಂದೊಮ್ಮೆ ನಾನು ಸಿಟ್ಟಿನ ಭರದಲ್ಲಿ ಅವನ ಮೂಗನ್ನು ಗುದ್ದಿ ಒಡೆದಿದ್ದೆ. ಅವನಿಗೆ ಇದಕ್ಕಿಂತ ಹೆಚ್ಚು ಹಣ ಬಿಟ್ಟು ಹೋಗಬೇಕೆಂದಿದ್ದೆ. ಆದರೆ ಅವನು ಬರೆದ ಪಾರ್ಲಿಮೆಂಟಿನ ಇತಿಹಾಸವನ್ನು ನೋಡಿದವರೆಲ್ಲರೂ ಇದೇ ಬಹಳವಾಯಿತೆನ್ನುವದು ಖಂಡಿತ."

ಆಗ ಜನರಿಗೆ ಅದರಲ್ಲಿ
ನಂಬಿಕೆ ಹುಟ್ಟಲಿಲ್ಲ !

# ಮೊಟ್ಟಮೊದಲನೇ ಅಂಚೆ ತಿಕೀಟು




ಇಂದು ಅಂಚೆ ತಿಕೀಟುಗಳನ್ನು ಸಂಗ್ರಹಿಸಿಡುವುದು ಒಂದು ಪ್ರೀತಿಯ ವಿಷಯವಾಗಿದ್ದರೆ ಮೊದಲ ಬಾರಿಗೆ ಈ ಜಗತ್ತಿನಲ್ಲಿ ಅಂಚೆಯ ತಿಕೀಟುಗಳನ್ನು ಅಚ್ಚು ಹಾಕಿಸಿದಾಗ ಜನರು ಅದನ್ನು ಬೆಲೆ ಕೊಟ್ಟು ಕೊಳ್ಳುವದಕ್ಕೇ ಹಿಂಜರಿಯುತ್ತಿದ್ದರು. ಸಣ್ಣದಾದ ಕಾಗದದ ಒಂದು ಚೂರು ಒಂದು ಪೆನ್ನಿ ಬೆಲೆಬಾಳುವುದು ಸಾಧ್ಯ ಎಂಬುದು ಅವರಿಗೆ ಒಪ್ಪಿಗೆಯಾಗದ ಆದರೆ ಒಪ್ಪಬೇಕಾಗಿರುವ ವಿಷಯವಾಗಿದ್ದಿತು.

೧೮೪೦ ರಲ್ಲಿ ಸರ್ ರೌಲಾಂಡ ಹಿಲ್ ಎಂಬಾತನು ಜಗತ್ತಿನ ಮೊದಲ ಅಂಚೆ ತಿಕೀಟುಗಳನ್ನು ತಯಾರಿಸಿ ಪ್ರಸಾರಗೊಳಿಸಿದನು. ವಿಕ್ಟೋರಿಯಾ ಮಹಾರಾಣಿಯ ತಲೆಯ ಚಿತ್ರವುಳ್ಳ ಅಚ್ಚನ್ನು ಅಂಚೆ ತಿಕೀಟಿಗಾಗಿ ಫ್ರೆಡರಿಕ್ ಹೀಥ್ ಎಂಬವನು ತಾಮ್ರದಲ್ಲಿ ತಯಾರಿಸಿದನು. ಪರ್ಕಿನ್ಸ್ ಬೇಕನ್ ಅ್ಯಂಡ್ ಕಂಪನಿಯವರು ಅದನ್ನು ಅಚ್ಚು ಹಾಕಿದರು. ೨೪೦ ಕಾಗದದ ಹಾಳೆಗಳಲ್ಲಿ ಈ ತಿಕೀಟುಗಳು ಅಚ್ಚಾದವು. ಪ್ರತಿಯೊಂದು ತಿಕೀಟಿಗೆ ಒಂದು ಪೆನ್ನಿಯ ಬೆಲೆ ಇಡಲಾಗಿದ್ದಿತು.

ಮುಂದಾಗಿ ಬೆಲೆ ಕೊಟ್ಟು ಈ ತಿಕೀಟುಗಳನ್ನು ಕೊಂಡು ತಾವು ಬರೆದ ಲಕೋಟೆಗಳ ಮೇಲೆ ಅಂಟಿಸಿ ಅಂಚೆ ಪೆಟ್ಟಿಗೆಯಲ್ಲಿ ಹಾಕಬಹುದೆಂದು ಜನರು ಮೊದಲ ಬಾರಿಗೆ ತಿಳಿಯತೊಡಗಿದರು. ಅಂಚೆ ಪೆಟ್ಟಿಗೆಯಲ್ಲಿ ಹಾಕಿದ ತಮ್ಮ ಅಂಚೆಯು ಸರಿಯಾಗಿ ತಲಪುವುದೆಂದು ತಿಳಿಯಲು ಅವರಿಗೆ ಸ್ವಲ್ಪ ಸಮಯ ಹಿಡಿಯಿತು. ಏಕೆಂದರೆ ಅಂಚೆ ತಿಕೀಟು ಅವರಿಗೆ ಆಶ್ಚರ್ಯಕಾರಿಯಾದ ಹೊಸ ವಸ್ತುವಾಗಿದ್ದಿತು.

ಮೊದಲು ತಯಾರಿಸಿದ ಒಂದಕ್ಕೊಂದು ಸೇರಿಕೊಂಡಿದ್ದ ಆ ತಿಕೀಟುಗಳನ್ನು ಕತ್ತರಿಯಿಂದ ಕತ್ತರಿಸಬೇಕಾಗುತ್ತಿದ್ದಿತು. ಈಗಿನಂತೆ ಹರಿಯಲು ಸುಲಭವಾದ ಪರ್ಫೊರೇಶನ್ ಇದ್ದಿಲ್ಲ. ೧೮೫೪ರಲ್ಲಿ ಹೆನ್ರಿ ಆರ್ಚರ್ ಎಂಬವನು ತಿಕೀಟುಗಳನ್ನು ಹರಿಯಲು ಅನುಕೂಲವಾದ ಪರ್ಫೊರೇಶನ ಯಂತ್ರವನ್ನು ಕಂಡುಹಿಡಿದನು.

ಅಮೇರಿಕೆಯಲ್ಲಿ ೧೮೪೭ರಲ್ಲಿ ಮೊದಲು ಅಂಚೆ ತಿಕೀಟುಗಳನ್ನು ಪ್ರಚಾರಕ್ಕೆ ತರಲಾಯಿತು. ಮತ್ತು ೧೮೪೯ರಲ್ಲಿ ಫ್ರಾನ್ಸು ಅಂಚೆ ತಿಕೀಟುಗಳನ್ನು ಮುದ್ರಿಸಿತು.

ಎಲ್ಲ ದೇಶಗಳಲ್ಲಿಯೂ ಮೊದಲಬಾರಿ ಸಾವಿರಾರು ಅಂಚೆ ತಿಕೀಟುಗಳನ್ನು ಮುದ್ರಿಸಿದರೂ ಅವು ಅಷ್ಟು ಮಾರಿ ಹೋಗಲಿಲ್ಲ. ಕಾಗದದ ಚೂರಿಗೆ ಅಂಥ ಬೆಲೆ ಬರುವ ಬಗ್ಗೆ ಜನರಿಗೆ ವಿಶ್ವಾಸವಿರಲಿಲ್ಲ.

ಅಂಚೆ ತಿಕೀಟುಗಳ ಸಂಗ್ರಹದ ಅಭ್ಯಾಸವು ಆಗ ಇರಲಿಲ್ಲವಾದುದರಿಂದ ಒಮ್ಮೆ ಉಪಯೋ

ಕೆ. ಬಿ. ಸ್ಕ್ಯವರರ ಲೇಖನದಿಂದ

ಗಿಸಿದವುಗಳನ್ನು ಎಸೆದು ಉಳಿದವನ್ನಷ್ಟೇ ಕಾದಿಡಲಾಗುತ್ತಿತ್ತು.

ಇದರಿಂದಾಗಿ ಇಂದು ವಿಕ್ಟೋರಿಯಾ ರಾಣಿಯ ಮೊದಲ ಅಂಚೆ ತಿಕೀಟಿಗೆ ೧೫ ಪೌಂಡು ಮತ್ತು ಉಪಯೋಗಿಸಿದ ತಿಕೀಟಿಗೆ ೧೩ ಪೌಂಡುಗಳ ಬೆಲೆಯಿದೆ. ಇವಕ್ಕಿಂತ ಬೆಲೆ ಬಾಳುವ ತಿಕೀಟುಗಳಿವೆ; ಏಕೆಂದರೆ ಅವನ್ನು ಅಚ್ಚುಹಾಕಿಸಿದ್ದೇ ಕಡಿಮೆಯಾಗಿತ್ತು. ೧೮೬೫ ರ ಬ್ರಿಟಿಶ್ ಗಿಯಾನಾದ ೧ ಸೆಂಟಿನ ತಿಕೀಟು ಇದಕ್ಕೆ ಮುಖ್ಯ ನಿದರ್ಶನವಾಗಿದೆ. ಜಾರ್ಜ್ ಟೌನಿನ ವಸಾಹತಿನಲ್ಲಿ ಈ ತಿಕೀಟನ್ನು ಕಾದಿಡಲಾಗಿದೆ. ಏಕೆಂದರೆ ಅಂಚೆ ಕಚೇರಿಯಲ್ಲಿರುವ ಆ ತಿಕೀಟುಗಳು ಮುಗಿದು ಹೋಗಿದ್ದವು. ಇದರ ಒಂದೇ ಒಂದು ಪ್ರತಿಯು ಈಗ ಉಳಿದಿದೆ ಎಂದು ಹೇಳುತ್ತಾರೆ.

ಅವಕಾಶವೊದಗಿದಾಗಲೆಲ್ಲ ಎಲ್ಲಾ ದೇಶಗಳು ಆದಾಯದ ಮೂಲವೆಂದು ಅಂಚೆ ತಿಕೀಟುಗಳನ್ನು ಪ್ರಚಾರಪಡಿಸುತ್ತವೆ. ಆದರೆ ಬ್ರಿಟನ್ ಅದಕ್ಕೆ ಅಪವಾದವಾಗಿದೆ.

ಹೀಗಿದ್ದರೂ ಬ್ರಿಟಿಶ್ ಸಾಮ್ರಾಜ್ಯದ ವಸ್ತು ಪ್ರದರ್ಶನ ೧೯೨೫ ರಲ್ಲಿ ನಡೆದಾಗ, ಐದನೆಯ ಜಾರ್ಜನ ಬೆಳ್ಳಿ ಹಬ್ಬದಲ್ಲಿ, ೧೯೪೬ರಲ್ಲಿ ವಿಜಯ ಸ್ಮಾರಕವಾಗಿ ಹಾಗೂ ೧೯೫೩ರಲ್ಲಿ ರಾಣಿಯ ಸಿಂಹಾಸನಾರೋಹಣ ಸಮಯದಲ್ಲಿ ಇಂಥ ವಿಶೇಷ ಅಂಚೆ ತಿಕೀಟುಗಳನ್ನು ಪ್ರಚಾರಪಡಿಸಲಾಯಿತು.

## ಜೀವನ ಮೀಮಾಂಸೆ

“ ಜೀವನವು ಕೇವಲ ಒಂದು ಲಯವಾಗಿದೆ ” ಸಂಗೀತಜ್ಞನು ತನ್ನ ಮಧುರ ಸ್ವರದಿಂದ ನುಡಿದನು.

ಆಗ ನರ್ತಕನು ವಾದ್ಯವನ್ನು ಎಸೆದು ಎದ್ದುನಿಂತು “ ಸುಳ್ಳು ! ಜೀವನವು ಶಿವ ನೃತ್ಯದ ಒಂದು ತಾಳ ಅಷ್ಟೆ ” ಎಂದ.

ತನ್ನ ದೊಡ್ಡದಾದ ‘ ಗಂಜಿಫ್ರಾಕ ’ನ್ನು ಸರಿಪಡಿಸಿಕೊಳ್ಳುತ್ತ ಗಡ್ಡದ ಮೇಲೆ ಕಯ್ಯಾಡಿಸಿಕೊಂಡು ಧರ್ಮೋಪದೇಶಕ ಗಂಭೀರ ಸ್ವರದಲ್ಲಿ ಹೇಳತೊಡಗಿದ. “ ಅಲ್ಲ, ಈ ಜೀವನ ಒಬ್ಬ ಪಿತಾಮಹ ಪರಮಾತ್ಮನ ಉಪದೇಶ. . . . ”

ಆತನ ಮಾತು ಇನ್ನೂ ಮುಗಿದಿರಲಿಲ್ಲ. ಅದಕ್ಕೆ ಮೊದಲು ಒಬ್ಬ ಯೋಧ ಅಲ್ಲಿಗೆ ಧುಮುಕಿ ಖಡ್ಗವನ್ನು ಝಳಪಿಸುತ್ತ ಸಿಟ್ಟಿನಿಂದ ಗರ್ಜಿಸಿದ : “ ಎಲಾ ! ಜೀವನ, ಅದು ಕರವಾಳದ ಟಂಕಾರವೇ ಸರಿ. ”

ಜೀವನದ ಬೇರೆ ಬೇರೆ ವ್ಯಾಖ್ಯೆಗಳನ್ನು ಕೇಳಿ ಅವರು ನಾಲ್ವರೂ ಸಿಟ್ಟಾದರು ; ಪರಸ್ಪರ ಹೋರಾಡಿ ಪರಾಸ್ತರಾದರು.

ಹಾ ! ಶತಮಾನಗಳಿಂದ ಈ ಅಬೋಧ ಮಾನವ ಕುಲವು ತನ್ನ ಜೀವನದ ಮೀಮಾಂಸೆಯ ಕಲಹದಲ್ಲಿ ಜೀವನವನ್ನೇ ನಾಶಗೊಳಿಸುತ್ತ ಸಾಗಿದೆ !

‘ ನವನೀತ ’ದಲ್ಲಿ ಕುಮಾರಿ ರಮಾ ಬ್ಯಾನರ್ಜಿ

ಯುದ್ಧ ಮಾಡುತ್ತಿದ್ದಳು, ಬೇಟೆಯಾಡುತ್ತಿದ್ದಳು, ಮರ ಹತ್ತುತ್ತಿದ್ದಳು

# ಹೆಂಗಸು ಮೊದಲು ಹೀಗಿದ್ದಿಲ್ಲ!

ಶ್ರೀನಿವಾಸ ಹಾವನೂರ

ನೀಳವಾದ ಕೇಶರಾಶಿ, ಕಾಂತಿಯುಳ್ಳ ಕಣ್ಣು, ಆಕರ್ಷಕವಾದ ಮುಖ, ಉಬ್ಬಿದ ಎದೆ, ಮಿದುವಾದ ಮೈ, ಮೆಲ್ಲಮೆಲ್ಲನೆಯ ನಡಿಗೆ, ಮೋಹಕವಾದ ನಡೆ–ನುಡಿಗಳು—ಇದು ಇಂದಿನ ಶತಮಾನದ ಹೆಣ್ಣಿನ ಚಿತ್ರ. ಈಕೆ ಅಬಲೆಯೆನ್ನಿಸಿಕೊಳ್ಳುವಷ್ಟು ಕೋಮಲೆ.

ಆದರೆ ಇಂದಿಗಿಂತ ನೂರಾರು, ಸಹಸ್ರಾರು ವರ್ಷಗಳ ಹಿಂದೆ, ಎಂದರೆ ಮನುಷ್ಯ ಹಸಿ ಕಾಡುಮೃಗಗಳನ್ನು ತಿಂದು, ಮೈಮೇಲೆ ಬಟ್ಟೆಬರೆ, ನಿತ್ಯ ಜೀವನಕ್ಕೆ ಬೇಕಾಗುವ ಯಾವದೇ ಸಲಕರಣೆ ಇಲ್ಲದೆ ಬದುಕಿ ಇದ್ದ ಕಾಲದಲ್ಲಿ ಸ್ತ್ರೀ ಹೇಗೆ ಇದ್ದಳು, ಎಂಬುದನ್ನು ನೋಡುವ ಹಾಗಿದೆ. ಆಗಿನ ಕಾಲದ ಜೀವನವನ್ನು ತಿಳಿಯುವುದಕ್ಕೆ ಇಂದಿಗೂ ನಾಡಿನ ಒಳಭಾಗಗಳಲ್ಲಿರುವ ಕೆಲವು ಕಾಡು ಜನಾಂಗಗಳ ಅಭ್ಯಾಸವು ಸಹಾಯಕವಾಗಿದೆ. ಅದರ ಮೇಲಿಂದ ಪ್ರಾಚೀನ ಕಾಲದ ಹೆಣ್ಣು ಯಾವ ರೀತಿಯಾಗಿ ಇದ್ದಳೆಂಬುದರ ಬಗ್ಗೆ ತಿಳಿದುಬಂದ ಕೆಲವು ಅಂಶಗಳನ್ನು ಕೊಡಬಯಸಿದೆ.

ಮುಖ್ಯವಾದ ಮಾತೆಂದರೆ ಅತ್ಯಂತ ಪ್ರಾಚೀನಕಾಲದ ಸ್ತ್ರೀ ತನ್ನ ಬುದ್ಧಿಬಲ, ದೇಹಶಕ್ತಿ ,ಮತ್ತು ಕಾರ್ಯರಂಗದಲ್ಲಿ ಗಂಡಿಗೆ ಯಾವ ದೃಷ್ಟಿಯಿಂದಲೂ ಕಡಿಮೆ ಇರಲಿಲ್ಲ. ಅದೇಕೆ, ಮೈಕಟ್ಟು ಮತ್ತು ಸಾಮರ್ಥ್ಯದಲ್ಲಿ, ಕೆಲವು ಜನಾಂಗಗಳ ಸ್ತ್ರೀಯರು ಪುರುಷರನ್ನು ಮೀರಿಸುವಂತಿದ್ದರು. ಇನ್ನು ಕೆಲವೆಡೆ ಸ್ತ್ರೀಯರು ಗಂಡಸಿಗಿಂತ ಎತ್ತರವಾಗಿದ್ದರು. ದಹೋಮ, ಬಿಶಿಲಂಗಾ ಮತ್ತು

ಕಿಕಯು ಮುಂತಾದ ಕಾಡು ವರ್ಗಗಳಲ್ಲಿ ಇಂದಿಗೂ ಈ ಲಕ್ಷಣಗಳನ್ನು ಕಾಣಬಹುದಾಗಿದೆ. ಮೆಲನೇಶಿಯನ್ ಹೆಂಗಸರು ಹೊರುವಷ್ಟು ಒಜ್ಜೆಯನ್ನು ಗಂಡಸರು ಹೊರಲಾರದೆ ಅಳುಕುತ್ತಾರಂತೆ!

ಇದಲ್ಲದೆ ಮುಖ ಮತ್ತು ದೇಹದ ಹೋಲಿಕೆಯಲ್ಲಿ ಅವರು ಪುರುಷರಂತೆಯೇ ಇದ್ದರಾದ್ದರಿಂದ ಯಾರು ಹೆಣ್ಣು, ಯಾರು ಗಂಡು ಎಂದು ಹೇಳುವುದು ಕಷ್ಟವಾಗುತ್ತಿತ್ತು. ಈಗಲೂ ಬುಶ್‌ಮೆನ್, ಬಾಂಟು ಮತ್ತು ಕೆಳಕಾಂಗೋ ಭಾಗದಲ್ಲಿ ವಾಸಿಸುವ ಕಾಡು ಜನಾಂಗಗಳಲ್ಲಿ ಸ್ತ್ರೀ-ಪುರುಷ ಭೇದವನ್ನು ಮೇಲುನೋಟಕ್ಕೆ ತಿಳಿಯುವುದು ಕಷ್ಟವೇ. ಎಂತಲೇ ಅವರು ಕೆಲವರಲ್ಲಿ, ತಲೆಕೂದಲನ್ನು ಹಿಕ್ಕಿಕೊಳ್ಳುವ ರೀತಿಯಿಂದ ಇಂಥವರು ಸ್ತ್ರೀ, ಇಂಥವರು ಪುರುಷರು ಎಂದು ಗುರುತಿಸುವ ಕ್ರಮ ಇದೆ.

ಮೈಕಟ್ಟಿನಲ್ಲಲ್ಲದೆ ಕಾರ್ಯಶಕ್ತಿಯಲ್ಲಿಯೂ ಪುರುಷನನ್ನು ಆಕೆ ಹಿಂದೆ ಹಾಕಿದ್ದಳು. ಕಾದಾಟ, ಬೇಟೆ, ಸಮುದ್ರಯಾನಗಳಲ್ಲಿ, ಅನೇಕ ಬಾರಿ, ಸ್ತ್ರೀಯೇ ಮುಂದೆ ಇರುತ್ತಿದ್ದಳು. ತಾರತಮ್ಯವಂತೂ ಇರಲೇ ಇಲ್ಲ. ಫ್ಯುಜಿಯನ್ ಹೆಂಗಸರು ಇಂದಿಗೂ ದೋಣಿ ನಡೆಸಿಕೊಂಡು ಬಹುದೂರ ಸಮುದ್ರದಲ್ಲಿ ಹೋಗುತ್ತಾರೆ. ಹಿಂದಿನ ಕಾಲಕ್ಕೆ ಬಿಟ್ಟವರೇ ಅವರು? ತಾಸ್ಮಾನಿಯನ್ ಹೆಂಗಸರಂತೂ ಸಮುದ್ರದ ಆಳಕ್ಕೆ ಇಳಿಯುವುದರಲ್ಲಿಯೂ ಎತ್ತರದ ಮರಗಳನ್ನು ಹತ್ತುವುದರಲ್ಲಿಯೂ ಪುರುಷರನ್ನು ಮೀರಿಸಿದವರಾಗಿದ್ದರು. ಆಫ್ರಿಕೆಯ ಮತ್ತು ದಕ್ಷಿಣ ಅಮೇರಿಕೆಯ ಇಂದಿನ ಅನೇಕ ಕಾಡು ಜನಾಂಗಗಳಲ್ಲಿ ಸ್ತ್ರೀಯೋಧರು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ.

ಆದರೆ ಈ ಪರಿಸ್ಥಿತಿ ಹೀಗೆಯೇ ಉಳಿದುಕೊಂಡು ಬರಲಿಲ್ಲ. ಸ್ತ್ರೀ ದೈಹಿಕ ಬಲ ಮತ್ತು ಹೊರಗಿನ ಕಾರ್ಯರಂಗದಲ್ಲಿ ಗಂಡಸಿಗೆ ಸರಿಸಮಾನಳಾಗಿದ್ದರೂ ಗರ್ಭಧಾರಣೆ, ಬಾಣಂತಿತನ, ಮಗುವಿನ ಆರೈಕೆಗಳಲ್ಲಿ ಪುರುಷನನ್ನು ಆಕೆ ಅವಲಂಬಿಸಬೇಕಾಗುತ್ತಿತ್ತು. ಹಿಂದಿನ ಕಾಲದಲ್ಲಿ ಇದು ತೀರ ಅಲ್ಪ ಪ್ರಮಾಣದಲ್ಲಿ ಇದ್ದರೂ ಆಕೆ ಮಕ್ಕಳನ್ನು ಹೆರುವ ಸಂಖ್ಯೆಯು ಹೆಚ್ಚುತ್ತ ಹೋದಂತೆ, ಅವಳ ದೇಹ ಸಾಮರ್ಥ್ಯ ಕಡಿಮೆಯಾಗತೊಡಗಿತು. ಹಾಗಾಗಿ ಅವಳು ಹೆಚ್ಚಾಗಿ ಮನೆಯಲ್ಲಿ ಉಳಿಯತೊಡಗಿದಳು.

ಪ್ರಾಚೀನ ಮಹಿಳೆ ಹೀಗೆ ಮನೆಯಲ್ಲಿ ಉಳಿದರೂ ಮೂಲೆಗುಂಪಾಗಿ ಬಾಳ್ವೆ ನಡೆಸಲಿಲ್ಲ. ಶ್ರಮವಿಭಾಗವಾಗಿ, ಗಂಡಸು ಮೀನುಗಾರಿಕೆ, ಬೇಟೆ, ಯುದ್ಧಗಳಿಗೆ ನಿಂತನು. ಹೆಂಗಸು ಕಡಿಮೆ ಕಷ್ಟದ ಕಾಯಕಗಳನ್ನು ಕೈಕೊಂಡಳು. ಅದಕ್ಕಿಂತ ಅವಳು ಉದ್ಯೋಗಪ್ರಿಯೆಯಾದಳು ಎನ್ನಬೇಕು. ಆಕೆ ಮನೆಯಲ್ಲಿ ಉಳಿದು ಆಹಾರವನ್ನು 'ಬೇಯಿಸಿ'ದಳು. ಬೇಟೆಯ ಮೃಗದ ಚರ್ಮವನ್ನು ಸುಲಿದು, ಅದರಿಂದ ಬಟ್ಟೆಬರೆಗಳನ್ನು ಸಿದ್ಧಗೊಳಿಸಿದಳು. ತನ್ನ ಗುಡಿಸಲಿನ ಸಮೀಪದಲ್ಲಿಯೇ ನೆಲವನ್ನು ಉತ್ತು ಧಾನ್ಯವನ್ನು ಬೆಳೆದಳು. ಆಗ ಬೇಸಾಯವು ಮೂಲತಃ ಸ್ತ್ರೀಯ ಕೆಲಸವೇ ಆಗಿತ್ತು. ಆಕೆಯೇ ಮಣ್ಣಿನ ಪಾತ್ರೆಗಳನ್ನು ಮಾಡುವ ರೀತಿಯನ್ನು ಗೊತ್ತುಹಚ್ಚಿದಳು. ಎರಡು ದೊಡ್ಡ ಕಲ್ಲುಗಳ ನಡುವೆ ಧಾನ್ಯದ ಕಾಳುಗಳನ್ನಿಟ್ಟು ಪುಡಿಮಾಡಿ ಆಹಾರ ಸೇವಿಸುವ ಸಂಶೋಧನೆಯು ಪ್ರಾಚೀನ ಮಹಿಳೆಯಿಂದಲೇ ಆಯಿತು. ಅದರಂತೆ ನೂಲಿನ ರಾಟೆಯನ್ನು ಹುಡುಕಿ ತೆಗೆದವಳೂ ಅವಳೇ. 'ಸಂಶೋಧನೆಗಳ ಮೂಲ' ವನ್ನು ಕುರಿತು ಸಾಧಾರವಾಗಿ ಬರೆಯುವಾಗ ಮ್ಯಾಸನ್ ಅವರು ಕಲೆ, ಕೈಗಾರಿಕೆ ಮತ್ತು ಉದ್ಯಮ ಪ್ರತಿಯೊಂದರಲ್ಲಿಯೂ ಸ್ತ್ರೀಯ ಬುದ್ಧಿ ಮತ್ತು ಕೈವಾಡವನ್ನು ಕಂಡಿದ್ದಾರೆ. ಅವಳೇ ಆದಿ ಕಾಲದ ಡಾಕ್ಟರಿಣಿಯಾಗಿದ್ದಳು. ಅವಳ ಈ ಎಲ್ಲ ಕೆಲಸವು, ತನ್ನದಕ್ಕಿಂತ ಕೀಳು ಎಂಬುದಾಗಿ ಪ್ರಾಚೀನ ಗಂಡಸು ಎಷ್ಟು ಮಾತ್ರಕ್ಕೂ ತಿಳಿದಿರಲಿಲ್ಲ. ಬದಲಾಗಿ ಅವನು ಅವಳಿಗೆ ಮಾನಸಿಕವಾಗಿ ಅಧೀನನಾಗಿದ್ದ ಎನ್ನಬಹುದು.

# ನೀವು ಅಭ್ಯುದಯ ಬಯಸುತ್ತೀರಾ ?

ವೃತ್ತಿಯಲ್ಲಿ ಮೇಲೇರಬೇಕೆಂಬವರಿಗೆ ಇರಬೇಕಾದ ಹನ್ನೆರಡು ಗುಣಗಳು ಇಲ್ಲಿವೆ :

೧. ಒಂದು ಸಂಸ್ಥೆಗಾಗಲಿ ಒಬ್ಬ ವ್ಯಕ್ತಿಗಾಗಲಿ ನೀವು ಉಪಯುಕ್ತರಾಗ ಬೇಕೆಂಬ ಬಯಕೆ ನಿಮ್ಮಲ್ಲಿರಬೇಕು.

೨. ದೇಹದಲ್ಲಿ ಮಾತ್ರವಲ್ಲದೆ ಮನಸಿನಲ್ಲಿಯೂ ಜ್ಞಾನದಲ್ಲಿಯೂ ಸ್ಥಾನಮಾನ ದಲ್ಲಿಯೂ ಅಭ್ಯುದಯ ಹೊಂದಬೇಕೆಂಬ ಉತ್ಕಟ ಇಚ್ಛೆ ಬೇಕು.

೩. ಸರಿ ಯಾವದು ತಪ್ಪಾವದು ಎಂದು ಕೂಡಲೆ ವಿವೇಚಿಸುವ ಯೋಗ್ಯತೆ ಇರಬೇಕು.

೪. ಮೀನ ಮೇಷ ಎಣಿಸದೆ ತಕ್ಷಣ ನಿರ್ಣಯ ಕೈಕೊಳ್ಳುವ ದಿಟ್ಟ ಬುದ್ಧಿ ನಿಮಗಿರಬೇಕು. ಮನಸು ಗಟ್ಟಿಮಾಡಲು ಹಿಂದೆಮುಂದೆ ನೋಡುತ್ತ ಕಾಲ ಕಳೆಯು ವವರು ಎಂದೂ ಪ್ರಗತಿ ಹೊಂದಿಲ್ಲ.

೫. ಯಾವದೊಂದು ಸಮಸ್ಯೆಯನ್ನು ಬೇಗನೆ ಮತ್ತು ಸರಿಯಾಗಿ ಅರ್ಥ ಮಾಡಿಕೊಳ್ಳುವ ಶಕ್ತಿ ಬೇಕು.

೬. ಯಾವಾಗಲೂ ಪರರಿಗೆ ತಾನಾಗಿ ಉಪಕಾರ ಮಾಡುವ ಮನೋಭಾವ ಬೇಕು. ಹೇಳಿದ ಕೆಲಸ ಮಾಡುವಾತನು ಹೇಳಿದ ಹೊರತು ಕೆಲಸ ಮಾಡುವದಿಲ್ಲ. ಮಹತ್ವಾಕಾಂಕ್ಷಿ ತರುಣನು ಹೇಳುವ ಮೊದಲೇ ತಾನಾಗಿ ಮಾಡಿ ತೋರಿಸುತ್ತಾನೆ.

೭. ಉತ್ಕಟ ಮಹತ್ವಾಕಾಂಕ್ಷೆ ಬೇಕು. ಆದರೆ ಅಹಂಕಾರ ಅಥವಾ ಧನಲಾಭದ ಸ್ವಾರ್ಥದೃಷ್ಟಿ ಸಲ್ಲದು.

೮. ವಿನಯಶೀಲ ಬೇಕು, ಅದರೊಡನೆ ನಿಸ್ಸಂದಿಗ್ಧ ಧೈರ್ಯವೂ ಬೇಕು.

೯. ಹೊಸ ವಿಷಯವನ್ನು ಕಲಿಯುವ ಜಿಜ್ಞಾಸೆ ಇರಬೇಕು. ಜ್ಞಾನವು ಆತ್ಮ ವಿಶ್ವಾಸವುಂಟುಮಾಡುತ್ತದೆ.

೧೦. ಟೀಕೆಗಳನ್ನು ಪ್ರಾಂಜಲ ಮನಸ್ಸಿನಿಂದ ಸ್ವೀಕರಿಸುವ ಬುದ್ಧಿ ಇರಬೇಕು. ಅದರಿಂದ ನಿಮ್ಮ ತಪ್ಪುಗಳನ್ನು ತಿದ್ದಿಕೊಳ್ಳಲು ನೆರವಾಗುವದು. ಮೇಲಿನವರು ಅಧಿಕಾರಪ್ರದರ್ಶನಕ್ಕಾಗಿಯೇ ಟೀಕಿಸುವರೆಂದು ತಿಳಿಯುವದು ಹಿತವಲ್ಲ.

೧೧. ತಪ್ಪಾದರೆ ಧೈರ್ಯದಿಂದ ಒಪ್ಪಿಕೊಳ್ಳುವ ಬುದ್ಧಿ ಬೇಕು. ಮುಂದುವರಿ ಯುವವರು ತಪ್ಪು ಮಾಡಿ ಬುದ್ಧಿ ಕಲಿಯುತ್ತಾರೆ. ತಪ್ಪು ಮಾಡಿ ಮುಚ್ಚಿಡು ವವರಿಗೆ ಅಥವಾ ಅದರ ಹೊಣೆ ಬೇರೆಯವರ ಮೇಲೆ ಹಾಕುವವರಿಗೆ ಬಡತಿ ಸಿಗುವದು ಕಡಿಮೆ.

೧೨. ಎಂಥ ಅಡಚಣೆಗಳಿದ್ದರೂ ಗುರಿ ಸಾಧಿಸುವ ದೃಢ ನಿರ್ಧಾರ ಬೇಕು.

— " ಎಫಿಶನ್ಸಿ ಮೆಗಜೀನ " ದಿಂದ

ಪ್ರಾಣಿ ಜಗತ್ತಿನ ಹತ್ತು ಮೇಧಾವಿಗಳು

# ಯಾವ ಪ್ರಾಣಿಗೆ

ಪ್ರಾಣಿಗಳು ಮನುಷ್ಯರಂತೆ ವಿಚಾರ ಮಾಡಿ ಕೆಲಸ ಮಾಡುತ್ತವೆಯೆ ಅಥವಾ ಕೇವಲ ಸಹಜಪ್ರವೃತ್ತಿಯಿಂದ ಕೆಲಸ ಮಾಡುತ್ತವೆಯೆ? ಅನೇಕರು ಈ ಪ್ರಶ್ನೆಯನ್ನು ಕುರಿತು ಚರ್ಚಿಸಿದ್ದಾರೆ. ಡಾ. ಬ್ಲೇರ್ ಎಂಬವರು ಪ್ರಾಣಿಗಳೊಡನೆ ಅನೇಕ ವರ್ಷಗಳ ವರೆಗೆ ಕೆಲಸ ಮಾಡಿ ಅವುಗಳ ರೀತಿಗಳನ್ನು ಅಭ್ಯಾಸ ಮಾಡಿದ್ದಾರೆ. ಅವರು ಹೇಳುವದು ಇದು.

ಪ್ರಾಣಿಗಳ ಜೊತೆಗಾರನಾಗಿ ಅನೇಕ ವರ್ಷಗಳನ್ನು ಕಳೆದಿರುವ ನ್ಯೂಯಾರ್ಕಿನ ಪ್ರಾಣಿ ಸಂಗ್ರಹಾಲಯದ ಹಿಂದಿನ ಡಾಯರೆಕ್ಟರ ಡಾ. ಡಬ್ಲ್ಯು. ರೀಡಾಬ್ಲೇರರು "ಎಲ್ಲ ಪ್ರಾಣಿಗಳೂ ವಿಚಾರಮಾಡುತ್ತವೆ ಎಂಬುದು ನನ್ನ ತೀರ್ಮಾನ," ಎನ್ನುತ್ತಾರೆ. "ಒಂದು ಪ್ರಾಣಿ ಪ್ರೀತಿಯನ್ನು ವ್ಯಕ್ತಪಡಿಸುವಾಗ, ಸಹಾನುಭೂತಿಯನ್ನು ಪ್ರದರ್ಶಿಸುವಾಗ, ಸಿಟ್ಟು ಅಥವಾ ಮತ್ಸರವನ್ನು ತೋರಿಸುವಾಗ ಈ ಭಾವನೆಗಳ ಹಿಂದೆ ವಿಚಾರಗಳ ತಾಕಲಾಟವಿದೆಯೆಂಬ ಮಾತಿನಲ್ಲಿ ನಾವು ಸಂದೇಹ ಪಡುವದಾದರೂ ಹೇಗೆ?" ಡಾ. ಬ್ಲೇರರ ಪ್ರಶ್ನೆ ಇದು.

ಪ್ರಾಣಿಗಳಲ್ಲಿ ಅತಿ ಬುದ್ಧಿಶಾಲಿಯಾದ ಪ್ರಾಣಿಗಳಿವು ಎಂದು ಡಾ. ಬ್ಲೇರರ ಅಭಿಪ್ರಾಯವಿದೆ:

(೧) ಚಿಂಪಾಂಝಿ
(೨) ಊರಾಂಗುಟಾನ
(೩) ಆನೆ
(೪) ಗೋರಿಲ್ಲಾ
(೫) ನಾಯಿ
(೬) ಬೀವರ್*
(೭) ಕುದುರೆ
(೮) ನೀರು ಸಿಂಹ
(೯) ಕರಡಿ
(೧೦) ಬೆಕ್ಕು

---

* ನೀರಿನ ಮೇಲೆಯೂ ನೆಲದ ಮೇಲೆಯೂ ವಾಸಿಸಬಲ್ಲ, ಮೃದುವಾದ ಕೂದಲೂ ಅಗಲವಾದ ಬಾಲವೂ ಇರುವ, ತನ್ನ ವಾಸಕ್ಕೆ ಮನೆಯನ್ನೂ ನೀರಿಗೆ ಅಡ್ಡ ಕಟ್ಟನ್ನೂ ಕಟ್ಟಬಲ್ಲ, ಇಲಿಯಂತೆ ಅಗಿದು ಪದಾರ್ಥಗಳನ್ನು ಜೀರ್ಣಮಾಡಬಲ್ಲ ಒಂದು ಪ್ರಾಣಿ ಜಾತಿ.

# ಎಷ್ಟು ಬುದ್ಧಿ ?

"ನಾವು ಸಾಕಿರುವ ಆಫ್ರಿಕೆಯ ಹೆಣ್ಣು ಚಿಂಪಾಂಝಿ, ಎಲೆನ್, ಮನುಷ್ಯರಂತೆ ತಾನೇ ಸ್ವೆಟರನ್ನು ಹಾಕಿಕೊಳ್ಳಬಲ್ಲದು. ನಮ್ಮಂತೆಯೆ ಖುರ್ಚಿಯ ಮೇಲೆ ಕುಳಿತು ಮೇಜಿನ ಮೇಲೆ ಬಡಿಸಿದ ತಿನಿಸನ್ನು ಚುಚ್ಚುಕಡ್ಡಿಯಿಂದ ಹೆಕ್ಕಿ ಆರು ವರ್ಷದ ಮಕ್ಕಳಂತೆಯೇ ತಿನ್ನಬಲ್ಲದು. ಅನೇಕ ವರ್ಷಗಳ ಹಿಂದೆ ಅರಿವೆಯನ್ನು ಹೊಲಿಯಬಲ್ಲ ಚಿಂಪಾಂಝಿ ಒಂದು ನಮ್ಮ ಬಳಿ ಇತ್ತು," ಎಂದು ಡಾ. ಬ್ಲೇರರು ಹೇಳಿದ್ದಾರೆ.

ತನ್ನ ಪಂಜರದ ಹೊರಗಡೆ ತೂಗಿ ಹಾಕಿದ್ದ ಬಾಳೆಹಣ್ಣನ್ನು ಕಂಡು ಅದನ್ನು ದೊರಕಿಸಲು ಒಂದು ಚಿಂಪಾಂಝಿ ಕೋಲೊಂದನ್ನು ಹೆಕ್ಕಿಕೊಂಡು ಅದರಿಂದ ಬಾಳೆಹಣ್ಣನ್ನು ತನ್ನ ಹತ್ತರಕ್ಕೆ ತರುವ ಪ್ರಯತ್ನ ಮಾಡಿತು. ಆ ಕೋಲು ಚಿಕ್ಕದಾಗಿದ್ದುದರಿಂದ ಬಾಳೆಯಹಣ್ಣು ಎಟಕಲಿಲ್ಲ. ಆಗ ಅದು ಈ ಮೊದಲನೆಯ ಕೋಲಿಗೆ ಕೂಡಿಸಬಹುದಾದ ಇನ್ನೊಂದು ಕೋಲನ್ನೂ ಹೆಕ್ಕಿಕೊಂಡಿತು. ( ಉದ್ದೇಶಪೂರ್ವಕವಾಗಿಯೇ ಈ ಕೋಲುಗಳನ್ನೂ ಪಂಜರದಲ್ಲಿಡಲಾಗಿತ್ತು. ) ಹೀಗೆ ಕೋಲನ್ನು ಉದ್ದ ಮಾಡಿಕೊಂಡು ಚಿಂಪಾಂಝಿ ಆ ಬಾಳೆಹಣ್ಣನ್ನು ದೊರಕಿಸಿತು.

ಮಂಗಗಳ ಜಾತಿಯಲ್ಲಿ ಹೀಗೆ ತನ್ನ ಕಾರ್ಯಸಾಧನೆಗಾಗಿ ಉಪಕರಣಗಳನ್ನು ಉಪಯೋಗಿಸುವದು ಚಿಂಪಾಂಝಿ ಮಾತ್ರವಲ್ಲ. ತನ್ನ ಬುದ್ಧಿಗಾಗಿ ಪ್ರಸಿದ್ಧಿಪಡೆದಿರುವ ಡೋಹೊಂಗ ಎಂಬ ಉರಾಂಗುಟಾನ್ ಮಂಗವನ್ನು ಒಮ್ಮೆ ಹೊರಗಡೆ ಅಡ್ಡಾಡಿಸಿಕೊಂಡು ಬರಲು ಒಯ್ದಿದ್ದಾಗ ಅದರ ಪಂಜರದಲ್ಲಿ ಒಂದು ಯಾರ್ಡು ಉದ್ದದ ಕೊಳವೆಯೊಂದನ್ನು ಇಡಲಾಯಿತು. ಅದರಲ್ಲಿ ಒಂದು ಬಾಳೆಹಣ್ಣನ್ನು ತುರುಕಲಾಗಿತ್ತು. ಡೋಹೊಂಗ ತಿರುಗಿ ಬಂದೊಡನೆಯೆ ಅದಕ್ಕೆ ಬಾಳೆಹಣ್ಣಿನ ವಾಸನೆ ಹತ್ತಿತು. ಬಹು ಬೇಗ ಅದು ಕೊಳವೆಯಲ್ಲಿದೆ ಎಂಬುದನ್ನು ಕಂಡು ಹಿಡಿಯಿತು. ಕೆಲ ನಿಮಿಷ ಆ ಕೊಳವೆಯನ್ನೆತ್ತಿ ಅತ್ತಿತ್ತ ತಿರುಗಿಸಿ ನೋಡಿತು. ಅದರ ಬೆರಳುಗಳಿಗೆ ಬಾಳೆಹಣ್ಣು ಸಿಗಲಿಲ್ಲ. ಆಗ ಅದು ಕೊಳವೆಯನ್ನು ಕೆಳಗಿಟ್ಟು ಪಂಜರದಲ್ಲಿ ಏನನ್ನೋ ಹುಡುಕತೊಡಗಿತು. ಹುಲ್ಲಿನ ಚಿಕ್ಕ ರಾಶಿಯಲ್ಲಿ ಅಡಗಿಸಿಟ್ಟಿದ್ದ ಕೊಕ್ಕೆಯಿದ್ದ ಒಂದು ಕೋಲನ್ನೆತ್ತಿಕೊಂಡು ಅದನ್ನು ಕೊಳವೆಯಲ್ಲಿ ಹಾಕಿ ಬಾಳೆಹಣ್ಣನ್ನು ಹೊರಗೆಳೆಯಿತು. ಮೊದಲನೆ ಸಲ ಬಾಳೆಹಣ್ಣನ್ನು ದೊರಕಿಸಲು ಅದಕ್ಕೆ ೨೦ ಮಿನಿಟು ಹಿಡಿಯಿತು. ಮುಂದೆ ಅರ್ಧ ಮಿನಿಟಿನಲ್ಲಿ ಬಾಳೆಹಣ್ಣನ್ನು ದೊರಕಿಸುವಷ್ಟು ಪ್ರಾವೀಣ್ಯವನ್ನು ಅದು ಪಡೆಯಿತು. ಮುಂದೆ ಹೀಗೆ ಕೊಕ್ಕೆಯಿಂದ ಎಳೆಯುವದಕ್ಕಿಂತಲೂ ಕೋಲಿನಿಂದ ದೂಡುವದರಿಂದ ಬಾಳೆಹಣ್ಣು ಬೇಗ ಹೊರಗೆ ಬರುತ್ತದೆಂದು ಅದಕ್ಕೆ ತಿಳಿದುಬರಲು

ಟೈನ್ಸ್ " ಆಧಾರದಿಂದ

ಅದು ಹಾಗೆಯೆ ಮಾಡತೊಡಗಿತು.

"ಬುದ್ಧಿ ಮತ್ತು ವಿಚಾರಶಕ್ತಿಯ ಮಾತು ಬಂದರೆ ಚಿಂಪಾಂಝಿಗೆ ಮೊದಲನೆಯ ಸ್ಥಾನವನ್ನು ನಾನು ಕೊಡುತ್ತೇನೆ. ಅದರ ಬೆನ್ನ ಹಿಂದೆಯೆ ಉರಾಂಗುಟಾನದ ಸ್ಥಾನ. ಗೋರಿಲ್ಲಾದ ವಿಷಯ ಹೆಚ್ಚಾಗಿ ತಿಳಿದರೆ ಅದಕ್ಕೆ ನಾವು ಮೂರನೆಯ ನಂಬರ ಕೊಡಬಹುದು. ಆದರೆ ಗೋರಿಲ್ಲಾ ಸುಲಭದಲ್ಲಿ ಪಳಗುವದಿಲ್ಲ. ಅದನ್ನು ಪಳಗಿಸುವ ಪ್ರಯತ್ನಗಳು ಯಶಸ್ವಿಯಾಗಿಲ್ಲ.

"ಆನೆ ಪ್ರಾಣಿಜಗತ್ತಿನ ತತ್ತ್ವಜ್ಞಾನಿ. ಅದರಷ್ಟು ಬಲಶಾಲಿಯಾದ ಅಥವಾ ಹಿಡಿಯಲು ಕಠಿಣವಾದ ಪ್ರಾಣಿ ಇನ್ನೊಂದಿಲ್ಲ. ಹಾಗಿದ್ದರೂ ಮನುಷ್ಯನ ಸಾಮರ್ಥ್ಯವನ್ನೂ ಶ್ರೇಷ್ಠತೆಯನ್ನೂ ಅದರಷ್ಟು ಶೀಘ್ರದಲ್ಲಿ ಗುರುತಿಸುವ ಅಥವಾ ದಾಸ್ಯವನ್ನೊಪ್ಪಿಕೊಂಡು ಅದಕ್ಕೆ ಹೊಂದಿಕೊಳ್ಳುವದೇ ಮೇಲು ಎಂಬುದನ್ನು ಮನಗಾಣಿಸಿಕೊಳ್ಳುವ ಪ್ರಾಣಿ ಇನ್ನೊಂದಿಲ್ಲವೆನ್ನಬಹುದು. ನಾಯಿ, ಕುದುರೆ, ಸಿಂಹ ಮತ್ತು ಹುಲಿಗಳಲ್ಲಿ ಎಲ್ಲಿಯೊ ಒಂದನ್ನು ಬಹು ಚೆನ್ನಾಗಿ ತರಬೇತು ಮಾಡಬಹುದು. ಅದು ಕೂಡ ಸಣ್ಣದಿರುವಾಗ ಮಾತ್ರ ಸಾಧ್ಯ. ಆದರೆ ಆನೆ ಮಾತ್ರ ಯಾವಾಗಲೂ ಕಲಿಯುವ ಪ್ರಾಣಿಯಾಗಿದೆ. ಕಲಿಯುವ ಸಮಯ ಮೀರಿತು ಎನ್ನುವ ಹಾಗಿಲ್ಲ," ಎಂದು ಡಾ. ಬ್ಲೇರರು ತಮ್ಮ ಅನುಭವವನ್ನು ವಿವರಿಸುತ್ತ ಹೇಳುತ್ತಾರೆ.

ಮೃಗಾಲಯದಲ್ಲಿ ರಾತ್ರಿ ಚಳಿಯಿರುವಾಗ ತಮ್ಮ ದೊಡ್ಡಿಗೆ ಹೋದೊಡನೆ ಕಾವಲುಗಾರನ ಹಾದಿ ಕಾಯದೆ ತಾವೇ ಬಾಗಿಲನ್ನು ಹಾಕಿಕೊಳ್ಳುವ ಆನೆಗಳಿವೆ. ಬೇಸಿಗೆಯಲ್ಲಿ ಬಾಗಿಲನ್ನು ತೆರೆದಿಟ್ಟಿರುತ್ತವೆ. ನ್ಯೂಯಾರ್ಕ ;ಮೃಗಾಲಯದಲ್ಲಿ ಒಂದು ಹಿಂದೀ ಆನೆ ಆದಿತ್ಯವಾರ ಪ್ರೇಕ್ಷಕರು ಕೊಟ್ಟ ತಿನಿಸನ್ನು ಹಾಗೆಯೆ ಕಾದಿಟ್ಟು ಸೋಮವಾರ ತಿನ್ನುತ್ತದೆ. ಆದಿತ್ಯವಾರ ಪ್ರೇಕ್ಷಕರ ಸಂಖ್ಯೆ ಹೆಚ್ಚಿಗಿದ್ದು ಸೋಮವಾರ ಕಡಿಮೆಯಿರುತ್ತದೆ ಎಂಬುದನ್ನು ಕಂಡುಕೊಂಡ ಈ ಆನೆ ದೂರದರ್ಶಿಯಾಗಿದೆ.

ಖಾರ್ಟಂ ಎಂಬ ಇನ್ನೊಂದು ಆನೆ ತರುಣ ವಯಸ್ಸಿನಲ್ಲಿ ಬೇಲಿಗಳನ್ನು ತುಳಿದು ಹಾಕುವದರಲ್ಲಿ ಮತ್ತು ಕಣ್ಣಿಗೆ ಬಿದ್ದವುಗಳನ್ನು ಮೆಟ್ಟಿ ನಾಶ ಮಾಡುವದರಲ್ಲಿ ಆನಂದ ಪಡೆಯುತ್ತಿತ್ತು. ಆದರೂ ಎರಡು ಸಲ ಅದು ರಾಬಿನ್ ಹಕ್ಕಿಯ ಜೋಡಿಯೊಂದಕ್ಕೆ ಅವುಗಳ ಗೂಡನ್ನು ತನ್ನ ಮುಂದಿದ್ದ ಬೇಲಿಯ ಮೇಲೆ ಕಟ್ಟಲು ಅವಕಾಶವಿತ್ತಿತ್ತು. ಮರಿಗಳಿಗೆ ಅಪಾಯವಾಗದಂತೆ ಕಾವಲು ನಿಲ್ಲುತ್ತಿತ್ತು. ಬೇಸಿಗೆಯಲ್ಲಿ ಗೂಡಿಗೆ ತುಸು ದೂರ ನಿಂತು ತನ್ನ ಸೊಂಡಿಲಿನಿಂದ ಮೃದುವಾಗಿ ಗಾಳಿಯನ್ನು ಊದುತ್ತಿತ್ತು. ಈ ಕೃತಿಯ ಹಿಂದೆ ಏನೋ ಒಂದು ವಿಚಾರಧಾರೆ ಇರಲೇಬೇಕಲ್ಲವೆ?

ಆನೆಗೆ ಮರೆವು ಎಂಬುದಿಲ್ಲ ಎಂಬ ಮಾತು ಮೃಗಾಲಯದಲ್ಲಿ ಪುನಃ ಪುನಃ ಸಿದ್ಧವಾಗಿದೆ. ಮೃಗಾಲಯಕ್ಕೆ ಬರುತ್ತಿದ್ದ ಒಬ್ಬ ಹುಡುಗನನ್ನು ಕಂಡು ಅದೇಕೋ ಒಂದು ಆನೆಗೆ ಸಹಿಸುತ್ತಿರಲಿಲ್ಲ; ಅವನು ಬಂದಾಗಲೆಲ್ಲ ಅವನನ್ನು ಘಾತಿಸಲು ಅದು ಪ್ರಯತ್ನಿಸುತ್ತಿತ್ತು. ಮೃಗಾಲಯದ ಕೆಲಸ ಬಿಟ್ಟು ಹೋದಬಳಿಕ ಆ ಹುಡುಗ ಮೂರು ವರ್ಷಗಳ ನಂತರ ಮತ್ತೊಮ್ಮೆ ಸಹಜವಾಗಿ ಅಲ್ಲಿಗೆ ಬಂದಾಗ ಈ ಆನೆ ತನ್ನ ಸೊಂಡಿಲನ್ನೆತ್ತಿ ಅವನನ್ನು ಹೊಡೆಯಲು ಪ್ರಯತ್ನಿಸಿತು. ಆ ಹುಡುಗನನ್ನೂ ಅವನ ಮೇಲಿರುವ ತನ್ನ ಅಸಹನೆಯನ್ನೂ ಆನೆ ಮರೆತಿರಲಿಲ್ಲ.

ಪ್ರಾಣಿಯ ಬುದ್ಧಿಶಕ್ತಿಯನ್ನು ಅಳೆಯುವ ಒಂದು ವಿಧಾನವಿದೆ. ನಡುವೆ ಇರುವ ತಿನಿಸಿನ ಪೆಟ್ಟಿಗೆಯೊಂದನ್ನು ಮುಟ್ಟಲು ಅನೇಕ ಸುತ್ತು ತಿರುಗಿ ಮುಟ್ಟುವಂತೆ ಹಾದಿ ಮಾಡಿರುತ್ತಾರೆ. ಚಕ್ರವ್ಯೂಹದ ಮಾದರಿಯಲ್ಲಿ ಇದಿರುತ್ತದೆ. ಎಷ್ಟು ಬೇಗ ಪ್ರಾಣಿ ತಪ್ಪು ಹಾದಿ ಹಿಡಿಯದೆ ತಿನಿಸನ್ನು ಮುಟ್ಟುತ್ತದೆ ಎಂಬುದೇ ಪರೀಕ್ಷೆಯ ಅಳತೆಗೋಲಾಗಿದೆ. ಬಸವನ ಹುಳ, ಇರುವೆ, ಆಮೆ ಮೊದಲಾದವುಗಳಿಗೂ ನೆನಪಿನ ಶಕ್ತಿ ಇದ್ದು ಅವು ಕೂಡ ಕಲಿಯಬಲ್ಲವು ಎಂಬುದು

ಈ ಪರೀಕ್ಷೆಯಿಂದ ಸ್ಪಷ್ಟವಾಗಿ ಕಂಡುಬಂದಿದೆ.

ಕುದುರೆಗಿಂತಲೂ ಹೆಚ್ಚು, ಆದರೆ ನಾಯಿಗಿಂತ ತುಸು ಕಡಿಮೆ ಬುದ್ಧಿಶಾಲಿಯಾದ ಪ್ರಾಣಿ ಬೀವರ್ ಎಂದು ಡಾ. ಬ್ಲೇರರೆನ್ನುತ್ತಾರೆ. ಬೀವರ್ ಬಹು ಸಂಕೋಚದ ಪ್ರಾಣಿಯಾಗಿರುವದರಿಂದ ಮೇಲೆ ಹೇಳಿದ ಪರೀಕ್ಷೆಗೆ ಅದನ್ನು ಗುರಿಪಡಿಸಲು ಸಾಧ್ಯವಾಗಿಲ್ಲ.

ಎರಡು ಬೀವರಗಳು ನ್ಯೂಯಾರ್ಕ ಮೃಗಾಲಯದಿಂದ ತಪ್ಪಿಸಿಕೊಂಡಾಗ ಅವು ತಮ್ಮ ಹೊಂಡದ ಅಡಿಯಲ್ಲಿ ಸುರಂಗ ಮಾರ್ಗ ತೋಡಿದ್ದುದು ಕಂಡುಬಂತು. ಅವನ್ನು ಪುನಃ ಹಿಡಿದು ತಂದು ಹೊಂಡದಲ್ಲಿ ಬಿಟ್ಟು ಸುರಂಗಮಾರ್ಗವನ್ನು ಕಲ್ಲಿನಿಂದ ಮುಚ್ಚಿ ಭದ್ರಪಡಿಸಲಾಯಿತು. ಎರಡು ದಿನಗಳನಂತರ ಹೊಂಡದ ಸುತ್ತಿರುವ ಬೇಲಿಯ ಸಮೀಪದಲ್ಲಿ ಈ ಪ್ರಾಣಿಗಳು ಅರಲು ಮತ್ತು ಕಟ್ಟಿಗೆಯ ೫॥ ಅಡಿ ಎತ್ತರದ ಕಟ್ಟೆ ಕಟ್ಟಿದ್ದವು. ಸುರಂಗ ತೋಡುವದಾಗದಿದ್ದರೆ ಬೇಲಿಯನ್ನು ಹತ್ತಿ ದಾಟಿ ಹೋಗುವ ವಿಚಾರವನ್ನು ಮಾಡಿದ್ದವು ಅವು. ಕಾವಲುಗಾರರು ಈ ಕಟ್ಟೆಯನ್ನು ಕಿತ್ತುಹಾಕಿದರು.

ಮುಂದೆ ಈ ಚತುರ ಪ್ರಾಣಿಗಳು ಓಡಿ ಹೋಗುವ ಪ್ರಯತ್ನ ಮಾಡಲಿಲ್ಲ. ಆನೆಗಳಂತೆ ಬೀವರಗಳೂ ಮನುಷ್ಯನ ಶ್ರೇಷ್ಠತೆಯನ್ನು ಅರಿತುಕೊಳ್ಳುವಷ್ಟು ಚತುರವಾಗಿವೆ.

ನೀರುಸಿಂಹಗಳಿಗೂ ನೆನಪಿನ ಶಕ್ತಿ ಚನ್ನಾಗಿದ್ದು ಅವು ಬಹುಬೇಗ ಕಲಿಯುತ್ತವೆ. ಅವುಗಳ ಸಾಧು ಸ್ವಭಾವ, ಕಲಿಯುವ ಆತುರ, ನಕಲು ಮಾಡುವ ಶಕ್ತಿ ಇವುಗಳಿಂದ ಅವು ಕರಡಿಗಿಂತ ಮೇಲಿನ ಸ್ಥಾನ ಪಡೆಯುತ್ತವೆ. ಕರಡಿಗಳಿಗೆ ಪ್ರೇಕ್ಷಕರ ಶಾಭಾಸಗಿರಿಯ ಮೇಲೆ ಕಟಾಕ್ಷ ಬಹಳ. ಪ್ರೇಕ್ಷಕರು ಭಲೆ ಎಂದು ಚಪ್ಪಾಳೆ ತಟ್ಟುತ್ತಾರೆಂದರೆ ಸಾಕು, ಕರಡಿ ಇಲ್ಲದ ಚೇಷ್ಟೆಗಳನ್ನು ಮಾಡುತ್ತದೆ. ಆದರೆ ನೀರು-ಸಿಂಹ ಮಾತ್ರ ತಾನು ಮಾಡಿದ್ದಕ್ಕೆ ಪ್ರತಿಯಾಗಿ ಮೀನವನ್ನೊ ಇನ್ನಾವದಾದರೂ ತಿನಿಸನ್ನೊ ಅಪೇಕ್ಷಿಸುತ್ತದೆ !

ಇವಾನ ಎಂಬ ಕರಡಿ ಬಹು ಕುಚೋದ್ಯ ಪ್ರಾಣಿಯಾಗಿತ್ತು. ಮೃಗಾಲಯದಲ್ಲಿ "ಕರಡಿಗಳಿಗೆ ತಿನಸು ಕೊಡಬೇಡಿರಿ. ಕೊಟ್ಟರೆ ಹತ್ತು ಡಾಲರ ದಂಡ ಹಾಕಲಾಗುವದು,'' ಎಂದು ಬರೆದ ಹಲಗೆಯೊಂದನ್ನು ತೂಗಹಾಕಿತ್ತು. ಇವಾನ ಈ ಹಲಗೆಯ ಬುಡದಲ್ಲೆ ನಿಂತು ಬಂದವರನ್ನು ತಿನಸಿಗಾಗಿ ಯಾಚಿಸುತ್ತಿತ್ತು. ಅದಕ್ಕೆ ಅದು ಸಿಗುತ್ತಲೂ ಇತ್ತು.

''ಸ್ನೇಹಭಾವವು ಬುದ್ಧಿಶಕ್ತಿ ಎಂದು ನಾವು ತಪ್ಪು ಗ್ರಹಿಕೆಗೊಳಗಾಗಬಹುದು. ನಿಮ್ಮ ಮನೆಯ ಬೆಕ್ಕನ್ನು ನೋಡಿರಿ. ಅದು ಚತುರ ಪ್ರಾಣಿ. ನಿಮ್ಮಲ್ಲಿ ಸ್ನೇಹವನ್ನು ಪ್ರದರ್ಶಿಸುತ್ತದೆ. ಆದರೆ ಅದು ಯಾವಾಗಲೂ ತನ್ನ ಒಡೆಯ ತಾನೇ ಎಂಬಂತೆ ವರ್ತಿಸಿ ತನಗಿಷ್ಟವಾದ ಜೀವನವನ್ನೆ ನಡೆಸುತ್ತದೆ," ಎಂದು ಡಾ. ಬ್ಲೇರರು ಹೇಳುತ್ತಾರೆ.



## ಕಲ್ಪನೆ—ಸಂಘಟನೆ

**ಯಾವುದೇ ಕಲ್ಪನೆಗೆ ಸಂಘಟನೆಯ ರೂಪ ಕೊಡುವುದೆಂದರೆ ಅದನ್ನು ನಷ್ಟಗೊಳಿಸುವುದಾಗಿದೆ.**

**ಸಂಘಟನೆಯ ಹಿಡಿತದಿಂದ ಮುಕ್ತವಾಗಿದ್ದರೇನೇ ಯಾವುದೇ ಕಲ್ಪನೆಯ, ವಿಚಾರದ ವಿಕಾಸವು ಸಾಧ್ಯವಾಗುವುದು.**

**—ರಾಜಾಜಿ**

ಬೆಳೆಯುತ್ತಿರುವ ಕ್ಯಾನ್ಸರ ಪೀಡೆಯ ಬಗ್ಗೆ
ಮಹತ್ವದ ವಿವರಗಳು

# ಕ್ಯಾನ್ಸರ ಬಗ್ಗೆ ತಿಳಿಯಬಯಸುವಿರಾ?

ಡಾ. ಪಿ. ಎಸ್. ಹುಯಿಲಗೋಳ, ಎಂ. ಎಸ್.

ಭಾರತದಲ್ಲಿ ಪ್ರತಿವರ್ಷ ೨,೦೦,೦೦೦ ಜನರು ಕ್ಯಾನ್ಸರ ರೋಗಕ್ಕೆ ಬಲಿಯಾಗುತ್ತಾರೆ. ಇದು ಬಲ್ಲವರ ಅಂದಾಜು ಮಾತ್ರ. ಸರಿಯಾದ ಲೆಕ್ಕಕ್ಕೆ ಬೇಕಾದ ಅಂಕೆ-ಸಂಖ್ಯೆಗಳು ಸಿಗುವುದಿಲ್ಲ. ಯಾಕಂದರೆ ಭಾರತದಲ್ಲಿ ಇನ್ನೂ ಜನರಲ್ಲಿ ಕ್ಯಾನ್ಸರ ಬಗ್ಗೆ ತಿಳಿವಳಿಕೆಯಾಗಲಿ ಅದರ ಗಂಡಾಂತರದ ಕಲ್ಪನೆಯಾಗಲಿ ಉಂಟಾಗಿಲ್ಲ. ಕ್ಷಯ, ಮಲೇರಿಯ, ಕುಷ್ಠ ಮೊದಲಾದವುಗಳ ಹಾವಳಿಯ ನಡುವೆ ಕ್ಯಾನ್ಸರದ ಕಡೆ ಜನರ ಮತ್ತು ಸರಕಾರಗಳ ಲಕ್ಷ್ಯ ಸರಿಯಾಗಿ ಹರಿದಿಲ್ಲ.

ಆದರೆ ಮನುಷ್ಯಪ್ರಾಣಿಯನ್ನು ಅಸದಳವಾದ ನೋವಿಗೆ ಗುರಿಮಾಡುವ ಕ್ಯಾನ್ಸರ ಅಥವಾ ಅರ್ಬುದ ರೋಗವನ್ನು ಅಲಕ್ಷಿಸಿದರೆ ಅದು ದೊಡ್ಡ ದುರ್ದೈವವೇ ಸೈ. ಅದರಲ್ಲಿಯೂ ಸಕಾಲದಲ್ಲಿ ರೋಗವನ್ನು ಗುರುತಿಸಿ ಚಿಕಿತ್ಸೆ ಮಾಡಿದರೆ ಈ ಎರಡು ಲಕ್ಷದಲ್ಲಿ ಅರ್ಧದಷ್ಟು ಜನರನ್ನಾದರೂ ಉಳಿಸಬಹುದೆಂಬುದನ್ನು ಗಮನಿಸಿದರೆ ಈ ಅನವಶ್ಯಕ ಪ್ರಾಣಹಾನಿ ಮತ್ತು ಯಾತನೆಗಾಗಿ ಮತ್ತಷ್ಟು ಕನಿಕರಪಡಬೇಕಾಗುತ್ತದೆ.

ಇಂದು ಇಡೀ ಜಗತ್ತು ಕ್ಯಾನ್ಸರ ವಿಷಯದಲ್ಲಿ ಎಚ್ಚತ್ತಿದೆ. ಅಮೇರಿಕವು ಜನರ ಸ್ವಯಂಪ್ರೇರಿತ ವರ್ಗಣಿಗಳಿಂದ ವರ್ಷಕ್ಕೆ ೬ ಕೋಟಿ ರೂಪಾಯಿ ವೆಚ್ಚಮಾಡಿ ಕ್ಯಾನ್ಸರದ ವಿಷಯದಲ್ಲಿ ವೈಜ್ಞಾನಿಕ ಸಂಶೋಧನೆಗಳನ್ನು ನಡೆಸಿದೆ. ಸ್ವೀಡನ್ನಿನಲ್ಲಿ ಜನಸಂಖ್ಯೆಗೆ ತಲಾ ಒಂದು ರೂಪಾಯಿಯಂತೆ ವೆಚ್ಚ ಮಾಡಲಾಗುತ್ತಿದೆ. ಬ್ರಿಟನಿನಲ್ಲಿಯೂ ಅಪಾರ ಹಣವನ್ನು ವಿನಿಯೋಗಿಸುತ್ತಿದ್ದಾರೆ.

ಕ್ಯಾನ್ಸರ ವಿಷಯಕ್ಕೆ ಇಷ್ಟು ಲಕ್ಷ್ಯ ಹೊರಳಲು ಕಾರಣವಿದೆ. ಔಷಧವಿಜ್ಞಾನದ ಬೆಳವಣಿಗೆಯಿಂದ ಜನರು ಸಾಮಾನ್ಯ ರೋಗಗಳಿಗೆ ಬಲಿಬೀಳುವುದು ಕಡಿಮೆಯಾದಂತೆ, ಕ್ಯಾನ್ಸರ, ಹೃದಯರೋಗಗಳು ಮತ್ತು ವೃದ್ಧಾಪ್ಯ ಇವುಗಳೇ ಮೃತ್ಯುವಿನ ಮುಖ್ಯ ದಲಾಲಿಗಳಾಗುತ್ತಿವೆ.

ಕ್ಯಾನ್ಸರ ಯಾವ ವಯಸ್ಸಿನವರಿಗೂ ಆಗಬಹುದು. ಆದರೂ ೪೦ನೇ ವಯಸ್ಸಿನ ನಂತರದ

---

ಡಾ. ಹುಯಿಲಗೋಳರು ಹುಬ್ಬಳ್ಳಿಯ ಪ್ರಮುಖ ಸರ್ಜನ್ನರಲ್ಲೊಬ್ಬರಾಗಿದ್ದಾರೆ.

ವರಲ್ಲಿ ಕಾಣಿಸಿಕೊಳ್ಳುವುದು ಹೆಚ್ಚು. ಆದ್ದರಿಂದ ಜನರ ಸರಾಸರಿ ಆಯುರ್ದಾಯ ಹೆಚ್ಚಾದಂತೆ ಕ್ಯಾನ್ಸರ ಪ್ರಕರಣಗಳ ಪ್ರಮಾಣವೂ ಹೆಚ್ಚಾಗುವುದು.

ಕ್ಯಾನ್ಸರ ಎಂದರೇನು? ಅದು ಆನುವಂಶಿಕ ರೋಗವೆ? ಭಾರತದಲ್ಲಿ ಎಂಥೆಂಥ ಪ್ರಕಾರದ ಕ್ಯಾನ್ಸರುಗಳಿವೆ? ಅವುಗಳ ವಿರುದ್ಧ ಏನೇನು ಕೆಲಸ ನಡೆದಿದೆ? ಇವು ಸಾಮಾನ್ಯ ಜನರಿಗೆ ಗೊತ್ತಿಲ್ಲ. ಅವುಗಳಲ್ಲಿ ಕೆಲವಕ್ಕೆ ಇಲ್ಲಿ ಸಾಧ್ಯವಿದ್ದಷ್ಟು ಸುಲಭ ಭಾಷೆಯಲ್ಲಿ ಉತ್ತರ ಕೊಡಲಾಗುವುದು.

**ಕ್ಯಾನ್ಸರ ಅಂದರೇನು?** ಕ್ಯಾನ್ಸರ ಅಥವಾ ಅರ್ಬುದ ಎಂಬ ಗಂಟು ಯಾವ ಕಾರಣದಿಂದ ಹುಟ್ಟುತ್ತದೆಂದು ಇದುವರೆಗೂ ಗೊತ್ತಾಗಿಲ್ಲ. ಆದರೆ ಅದು ನಮ್ಮ ಶರೀರದ ಮೂಲ ಘಟಕವಾದ ಸೂಕ್ಷ್ಮಕೋಶ (cell)ಗಳ **ಅವಾಸ್ತವ** ಬೆಳವಣಿಗೆಯಿಂದ ಪ್ರಕಟಕ್ಕೆ ಬರುತ್ತದೆ.

ನಮ್ಮ ದೇಹದಲ್ಲಿ ಕೋಟ್ಯಂತರ ಇಂಥ ಕೋಶಗಳು ತುಂಬಿದ್ದರೂ ಪ್ರತಿಯೊಂದು ಕೋಶವೂ ನಿರ್ದಿಷ್ಟ ನಿಯಮಗಳಿಗೊಳಪಟ್ಟು ಬೆಳೆಯುತ್ತದೆ. "ಅನ್ಯರ ಸ್ವಾತಂತ್ರ್ಯಕ್ಕೆ ಅಡ್ಡ ಬಾರದಂತೆ ನಮ್ಮ ಸ್ವಾತಂತ್ರ್ಯವನ್ನು ಅನುಭವಿಸಬೇಕು" ಎಂಬ ನಾಗರಿಕ ನಿಯಮದಂತೆ ನಮ್ಮ ದೇಹದ ಬೇರೆಬೇರೆ ಭಾಗಗಳ ಕೋಶಗಳ ಬೆಳವಣಿಗೆಯಾಗುತ್ತದೆ. ಅವುಗಳ ಬೆಳವಣಿಗೆ ತಕ್ಕ ಕಾಲದಲ್ಲಿ ನಿಲ್ಲುತ್ತದೆ. ಆದರೆ ಕ್ಯಾನ್ಸರ ಆದ ಕೋಶಗಳು ಈ ಸಜ್ಜನ [illegible] ತ್ತದೆ. ದುರ್ಜನನೊಬ್ಬನು ನಿರ್ಭೀತಿಯಿಂದ ಕಾಯಕ ನಡೆಸುತ್ತಿದ್ದಾಗ ಇಡೀ ಸಮಾಜವೇ ಸಂತ್ರಸ್ತವಾಗುವಂತೆ ಈ ಸೊಕ್ಕಿನ ಕೋಶದ ಅತಿಕ್ರಮಣದಿಂದ ದೇಹದ ಉಳಿದ ಭಾಗಗಳ ಕಾರ್ಯಕ್ಕೆ ಅಡಚಣಿಯಾಗುತ್ತದೆ. ಅದರ ಸಿಕ್ಕಾಬಟ್ಟೆ ಬೆಳವಣಿಗೆಯು ರೋಗಿಗೆ ಕೊನೆಗೆ ಅಸಹನೀಯ ನೋವನ್ನುಂಟುಮಾಡಿ ಸಾಯುವವರೆಗೂ ಅದನ್ನು ಅವನು ಅನುಭವಿಸುತ್ತಲೇ ಹೋಗಬೇಕಾಗುವುದು.

**ಕ್ಯಾನ್ಸರ ಆನುವಂಶಿಕ ರೋಗವೆ?** ಕ್ಯಾನ್ಸರ ಎಂಬುದು ವಂಶಪಾರಂಪರ್ಯವಾಗಿ ಬರುವ ರೋಗವೇ ಎಂಬುದಕ್ಕೆ ಬಹುತರವಾಗಿ ಅಲ್ಲ ಎಂಬ ಉತ್ತರವೇ ಬರುತ್ತಿದೆ. ಅಂದರೆ ಕ್ಯಾನ್ಸರಗ್ರಸ್ತ ತಂದೆ ತಾಯಿಗಳ ಮಕ್ಕಳಿಗೆ ಕ್ಯಾನ್ಸರ ಆಗಲೇಬೇಕೆಂದಿಲ್ಲ. ಆದರೆ ಕ್ಯಾನ್ಸರಿಗೆ ಕಾರಣವಾಗುವ ಬಾಹ್ಯ ಪ್ರಭಾವಗಳು ಇದ್ದಲ್ಲಿ ಕ್ಯಾನ್ಸರಯುಕ್ತ ತಂದೆತಾಯಿಗಳ ಮಕ್ಕಳಿಗೆ ಕ್ಯಾನ್ಸರ ಆಗುವ ಸಂಭವ ಹೆಚ್ಚಾಗುತ್ತದೆ; ಕ್ಯಾನ್ಸರರಹಿತ ತಂದೆತಾಯಿಗಳ ಮಕ್ಕಳಿಗೆ ಅಷ್ಟು ಸುಲಭವಾಗಿ ಕ್ಯಾನ್ಸರ ಆಗುವುದಿಲ್ಲ ಎಂದೂ ಸಂಶೋಧನೆಗಳಲ್ಲಿ ಕಂಡುಬಂದಿದೆ.

ಪೂರ್ವಜರು ಕ್ಯಾನ್ಸರಕ್ಕೆ ಗುರಿಯಾದವರಿದ್ದರೆ ವಂಶಜರೂ ಆ ರೋಗಕ್ಕೆ ಹೆಚ್ಚು ಸುಲಭವಾಗಿ ಗುರಿಯಾಗಬಹುದೆಂಬುದು ಹಲ ಪ್ರಯೋಗಗಳಿಂದ ಸಿದ್ಧವಾಗಿದೆ. ಉದಾಹರಣೆಗೆ ಇಲಿಗಳಲ್ಲಿ ಕ್ಯಾನ್ಸರ ಉಂಟುಮಾಡಿ ಅವುಗಳಿಗೆ ಸಂತಾನೋತ್ಪಾದನೆ ಮಾಡಲು ಅವಕಾಶಕೊಟ್ಟಾಗ ಮರಿ ಇಲಿಗಳಿಗೆ ಹೆಚ್ಚು ಪ್ರಮಾ[illegible] ಪ್ರಯೋಗ [illegible]

೧೯೩೧ ರಲ್ಲಿ ವಾಲರ ಎಂಬವರು ೬,೦೦೦ ಕಾನ್ಸರ ರೋಗಿಗಳ ಪೂರ್ವಜರ ಚರಿತ್ರೆಯನ್ನು ಪರಿಶೀಲಿಸಿದರು; ೧೯೩೫ ರಲ್ಲಿ ವಾರ್ಸಿಂಕ ಎಂಬವರು ೨,೪೭೨ ಪ್ರಕರಣಗಳನ್ನು ಶೋಧಿಸಿದರು. ಎರಡೂ ಸಂದರ್ಭಗಳಲ್ಲಿ ವಂಶಚರಿತ್ರೆಯು ಕ್ಯಾನ್ಸರ ರೋಗದಲ್ಲಿ ಮಹತ್ವದ ಪಾತ್ರ ವಹಿಸುತ್ತದೆಂದು ನಿಸ್ಸಂದಿಗ್ಧವಾಗಿ ವ್ಯಕ್ತವಾಯಿತು.

**ಕ್ಯಾನ್ಸರ ಸಾಂಕ್ರಾಮಿಕ ರೋಗವೆ?** ಅಲ್ಲ. ಅದರ ನಿಶ್ಚಿತವಾದ ಕಾರಣ ತಿಳಿಯದಿದ್ದರೂ ಮನುಷ್ಯರಿಗೆ ಬರುವ ಕ್ಯಾನ್ಸರು ಯಾವುದೇ ಜಂತುವಿನಿಂದ ಹುಟ್ಟುವದಿಲ್ಲೆಂಬುದು ಖಂಡಿತ ಗೊತ್ತಾಗಿದೆ. ಆದ್ದರಿಂದ ಅದು ಸಾಂಕ್ರಾಮಿಕ ವಾಗಲಾರದು.

**ಕ್ಯಾನ್ಸರ ಗುಣವಾಗಲಾರದ ರೋಗವೆ?** ಅಲ್ಲ. ಪ್ರಾರಂಭದಲ್ಲೇ ಅದನ್ನು ಗುರುತಿಸಿದರೆ ಯಾವ ಜಾತಿಯ ಕ್ಯಾನ್ಸರವನ್ನೂ ಗುಣಪಡಿಸ ಬಹುದು. ಇದಕ್ಕೆ ಬಹುಶಃ ರಕ್ತದ ಕ್ಯಾನ್ಸರ (ಲುಕೇಮಿಯಾ) ಒಂದೇ ಅಪವಾದವಾಗಿದೆ. ಆದರೆ ಜನರು ಹೆಚ್ಚಾಗಿ ರೋಗ ಉಲ್ಬಣಕ್ಕೆ ಬಂದ ಹೊರತು ಅದನ್ನು ಡಾಕ್ಟರರ ಕಡೆಗೆ ಒಯ್ಯುವದಿಲ್ಲ. ಆಮೇಲೆ ಎಲ್ಲ ಪ್ರಯತ್ನಗಳು ನಿರರ್ಥಕವಾಗುತ್ತವೆ.

ಅಲ್ಲದೆ ಇನ್ನೊಂದು ತೊಡಕೆಂದರೆ ಡಾಕ್ಟರರಿಗೆ ಕೂಡ ಕ್ಯಾನ್ಸರ ಕೋಶವನ್ನು ತೀರ ಪ್ರಾರಂಭದಲ್ಲಿ ಗೊತ್ತುಹಚ್ಚುವುದು ಕಠಿನ ಕಾರ್ಯ ವಾಗಿರುವುದು.

**ಕ್ಯಾನ್ಸರದಲ್ಲಿ ಏನೇನು ಪ್ರಭೇದಗಳಿವೆ?** ದೇಹದ ಯಾವ ಭಾಗವೂ ಕ್ಯಾನ್ಸರಕ್ಕೆ ನಿಲುಕ ಲಾರದೆನ್ನುವಂತಿಲ್ಲ. ಕೆಲವು ಸಾಮಾನ್ಯ ಕ್ಯಾನ್ಸರ ಪ್ರಕಾರಗಳನ್ನು ಇಲ್ಲಿ ಕೊಡಬಹುದು:

ಶ್ವಾಸಾಂಗಗಳ ಕ್ಯಾನ್ಸರ— ಮೂಗು (ಒಳಗೆ ಮತ್ತು ಹೊರಗೆ), ಕಪೋಲದ ಎಲುಬಿನ ಪೊಳ್ಳು, ಗಂಟಲಿನ ಒಳಭಾಗ, ಧ್ವನಿತಂತು (larynx) ಪುಪ್ಪುಸ, ಇವುಗಳಲ್ಲದೆ ತುಟಿ, ಬಾಯಿ, ಕಪೋಲದ ಒಳಭಾಗಗಳೂ ಕ್ಯಾನ್ಸರ ಪೀಡಿತವಾಗ ಬಹುದು.

ಜಠರದ ಕ್ಯಾನ್ಸರ—ಅನ್ನಕೋಶ, ಕರಳು, ಯಕೃತ್ತು ಮೊದಲಾದ ಭಾಗಗಳಲ್ಲಿ ಕಾಣಿಸಿಕೊಳ್ಳುವುದು.

ಮೊಲೆಗಳ ಕ್ಯಾನ್ಸರ, ಗರ್ಭಕೋಶದ ಕ್ಯಾನ್ಸರ ಮತ್ತು ಜನನೇಂದ್ರಿಯಗಳ ಕ್ಯಾನ್ಸರ.

ಚರ್ಮದ ಕ್ಯಾನ್ಸರ.

ರಕ್ತದ ಕ್ಯಾನ್ಸರ.

**ಕ್ಯಾನ್ಸರದಲ್ಲಿ ಯಾವ ಪ್ರಕಾರದ್ದು ಹೆಚ್ಚು ಜನರನ್ನು ಪೀಡಿಸುತ್ತದೆ?** ಅಮೇರಿಕದಲ್ಲಿ ಗಂಡಸರಿಗೆ ಪುಪ್ಪುಸದ ಕ್ಯಾನ್ಸರ ಹಾಗು ಜಠರದ ಕ್ಯಾನ್ಸರ ಮತ್ತು ಹೆಂಗಸರಿಗೆ ಮೊಲೆಯ ಕ್ಯಾನ್ಸರ ಹಾಗು ಗರ್ಭಕೋಶದ ಕ್ಯಾನ್ಸರ ಪೀಡೆ ಹೆಚ್ಚಾಗಿರುವುದೆಂದು ಡಾ. ಕೈಸರರು ಹೇಳುತ್ತಾರೆ.

ಇಂಗ್ಲಂಡ್ ಮೊದಲಾದ ಮುಂದುವರಿದ ದೇಶಗಳಿಗೂ ಇದು ಅನ್ವಯಿಸುವಂತೆ ತೋರುತ್ತದೆ.

ಆದರೆ ಭಾರತದಲ್ಲಿ ಬಾಯಿ ಮತ್ತು ಅದರ ಸುತ್ತಮುತ್ತಲ ಭಾಗಗಳಲ್ಲಿನ ಕ್ಯಾನ್ಸರು ಎಲ್ಲಕ್ಕೂ ಹೆಚ್ಚು ಜನರನ್ನು ಪೀಡಿಸುತ್ತದೆಯೆಂದು ಮುಂಬಯಿಯ ಟಾಟಾ ಸ್ಮಾರಕ ಕ್ಯಾನ್ಸರ ಆಸ್ಪತ್ರೆಗೆ ಬಂದ ರೋಗಿಗಳ ಸಂಖ್ಯೆಯ ವಿಶ್ಲೇಷಣದಿಂದ ತಿಳಿದುಬಂದಿದೆ. ಕ್ಯಾನ್ಸರ ಸಂಶೋಧನ ಕೇಂದ್ರದ ಮೇಲ್ವಿಚಾರಕರಾದ ಡಾ. ವಿ. ಆರ್. ಖಾನೋಳಕರರು ಟಾಟಾ ಆಸ್ಪತ್ರೆಗೆ ಬರುವ ರೋಗಿಗಳಲ್ಲಿ ಸುಮಾರು ಅರ್ಧದಷ್ಟು ಜನರಿಗೆ ಬಾಯಿ ಮತ್ತು ಸುತ್ತಲಿನ ಕಾನ್ಸರ ಇದೆಯೆಂದು ಬಹಿರಂಗಪಡಿಸಿದ್ದಾರೆ.

ವಿರಳವಾದರೂ ಭಾರತಕ್ಕೇ ವಿಶಿಷ್ಟವಾದ ಕ್ಯಾನ್ಸರ ಪ್ರಕಾರಗಳೆಂದರೆ "ದೋತರ ಕ್ಯಾನ್ಸರ" ಮತ್ತು "ಕಾಂಗಡಿ ಕ್ಯಾನ್ಸರ." ದೋತರ ಕ್ಯಾನ್ಸರ ಎಂದರೆ ಭಾರತೀಯರು ಬಟ್ಟೆಯುಡುವ ವಿಶಿಷ್ಟ ಪದ್ಧತಿಯಿಂದ ಉಂಟಾಗುವ ಕ್ಯಾನ್ಸರ. ದೋತರ ಅಥವಾ ಸೀರೆ ಉಡುವುದರಿಂದ ಟೊಂಕದಸುತ್ತ ಬೀಳುವ ಧಾರೆಯ ಮೇಲೂ ಉಡಿದಾರ ಹಾಕಿಕೊಳ್ಳುವ ಸ್ಥಳದ ಮೇಲೂ ಕುಂಡೆ ಮತ್ತು ಗುದಭಾಗ

ದಲ್ಲಿಯೂ ಈ ಕಾನ್ಸರ ಆಗುತ್ತದೆ. ವಸ್ತ್ರದ ನಿರಂತರ ಘರ್ಷಣೆ ಬೀಳುವ ಪ್ರದೇಶದಲ್ಲಿ ಇದು ಉತ್ಪತ್ತಿ ಹೊಂದುತ್ತದೆ.

ಕಾಂಗಡಿ ಕ್ಯಾನ್ಸರು ಹೆಚ್ಚಾಗಿ ಕಾಶ್ಮೀರದಲ್ಲಿ ಪ್ರಚುರವಾಗಿದೆ. ಚಳಿ ನೀಗಿಸಲು ಅಲ್ಲಿಯ ಜನರು ಗಡಿಗೆಯಲ್ಲಿ ಕೆಂಡಹಾಕಿ ಅದನ್ನು ಬುಟ್ಟಿಯಲ್ಲಿಟ್ಟು ಕೊರಳಿಗೆ ತೂಗ ಹಾಕಿ ಒಯ್ಯುತ್ತಿರುತ್ತಾರೆ. ಅದರಿಂದ ಈ ಕ್ಯಾನ್ಸರ ಉತ್ಪತ್ತಿಯಾಗುವಂತೆ ಕಾಣುತ್ತದೆ.

**ಸಿಗರೇಟನಿಂದ ಕ್ಯಾನ್ಸರ ಆಗುವುದು ನಿಜವೇ?** ಮಿತಿಮೀರಿ (ದಿನಕ್ಕೊಂದು ಪ್ಯಾಕಿಗಿಂತ ಹೆಚ್ಚು) ಸಿಗರೇಟು ಸೇದುವವರಿಗೆ ಗಂಟಲು ಮತ್ತು ಪುಪ್ಪುಸದ ಕ್ಯಾನ್ಸರ ಆಗುವ ಸಂಭವವಿದೆಯೆಂಬುದಕ್ಕೆ ಅನೇಕ ಪುರಾವೆಗಳಿವೆ. ಈ ಬಗೆಯ ಕ್ಯಾನ್ಸರ ಆದವರಲ್ಲಿ ಅಧಿಕಾಂಶ ಜನರು ಅತಿರೇಕ ಸಿಗರೇಟು ಭಕ್ತರು ಮತ್ತು ಕಳೆದ ೨೫ ವರ್ಷಗಳಲ್ಲಿ ಸಿಗರೇಟಿನ ವ್ಯಾಪಾರ ಹೆಚ್ಚಾದ ಪ್ರಮಾಣದಲ್ಲಿಯೇ ಪುಪ್ಪುಸ ಕ್ಯಾನ್ಸರ ಪೀಡಿತರ ಸಂಖ್ಯೆಯೂ ಹೆಚ್ಚಾಗಿದೆ, ಎಂದು ಇಂಗ್ಲಂಡ್ ಅಮೇರಿಕಗಳಲ್ಲಿ ಕಲೆಹಾಕಿದ ಅಂಕೆಸಂಖ್ಯೆಗಳು ತೋರಿಸಿವೆ. ಸಿಗರೇಟಿನ ಹೊಗೆಯಿಂದ ತಯಾರಿಸಿದ ಡಾಂಬರವನ್ನು ಬಳಿದಾಗ ಇಲಿ ಮೊದಲಾದ ಕೆಲ ಪ್ರಾಣಿಗಳಲ್ಲಿ ಕ್ಯಾನ್ಸರ ಉತ್ಪತ್ತಿಯಾಗಿದ್ದುಂಟು. ವೈದ್ಯಕೀಯ ಪ್ರಪಂಚದಲ್ಲಿ ಅಧಿಕಾಂಶ ಜನರು ಸಿಗರೇಟ-ಕ್ಯಾನ್ಸರ ಸಂಬಂಧವನ್ನು ಒಪ್ಪಿದ್ದಾರೆ. ಆದರೂ ಪುರಾವೆಗಳು ಸಂಪೂರ್ಣವಾಗಿ ಇದನ್ನು ಸಿದ್ಧಪಡಿಸುವುದಿಲ್ಲೆಂದು ವಾದಿಸುವ ಡಾಕ್ಟರರೂ ಇಲ್ಲದಿಲ್ಲ.

ಸಿಗರೇಟಲ್ಲದೆ ನಗರಗಳಲ್ಲಿನ ಕಾರಖಾನೆಯ ಹೊಗೆ, ಗಣಿಗಳಲ್ಲಿನ ಕಲುಷಿತ ವಾತಾವರಣ ಮೊದಲಾದ ಕಾರಣಗಳಿಗೂ ಶ್ವಾಸಾಂಗಗಳ ಕ್ಯಾನ್ಸರಕ್ಕೂ ಸಂಬಂಧ ಕಾಣಿಸುತ್ತದೆ.

**ತಾಂಬೂಲ ಹಾಕಿಕೊಳ್ಳುವುದರಿಂದ ಬಾಯಿಯ ಕ್ಯಾನ್ಸರ ಆಗುವುದು ನಿಜವೇ?** ಮುಂಬಯಿಯ ಕ್ಯಾನ್ಸರ ಸಂಶೋಧನ ಕೇಂದ್ರದ ಡಾ. ಎಸ್. ಡಿ. ಸಾಂಘವಿ, ಡಾ. ಕೆ. ಸಿ. ಎಂ. ರಾವ್, ಡಾ. ಖಾನೋಳಕರ ಇವರು ಟಾಟಾ ಕ್ಯಾನ್ಸರ ಆಸ್ಪತ್ರೆಯಲ್ಲಿ ೧,೪೬೦ ಪ್ರಕರಣಗಳನ್ನು ಪರಿಶೀಲಿಸಿದಾಗ ಎಲೆಅಡಿಕೆ (ವಿಶೇಷವಾಗಿ ತಂಬಾಕು) ಜಗಿಯುವುದಕ್ಕೂ ಬಾಯಿಯ ಕ್ಯಾನ್ಸರಕ್ಕೂ ಸಂಬಂಧವಿರುವಂತೆ ತೋರಿತು.

ಬಾಯಿಯ ಕ್ಯಾನ್ಸರ ಇಂಗ್ಲಂಡ್ ಮೊದಲಾದ ದೇಶಗಳಲ್ಲಿ ಈಗ ತೀರ ಕಡಿಮೆಯಾಗಿದೆ. ಭಾರತದಲ್ಲಿ ಸೇಕಡಾ ೩೬ ಕ್ಯಾನ್ಸರ ರೋಗಿಗಳು ಬಾಯಿಯ ಕ್ಯಾನ್ಸರದಿಂದ ಬಳಲುತ್ತಾರೆ. ಇದಕ್ಕೆ ಎಲೆಅಡಿಕೆಯ ಚಟವು ಕಾರಣವೆಂಬ ಸಂಶಯವಿದೆ. ಎಲೆಅಡಿಕೆಯ ಚಟವಿರುವ ದಕ್ಷಿಣೀ ಹಿಂದುಗಳಲ್ಲಿ ಈ ಕ್ಯಾನ್ಸರು ಇರುವಷ್ಟು ಹೊಗೆಬತ್ತಿ ಸೇದುವ ಗುಜರಾತಿ ಹಿಂದುಗಳಲ್ಲಿರುವದಿಲ್ಲವೆಂದು ಗಮನಿಸಬೇಕು.

ಸಿಗರೇಟು ಸೇದುವವರಲ್ಲಿ ಶ್ವಾಸಾಂಗಗಳ ಕ್ಯಾನ್ಸರ ಹೆಚ್ಚಾಗಿರುವಂತೆ ತಂಬಾಕು ಜಗಿಯುವವರಲ್ಲಿ ಬಾಯಿಯ ಕ್ಯಾನ್ಸರು ಹೆಚ್ಚಾಗಿರುತ್ತದೆ. ಜಗಿಯುವುದು ಸೇದುವುದು ಎರಡೂ ಚಟವುಳ್ಳವರಿಗೆ ನಾಲಿಗೆಯ ಕೆಳಭಾಗದಲ್ಲಿ ಕ್ಯಾನ್ಸರ ಆಗುವ ಸಂಭವ ಹೆಚ್ಚು.

ವೀಳ್ಯದೆಲೆ, ಅಡಿಕೆ, ಸುಣ್ಣ, ತಂಬಾಕು ಮೊದಲಾದವುಗಳಲ್ಲಿರುವ ಕೊರೆಯುವ ಗುಣದಿಂದ ಅವು ಕ್ಯಾನ್ಸರಿಗೆ ಕಾರಣವಾಗುತ್ತವೆಂದು ನಂಬಲಾಗಿದೆ. ಆದರೆ ಈ ವಿಚಾರದಲ್ಲಿ ಇನ್ನೂ ನಿಸ್ಸಂದಿಗ್ಧ ಪ್ರಮಾಣಗಳಿಲ್ಲ.

**ಕ್ಯಾನ್ಸರನ್ನು ಯಾವ ಲಕ್ಷಣಗಳಿಂದ ಗುರುತಿಸಬಹುದು?** (೧) ಮಾಯಲೊಲ್ಲದ ಹುಣ್ಣುಗಳು, (೨) ಎದೆ ಅಥವಾ ಬೇರೆ ಕಡೆ ಎಲ್ಲಾದರೂ ಬೀಜದಂತೆ ಗಟ್ಟಿಯಾದ ಗಂಟು, (೩) ಅಸಾಮಾನ್ಯ ರಕ್ತಸ್ರಾವ, (೪) ಗೆಳತಿ (mole) ಗಳಲ್ಲಿ ಅಥವಾ ನರವಲಿ (wart) ಗಳಲ್ಲಿ ಯಾವುದೇ ತೀವ್ರ ಬೆಳವಣಿಗೆ, (೫) ಮೇಲಿಂದ ಮೇಲೆ ಅಪಚನವಾಗುವುದು ಇಲ್ಲವೆ ನುಂಗಲು ಕಷ್ಟವಾಗುವುದು, (೬) ಆಗಾಗ್ಗೆ ದನಿ ಬೀಳುವುದು ಅಥವಾ ಕೆಮ್ಮು ಬರುವುದು,

ಮತ್ತು (೭) ಮಲವಿಸರ್ಜನೆಯಲ್ಲಿ ಹೆಚ್ಚು ಕಡಿಮೆಯಾಗುತ್ತಿರುವುದು.

ಎದೆ, ತುಟಿ, ನಾಲಿಗೆ ಮೊದಲಾದ ಸ್ಥಳಗಳಲ್ಲಿ ಗಟ್ಟಿಯಾದ ಬೀಜದಂಥ ಗಂಟಿನ ಉತ್ಪತ್ತಿಯಾದಲ್ಲಿ, ಮಲದ್ವಾರದಿಂದ, ಮೂತ್ರದ್ವಾರದಿಂದ ರಕ್ತಸ್ರಾವವಾಗುತ್ತಿದ್ದಲ್ಲಿ, ಕೆಮ್ಮು ಮತ್ತು ವಾಂತಿಯಾಗುತ್ತಿದ್ದಲ್ಲಿ ಕ್ಯಾನ್ಸರಿನ ಭಯವಿರುತ್ತದೆ. ವಯಸ್ಸಾದವರಲ್ಲಿ ನೋವಿಲ್ಲದ ಅಂಡವೃದ್ಧಿಯಾದರೆ, ನೋವಿಲ್ಲದ ಕಾಮಣಿಯಾದರೆ ಅದೂ ಅಪಾಯಸೂಚಕವೇ.

ಈ ಲಕ್ಷಣಗಳು ಕಾಣಿಸಿದೊಡನೆ ಕ್ಯಾನ್ಸರ ಆಗಿದೆಯೆಂದು ತಿಳಿಯಬೇಕಾಗಿಲ್ಲ. ಆದರೆ ಇವುಗಳು ಕಾಣಿಸಿದರೆ ಡಾಕ್ಟರರ ಕಡೆ ಹೋಗುವುದೊಳಿತು. ಯಾಕಂದರೆ ಕ್ಯಾನ್ಸರ ಆದವರಲ್ಲಿ ಇವುಗಳಲ್ಲಿ ಒಂದಲ್ಲ ಒಂದು ಲಕ್ಷಣ ಇದ್ದೇ ಇರುವುದು.

**ಕ್ಯಾನ್ಸರ ಚಿಕಿತ್ಸೆಯಲ್ಲಿ ಸದ್ಯಕ್ಕೆ ಯಾವ ಕ್ರಮಗಳನ್ನು ಉಪಯೋಗಿಸಲಾಗುತ್ತಿದೆ ?** ಶಸ್ತ್ರಕ್ರಿಯೆ ಮತ್ತು ರೇಡಿಯೇಶನ್ (ರೇಡಿಯಂ ಮತ್ತು ಡೀಪ್ ಎಕ್ಸರೇ). ಅಮೇರಿಕದಲ್ಲಿ ಹೆಚ್ಚಾಗಿ ಶಸ್ತ್ರಕ್ರಿಯೆಯನ್ನೇ ಮಾಡಲಾಗುತ್ತದೆ. ಕೆಲ ಯುರೋಪಿಯನ್ ದೇಶಗಳಲ್ಲಿ ರೇಡಿಯೇಶನನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ.

**ಭಾರತದಲ್ಲಿ ಕ್ಯಾನ್ಸರ ಹಾವಳಿಯ ಬಗ್ಗೆ ಏನು ಮಾಡಲಾಗುತ್ತಿದೆ?** ಮೊದಲೇ ಹೇಳಿದಂತೆ ಇಲ್ಲಿ ಕ್ಯಾನ್ಸರ ವಿಷಯದ ಸಂಶೋಧನೆ ತೀರ ಈಚೆಗಿನದು. ಭಾರತೀಯ ಕ್ಯಾನ್ಸರ ಸಂಘ ಸ್ಥಾಪನೆಯಾದದ್ದೇ ೧೯೫೧ ರಲ್ಲಿ. ಅದರಲ್ಲಿ ಡಾಕ್ಟರರೂ ವಿಜ್ಞಾನಿಗಳೂ ಸಾಮಾನ್ಯರೂ ಪ್ರಮುಖ ನಾಗರಿಕರೂ ಇದ್ದಾರೆ. ಅನೇಕ ಸಂಸ್ಥೆಗಳೂ ಸದಸ್ಯತ್ವ ಪಡೆದಿವೆ.

ಮುಂಬಯಿಯಲ್ಲಿರುವ ಈ ಸಂಸ್ಥೆಯ ಶಾಖೆಗಳು ಹೊಸದಿಲ್ಲಿ, ಕಲಕತ್ತೆ, ಮದ್ರಾಸಗಳಲ್ಲಿವೆ. ಆಗ್ರಾ, ಬೆಂಗಳೂರು, ಹೈದರಾಬಾದ, ಜೋಧಪುರ, ನಾಗಪುರ, ಸೊಲ್ಲಾಪುರಗಳಲ್ಲಿಯೂ ಶಾಖೆಗಳನ್ನು ತೆರೆಯುವ ಏತ್ತುಗಡೆ ನಡೆದಿದೆ.

ಮುಂಬಯಿಯಲ್ಲಿರುವ ಟಾಟಾ ಸ್ಮಾರಕ ಕ್ಯಾನ್ಸರ ಆಸ್ಪತ್ರೆಯೇ ಈ ದೇಶದ ಮುಖ್ಯ ಕ್ಯಾನ್ಸರ ಆಸ್ಪತ್ರೆಯಾಗಿದೆ.

ಈ ಆಸ್ಪತ್ರೆಯ ಅಂಗವಾಗಿ ೧೯೫೨ ರಲ್ಲಿ ಭಾರತ ಸರಕಾರದ ೫,೯೦,೦೦೦ ರೂಪಾಯಿಯ ಗ್ರಾಂಟಿನ ಆಧಾರದಿಂದ ಕ್ಯಾನ್ಸರ ಸಂಶೋಧನ ಕೇಂದ್ರವನ್ನು ಸ್ಥಾಪಿಸಲಾಯಿತು. ಅದರ ಡೈರೆಕ್ಟರರಾದ ಡಾ. ವಿ. ಆರ್. ಖಾನೋಳಕರರು ಅಂತಾರಾಷ್ಟ್ರೀಯ ಕೀರ್ತಿಯ ಕ್ಯಾನ್ಸರ ತಜ್ಞರು.

ಈ ಕೇಂದ್ರದಲ್ಲಿ ವಿವಿಧ ಶಾಖೆಗಳಿದ್ದು ಡಾ. ಟಿ. ಬಿ. ಪಾನಸೆಯವರು ತಂಬಾಕಿಗೂ ಕ್ಯಾನ್ಸರಿಗೂ ಇರುವ ಸಂಬಂಧವನ್ನು ಶೋಧಿಸುತ್ತಿದ್ದಾರೆ. ಡಾ. ಶ್ರೀಮತಿ ಕಮಲ ರಣದಿವೆಯವರು ಅಲ್ಲಿ ಮುಖ್ಯ ಪ್ರಮೇಯ (ಥಿಯರಿ) ಪಟುಗಳು. ಇವರಲ್ಲದೆ ಹಲವು ಉತ್ಸಾಹಿ ವೈದ್ಯಕೀಯ ಜನರು ಅಲ್ಲಿ ಕ್ಯಾನ್ಸರ ವಿರುದ್ಧ ಹೋರಾಟ ಸಾಗಿಸಿದ್ದಾರೆ.

ಕ್ಯಾನ್ಸರ ಸಂಘ, ಕಾನ್ಸರ ಸಂಶೋಧನ ಕೇಂದ್ರಗಳು ನಡೆಸಿದ ಈ ಪರಿಶ್ರಮವು ಫಲಿತಕ್ಕೆ ಬರಲು ದೀರ್ಘಕಾಲ ಬೇಕು. ಅದಕ್ಕೆ ಧನಸಹಾಯವೂ ಸಾಕಷ್ಟಿಲ್ಲ.

ಕ್ಯಾನ್ಸರ ಸಂಘದವರು ಕ್ಯಾನ್ಸರ ಸಪ್ತಾಹಗಳನ್ನು ಸಂಘಟಿಸಿ ಭಾಷಣ, ಪ್ರಚಾರ ಮೊದಲಾದವುಗಳಿಂದ ಕ್ಯಾನ್ಸರ ಬಗ್ಗೆ ಜನರಲ್ಲಿ ತಿಳಿವಳಿಕೆ ಹಬ್ಬಿಸಲು ಯತ್ನಿಸುತ್ತಿದ್ದಾರೆ. ಸಂಘಕ್ಕೆ ಧನ ಸಹಾಯವನ್ನೂ ಆಗ ಪ್ರಾರ್ಥಿಸಲಾಗುತ್ತದೆ. ಜನರು ಇದರಲ್ಲಿ ನೆರವಾಗಬೇಕು.

ಎಲ್ಲಕ್ಕೂ ಹೆಚ್ಚಾಗಿ ಕ್ಯಾನ್ಸರ ವಿರುದ್ಧ ಹೋರಾಟದಲ್ಲಿ ಜನತೆ ಎಚ್ಚತ್ತು ಸಹಕರಿಸುವುದು ಅತ್ಯಗತ್ಯ. ಈ ರೋಗದ ಬಗ್ಗೆ ತಿಳಿವಳಿಕೆ ಹೆಚ್ಚಿ, ರೋಗಪೀಡಿತರು ಕೈಮೀರುವ ಮೊದಲೇ ಡಾಕ್ಟರರ ಕಡೆ ಹೋಗುವಂತಾಗಬೇಕು. ಅಂದರೆ ಹೋರಾಟದಲ್ಲಿ ಒಂದು ರಂಗದಲ್ಲಿ ಪೂರ್ಣ ಯಶಸ್ಸು ದೊರೆತಂತಾಗುವುದು.

ನಾಲ್ಕು ಹೆಣ್ಣುಮಕ್ಕಳ ನಂತರ ಹಾರೈಸಿ ಹಾರೈಸಿ ಪಡೆದ ಮುದ್ದಾದ ಗಂಡು ಕೂಸು ಎರಡು ವರ್ಷ ಲೀಲೆ ತೋರಿಸಿ ಆಕಸ್ಮಾತ್ತಾಗಿ ಒಂದು ದಿನ ತೀರಿಕೊಂಡಾಗ ನನ್ನ ಹೃದಯದಲ್ಲಿ ದಾವಾಗ್ನಿಯೇ ಉರಿದೆದ್ದಿತು. ಮೂರು ದಿನ ನಿರಂತರವಾಗಿ ಕಣ್ಣೀರ ಧಾರೆ ಸುರಿಸಿದರೂ ನನ್ನ ಎದೆಯುಳಲು ತಣಿಯುಲಿಲ್ಲ.

ನಮ್ಮವರ ದುಃಖವೇನೂ ಕಡಿಮೆಯಿರಲಿಲ್ಲ. ಆದರೆ ಅವರು ಎಲ್ಲವನ್ನು ನುಂಗಿಕೊಂಡು ಬಿಳಿಚು ಮುಖದಿಂದ ನನಗೆ ಸಮಾಧಾನ ಹೇಳುತ್ತಿದ್ದರು.

ಮೂರನೇ ದಿನ ನಾನು ಅವರಿಗೆ ತೆಕ್ಕೆಬಿದ್ದು "ಈ ದುಃಖ ಎಂದು ಮರೆತೀತು?'' ಎಂದು ಕೇಳಿದೆ.

ಅವರು ಶಾಂತ ಸ್ವರದಿಂದ "ಇದಕ್ಕೂ ದೊಡ್ಡ ದುಃಖ ಬಂದಾಗ'' ಅಂದರು. "ಇದಕ್ಕಿಂತ ದೊಡ್ಡ ದುಃಖ ಬೇರೆಲ್ಲಿ?'' ಎಂದು ನಾನು ಅತ್ತೆ.

ಇದಾಗಿ ಎಂಟನೇ ದಿನ ನಮ್ಮವರಿಗೆ ಒಮ್ಮೆಲೇ ಜ್ವರ ಪ್ರಾರಂಭವಾಯಿತು. ಮೂರು ದಿನಗಳಲ್ಲೇ ಅದು ಉಲ್ಬಣಗೊಂಡು ವಿಷಮ ಜ್ವರದ ರೂಪ ಧರಿಸಿತು. ಡಾಕ್ಟರರು ಚಿಂತೆಯ ಮುಖಮುದ್ರೆ ತಾಳಿದರು. ೪೨ ದಿನ ಅವರ ಪ್ರಾಣವನ್ನು ಅಂಗೈಲಿಟ್ಟುಕೊಂಡ ಜ್ವರವು ನನ್ನ ಮಗುವಿನ ವಿಯೋಗ ದುಃಖವನ್ನು ಸಂಪೂರ್ಣವಾಗಿ ಮರೆಸಿಬಿಟ್ಟಿತು.

ಮಗುವಿನ ದೆಸೆಯಿಂದ ವಿಧಿಯನ್ನು ಶಪಿಸುತ್ತಿದ್ದ ನಾನು ಪ್ರಾಣಭಯದಿಂದ ಅವರು ಮುಕ್ತರಾದರೆಂದು ಡಾಕ್ಟರರಿಂದ ಕೇಳಿದ ದಿನ ವಿಧಿಯನ್ನು ಹರಸಿದೆ.

—ಸೀ. ಬಾ., ಉಡುಪಿ

ಕಳೆದ ಮಹಾ ಯುದ್ಧದ ಕಾಲ. ಕಬ್ಬಿಣ ಹಾಗೂ ಕಬ್ಬಿಣದ ಸಾಮಾನುಗಳು ದುರ್ಲಭವಾಗಿದ್ದವು. ಅವುಗಳ ಮೇಲೆ ನಿಯಂತ್ರಣವಿದ್ದುದರಿಂದ, ಪರ್ಮೀಟ ಇಲ್ಲದೆ ಕಬ್ಬಿಣದ ಒಂದು ವಸ್ತುವೂ ಸಿಗುತ್ತಿರಲಿಲ್ಲ.

ಅಂತಹ ಪರಿಸ್ಥಿತಿಯಲ್ಲಿ ಮಂಗಳೂರಿನ ಒಬ್ಬ ವ್ಯಾಪಾರಸ್ಥರ ಕಡೆಗೆ ನೂರು ಹಾರೆಗಳು ಕಳಿಸಲ್ಪಟ್ಟವು. ಆದರೆ, ಪರ್ಮೀಟು ಇಲ್ಲದೆ ಯಾರಿಗೂ ಅವನ್ನು ಕೊಡಬಾರದೆಂದು ವಿಧಿಸಲಾಗಿತ್ತು. ಪರ್ಮೀಟು ಕೊಡುವ ಅಧಿಕಾರ ತಾಲೂಕಿನ ತಹಶೀಲದಾರರದಾಗಿತ್ತು.

ಒಂದು ರೋಮನ್ ಕೆಥೊಲಿಕ್ ಚರ್ಚಿನ ಪಾದ್ರಿಯು ಹೆಣ ಹುಗಿಯಲು ಹೊಂಡ ತೋಡುವದಕ್ಕಾಗಿ ಹಾರೆ ಬೇಕೆಂದು ಪರ್ಮೀಟನ ಬಗ್ಗೆ ಅರ್ಜಿ ಮಾಡಿದನು. ಅವನಿಗೆ ಈ ರೀತಿ ಉತ್ತರ ಬಂತು:

"ಹಾರೆಗಳು ಬೇಸಾಯದ ಕೆಲಸಕ್ಕೆ ಬೇಕಾಗಿದ್ದರೆ ಮಾತ್ರವೇ ಪರ್ಮೀಟು ಕೊಡಬೇಕೆಂದು ಮೆಹರಬಾನ ಮದ್ರಾಸ ಸರಕಾರದ ನಂ..... ಇಂತಿಷ್ಟನೇ ಹುಕುಮು ಇದೆ. ಹೆಣ ಹುಗಿಯುವದು ಬೇಸಾಯದ ಕೆಲಸವಲ್ಲವಾದ್ದರಿಂದ, ರೆವರೆಂಡ್ ಫಾದರ್.....ರ ಅರ್ಜಿಯನ್ನು ತಿರಸ್ಕರಿಸಲಾಗಿದೆ.'' ಸಹಿ—ತಹಶೀಲದಾರ, ಮಂಗಳೂರು ತಾಲೂಕ.

—ರಂ. ರಾ. ತ., ಬೆಳಗಾವಿ

ಒಂದು ದಿನ ನನ್ನ ಚಿಕ್ಕತಂಗಿ ಶ್ಯಾಮಲೆ ೬ ವರ್ಷದವಳು ಆಟವಾಡುತ್ತ ಆಟವಾಡುತ್ತ ನನ್ನ ಕಾಕಾನ ಟೇಬಲ್ಲಿನ ಮೇಲಿದ್ದದ್ದ ನ್ನೆಲ್ಲಾ ಚೆಲ್ಲಾಪಿಲ್ಲಿ ಮಾಡಿ ಹರಡಿದಳು. ನಂತರ ಆಫೀಸಿನಿಂದ ಅವರು ತಮ್ಮ ಕೆಲಸ ಮುಗಿಸಿಕೊಂಡು ಬಂದು ನೋಡಿದಾಗ ಅಲ್ಲಿ ಆಗಿದ್ದ ಈ ಕಿತ್ತಾಟವನ್ನು ಕಂಡು ಕೋಪ ಗೊಂಡು ಹಾಗೆ ಮಾಡಿದವರಾರೆಂದು ವಿಚಾ ರಿಸಲಾರಂಭಿಸಿದರು. ವಿಚಾರಿಸಲಾಗಿ ಶ್ಯಾಮ ಲೆಯು ಮಾಡಿದುದೆಂದು ಕೇಳಿ ತೀರ ಕೋಪ ಗೊಂಡರು. ಹಾಗೇ ಅವಳನ್ನು ಕರೆಯಿಸಿದರು. ಅವರು ಬಡಿಯಲು ಕೈ ಎತ್ತುವಷ್ಟರಲ್ಲಿಯೇ ಅವಳು ಅಳುವ ಧ್ವನಿಯಲ್ಲಿ ಹೇಳಿದಳು: "ಕಾಕಾ, ಸಾವಕಾಶವಾಗಿ ಬಡಿಯಿರಾ, ಮೊನ್ನಿನ ಹಾಗೆ ಜೋರಿನಿಂದ ಬಡಿಯ ಬೇಡಿ.'' ಅವಳ ಈ ಮಾತನ್ನು ಕೇಳಿ ಬದಿ ಯಲ್ಲಿ ನಿಂತ ನನಗೆ ನಗು ತಡೆಯುವದಾಗ ಲಿಲ್ಲ. ಹಾಗೂ ಕಾಕಾನ ಸಿಟ್ಟೆಲ್ಲ ಎಲ್ಲಿ ಮಾಯ ವಾಯಿತೋ ಕಾಣೆ. ಅವರು ಅದೇ ಕ್ಷಣ ಅವ ಳನ್ನು ಎತ್ತಿಕೊಂಡು ಮೈದಡವಿ ಹೇಳಿದರು: "ಮುಂದೆ ಹೀಗೆಂದೂ ಮಾಡಬೇಡ ಮಗು!''

"ಎಸ್‌ಜ್ಕೆ"—ಮಹಾಲಿಂಗಪುರ

ಒಬ್ಬ ತರುಣಿಯೂ ಓರ್ವ ಯುವಕನೂ ಜೊತೆಗೂಡಿ ಇಂಗ್ಲೀಷ ಚಿತ್ರವೊಂದಕ್ಕೆ ಮಲ್ಲಿ ಕಾರ್ಜುನ ಟಾಕೀಜಕ್ಕೆ ಬಂದರು. ಆಗ ಆ ಚಿತ್ರಕ್ಕೆ ಬಹಳ ಸಂದಣಿ ಇತ್ತು. ಅವರಿಬ್ಬರಿಗೂ ಒಂದೆಡೆ ಸ್ಥಳ ಸಿಗಲಿಲ್ಲ. ಇಬ್ಬರೂ ಬೇರೆ ಬೇರೆ ಜಾಗೆಗಳಲ್ಲಿ ಕುಳಿತುಕೊಳ್ಳಬೇಕಾಯಿತು.

ಅವರಿಬ್ಬರಿಗೂ ಅದು ಇಷ್ಟವಿರಲಿಲ್ಲ. ಆದರೆ ವಿಧಿಯಿಲ್ಲ. ಆ ಯುವತಿ ನನ್ನ ಶ್ರೀಮತಿಯ ಪಕ್ಕದಲ್ಲಿ ಕುಳಿತುಕೊಳ್ಳಬೇಕಾಯಿತು. ಆಕೆ ಕೂತ ಮೇಲೂ ತನ್ನ ಇಚ್ಛೆಯನ್ನು ಪೂರೈಸಿ ಕೊಳ್ಳುವ ಯತ್ನದಲ್ಲೇ ಇದ್ದಳು. ಆಚೆ ಪಕ್ಕ ದಲ್ಲಿ ಕುಳಿತಿದ್ದ ಪುರುಷನಿಗೆ "ನೀವು ಒಬ್ಬರೇ ಇದ್ದೀರಿ ಅಂತ ಕಾಣಿಸುತ್ತೆ'' ಅಂದಳು. ಆತ ಮಾತನಾಡದೇ ಚಿತ್ರ ನೋಡುತ್ತಿದ್ದ. ಆಕೆ ಎರಡು ಮೂರು ಬಾರಿ ಕೇಳಿದಂತೆ ಕಾಣಿಸು ತ್ತದೆ.

ಕಡೆಗೊಮ್ಮೆ ಆತ ಸಿಟ್ಟಗೆದ್ದವನಂತೆ, "ಇಲ್ಲ, ಸುಮ್ಮನೆ ಕುಳಿತುಕೊ, ನಮ್ಮ ಮನೆಯವ ರೆಲ್ಲಾ ಹಿಂದಿನ ಸಾಲಿನಲ್ಲಿ ಕುಳಿತಿದ್ದಾರೆ'' ಎಂದು ಗದರಿಸಿದ.

ಕಡೆಗೂ ಆ ತರುಣಿಯ ಉದ್ದಿಶ್ಯ ಆತನಿಗೆ ತಿಳಿಯಲೇ ಇಲ್ಲವೆಂದು ಕಾಣಿಸಿತು.

—ಕೆ. ವಿ. ರಾವ್, ಹುಬ್ಬಳ್ಳಿ.



ಈ ಶೀರ್ಷಿಕೆಯ ಕೆಳಗೆ ಪ್ರಕಟವಾಗಲು ಓದುಗರಿಂದ ಸ್ವಂತ ಅನುಭವದ ಇಂಥ ಚುಟುಕ ಲೇಖಗಳು ಬೇಕಾಗಿವೆ. ೧೫೦ ಶಬ್ದಗಳಿಗೆ ಮೀರದಂತೆ ಅವನ್ನು ಬರೆದುಕಳಿಸಬೇಕು. ಚುಟುಕುಗಳು ಭಾರತೀಯ ಜೀವನದ ಸ್ವಾರಸ್ಯಮುಖವನ್ನು ಪ್ರದರ್ಶಿಸುವಂತಿರಬೇಕು. ಸ್ವೀಕೃತವಾದ ಪ್ರತಿ ಚುಟುಕಕ್ಕೆ ಒಂದು ರೂಪಾಯಿ ಬಹುಮಾನವೀಯಲಾಗುವದು.



**ಕಲ್ಪಕ ಬುದ್ಧಿಯೊಂದಿದ್ದರೆ ಎಂಥೆಂಥ ಉದ್ಯೋಗ ಶಕ್ಯವಿದೆ!**

# ಬಸವನಹುಳದಿಂದ ಭಾಗ್ಯ!

ನಿರುದ್ಯೋಗಿಯಾಗಿರುವ ಯಾವನೊಬ್ಬನನ್ನು ಕೇಳಿ ನೋಡಿ, "ಏನು ಸ್ವಾಮಿ, ಏನು ಮಾಡಲಿ? ನೌಕರಿ ಸಿಗುವದಿಲ್ಲ; ಮಾಡಲು ಉದ್ಯೋಗವಿಲ್ಲ; ಬಂಡವಳವಿಲ್ಲ" ಎನ್ನುತ್ತಾನೆ. ಈ ಉತ್ತರ ಸತ್ಯವಾದರೂ ಸಂಪೂರ್ಣ ಸತ್ಯವಲ್ಲ. ಮನಸ್ಸಿದ್ದಲ್ಲಿ ಮಾರ್ಗವಿದ್ದೇ ಇದೆ. ಏನನ್ನಾದರೂ ಮಾಡಲೇ ಬೇಕು ಎಂಬ ದೃಢನಿರ್ಧಾರದವನಿಗೆ ಏನಾದರೊಂದು ಉದ್ಯೋಗ— ಹೊಸ ಬಗೆಯ ಉದ್ಯೋಗ ಹೊಳೆಯುತ್ತದೆ.

ಇದಕ್ಕೆ ರಾಬರ್ಟ ಸ್ಟೇನರು ಉತ್ತಮ ಉದಾಹರಣೆಯಾಗಿದ್ದಾರೆ. ಇವರು ಜರ್ಮನಿಯವರು. ಅಲ್ಲಿ ಮರಮಟ್ಟಿನ (ಕಟ್ಟಿಗೆ) [illegible] ಉದ್ಯೋಗ [illegible] ನಡೆಸುತ್ತಿ [illegible] ಶ್ರೀಮಂತರೂ ಹೌದು. ೧೯೩೪ರಲ್ಲಿ ಜರ್ಮನಿಯಲ್ಲಿಯ ಆಸ್ತಿಯನ್ನು ಮಾರಿ ಝೆಕೊಸ್ಲೊವಾಕಿಯದ ಸ್ಟರ್ನಬರ್ಗದಲ್ಲಿ ನೆಲೆಸಿ ಅಲ್ಲಿಯೂ ಮರಮಟ್ಟಿನ ವ್ಯಾಪಾರವನ್ನು ಪ್ರಾರಂಭಿಸಿ ಯಶಸ್ವಿಯಾಗಿ ನಡೆಸಿದರು. ಹಿಟ್ಲರಶಾಹಿಯ ಕಡು ವಿರೋಧಿಗಳಾಗಿದ್ದರೂ ರಾಬರ್ಟ ಸ್ಟೇನರು ದ್ವಿತೀಯ ಮಹಾಯುದ್ಧ ಕಾಲದಲ್ಲಿ ಸುಮಾರು ೨,೦೦೦ ಯುದ್ಧ ಕೈದಿಗಳಿಗೆ ತಮ್ಮಲ್ಲಿ ಕೆಲಸ ಕೊಟ್ಟರು. ಈ ರೀತಿಯಲ್ಲಿ ಈ ಬಡಪಾಯಿಗಳ ಕಷ್ಟವನ್ನು ತುಸುವಾದರೂ ಕಡಿಮೆ ಮಾಡಬಹುದು ಎಂಬುದೇ ಕೈದಿಗಳಿಗೆ ಇವರು ಕೆಲಸ ಕೊಟ್ಟಿದ್ದರ ಉದ್ದೇಶವಾಗಿತ್ತು. ತಮ್ಮ ಭೂಮಿಯಲ್ಲಿ ತೋಟಗಳನ್ನು ಬೆಳೆಸಲು ಕೆಲ ಫ್ರೆಂಚ ಕೈದಿಗಳಿಗೆ ಅನುಮತಿಯನ್ನು ಕೂಡ ಸ್ಟೇನರು ಕೊಟ್ಟರು.

ಮುಂದೆ ಸ್ಟೇನರು ಈ ತೋಟ [illegible]

'ಈಸ್ಟ್–ವೆಸ್ಟ್–ಕುರಿಯರ್' ದಿಂದ

ತ್ತಿದ್ದಾಗ ಅಲ್ಲಿ ಹಳದಿ ಹೂವು ಬಿಡುವ ಒಂದು ಜಾತಿಯ ಗಿಡವನ್ನು ಬಹಳ ಬೆಳೆಸಿದ್ದುದು ಕಂಡುಬಂತು. ಇನ್ನೂ ತುಸು ಲಕ್ಷ್ಯ ಕೊಟ್ಟು ನೋಡಿದಾಗ ಎಲ್ಲೆಲ್ಲಿಯೂ ಬಸವನ ಹುಳಗಳು ಹರಿದಾಡುತ್ತಿದ್ದವು.

ದುವಾಲ ಎಂಬ ಫ್ರೆಂಚ ಕೈದಿಯನ್ನುದ್ದೇಶಿಸಿ ಸ್ಟೇನರು, "ಏನಪ್ಪಾ, ನಿನ್ನ ತೋಟ ನಿಕೃಷ್ಟಾವಸ್ಥೆಯಲ್ಲಿದೆಯಲ್ಲ!" ಎಂದರು. ದುವಾಲ ಹಲ್ಲುಕಿರಿದು, "ಈ ಬಸವನ ಹುಳಗಳು ಹೊಟ್ಟೆಬಾಕ ಪ್ರಾಣಿಗಳು. ತಿಂದುತಿಂದು ಕೊಬ್ಬತೊಡಗಿವೆ. ಅವನ್ನು ತಿನ್ನಬೇಕೆಂದೇ ಈ ರೀತಿ ಕೊಬ್ಬಿಸುತ್ತಿದ್ದೇನೆ" ಎಂದ.

ಸ್ಟೇನರ ಮೈಮೇಲೆ ರೋಮಾಂಚಗಳೆದ್ದವು. ಅವರ ಮೈ ಕಂಪಿಸಿದ್ದನ್ನು ಕಂಡು ದುವಾಲ ಆಶ್ಚರ್ಯಚಕಿತನಾದ. "ನಿಮಗೆ ಗೊತ್ತಿಲ್ಲವೆ ಸ್ವಾಮಿ? ಬಸವನ ಹುಳಗಳು ಬಹು ರುಚಿಯಾಗಿರುತ್ತವೆ. ವಿಂಟೇಜ ಮದ್ಯದೊಂದಿಗೆ ಅವನ್ನು ತಿನ್ನುತ್ತಾರೆ. ನಮ್ಮ ದೇಶದಲ್ಲಿ ಕೇವಲ ಶ್ರೀಮಂತರಿಗೆ ಮಾತ್ರ ಇವನ್ನು ತಿನ್ನುವ ಭಾಗ್ಯ ದೊರಕುತ್ತದೆ. ಯಾಕಂದರೆ ಅಲ್ಲಿ ಇವು ಸಿಗುವದು ಅಪರೂಪ" ಎಂದನಾತ.

ಸ್ಟೇನರು ''ಹ್ಞಂ!'' ಎಂದು ಅಲ್ಲಿಂದ ಹೊರಟುಹೋದರು. ಈ ಸಂಭಾಷಣೆಯೇ ಮುಂದೆ ಸ್ಟೇನರಿಗೆ ಒಂದು ಅಪೂರ್ವ ಉದ್ಯೋಗದ ಸ್ಫೂರ್ತಿಯನ್ನು ಇತ್ತಿತು

ಮಹಾಯುದ್ಧಾನಂತರದಲ್ಲಿ ರಶಿಯನ್ನರು ಸ್ಟೇನ್‌ಬರ್ಗಕ್ಕೆ ಬಂದರು. ಸ್ಟೇನರ ಕರಗಸದ ಗಿರಣಿಗಳಿದ್ದ ಸ್ಥಳ ಸ್ಥಾನಬದ್ಧರ ಶಿಬಿರವಾಯಿತು. ಸ್ಥಾನಬದ್ಧರಲ್ಲಿ ಜರ್ಮನರಾಗಿದ್ದ ಸ್ಟೇನರೂ ಒಬ್ಬರಾಗಿದ್ದರು. ೧೯೪೬ ರ ಜುಲೈ ತಿಂಗಳಲ್ಲಿ ಇವರ ಬಿಡುಗಡೆಯಾಯಿತು. ಬವೇರಿಯದಲ್ಲಿಯ ಒಂದು ನಿರಾಶ್ರಿತರ ಶಿಬಿರಕ್ಕೆ ಬಂದರು. ಆಗ ಇವರಿಗೆ ೬೦ ವರ್ಷ ತುಂಬಿದ್ದವು. ಮೈಮೇಲಿದ್ದ ಹರಕು ಬಟ್ಟೆಯನ್ನುಳಿದು ಬೇರಾವ ಸಂಪತ್ತೂ ಇವರ ಬಳಿ ಉಳಿದಿರಲಿಲ್ಲ.

ಆದರೆ ಸ್ಟೇನರು ಧೈರ್ಯಶಾಲಿ ಮನುಷ್ಯ. ತಮ್ಮ ದುರ್ದೈವವನ್ನು ಹಳಿಯುತ್ತ ಅವರು ಕೂಡಲಿಲ್ಲ. ಅಡವಿಗೆ ಹೋಗಿ ಅಣಬೆ (ನಾಯಿ ಕೊಡೆ) ಗಳನ್ನಾರಿಸಿಕೊಂಡು ಬಂದು ಅವುಗಳನ್ನು ಮಾರಿ ಉಪಜೀವನ ನಡೆಸತೊಡಗಿದರು. ಇದು ಕಾರ್ಪಣ್ಯದ ಜೀವನವಾಗಿದ್ದರೂ ಸ್ವತಂತ್ರ ಜೀವನವಾಗಿತ್ತು.

ಅಣಬೆಗಳನ್ನು ಆರಿಸುತ್ತಿದ್ದಾಗ ಒಂದು ದಿನ ಬಸವನಹುಳವೊಂದು ಅವರ ಕಾಲಿಗೆ ತಗಲಿತು. ಅದನ್ನು ನೋಡಿದೊಡನೆ ಸ್ಟೇನರಿಗೆ ಮಿಂಚಿನಂತೆ ಒಂದು ವಿಚಾರ ಹೊಳೆಯಿತು. ಏನದು, ಹಿಂದೆ ಅವರಲ್ಲಿ ತೋಟ ಮಾಡಿಕೊಂಡಿದ್ದ ಫ್ರೆಂಚ ಕೈದಿ ಹೇಳಿದ್ದ ಮಾತು? ಹೌದು. ಫ್ರೆಂಚ ಜನರಿಗೆ ಬಸವನ ಹುಳಗಳೆಂದರೆ ಬಲು ಇಷ್ಟ. ಅದು ಅವರಿಗೆ ಒಂದು ಪಕ್ವಾನ್ನ! ಫ್ರಾನ್ಸದಲ್ಲಿ ಕ್ವಚಿತ್ತಾಗಿ ಸಿಗುವಂಥ ವಸ್ತು!

ಆದರೆ ಇಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ಬಸವನ ಹುಳಗಳಿದ್ದವು.

ವಿಶ್ವಕೋಶವೊಂದನ್ನು ಕೈಗಡಪಡೆದು ಸ್ಟೇನರು ಬಸವನ ಹುಳಗಳ ಬಗ್ಗೆ ಬರೆದುದನ್ನೆಲ್ಲ ಮನನ ಮಾಡಿಕೊಂಡರು. ಅಡವಿಗೆ ಹೋದಾಗ ನಿತ್ಯದಂತೆ ಅಣಬೆಗಳನ್ನಾರಿಸುವ ಬದಲು ಬಸವನ ಹುಳಗಳನ್ನು ಹೆಕ್ಕಿ ಬುಟ್ಟಿಯಲ್ಲಿ ತುಂಬಿಕೊಂಡರು. ತಾವಿದ್ದ ಬಾಡಿಗೆ ಕೋಣೆಗೆ ಬಂದು ಅವನ್ನೆಲ್ಲ ಜೀವಂತವಾಗಿ ಒಂದು ಪೆಟ್ಟಿಗೆಯಲ್ಲಿ ಭದ್ರಪಡಿಸಿ ಪ್ಯಾರಿಸ್ಸಿಗೆ—ದುವಾಲನಿಗೆ ಪೋಸ್ಟ ಮೂಲಕ ಕಳಿಸಿಕೊಟ್ಟರು.

ಬಸವನ ಹುಳಗಳನ್ನು ಜೀವಂತವಿಟ್ಟು ಪೆಟ್ಟಿಗೆಯಲ್ಲಿ ಕಳಿಸಿಕೊಡುವುದೂ ಒಂದು ವಿಶಿಷ್ಟ ಕಲೆ. ಸ್ಟೇನರು ಕಳಿಸಿದ ಬಸವನ ಹುಳಗಳು ಉತ್ಕೃಷ್ಟವಾಗಿದ್ದವು ಎಂದು ದುವಾಲನ ಪತ್ರ ಸ್ಟೇನರಿಗೆ ಬಂತು. "ನಾನಿಲ್ಲಿ ಮೊದಲಿನಂತೆ ಒಂದು ಚಿಕ್ಕ ಹೋಟೆಲಿನಲ್ಲಿ ಅಡಿಗೆಯವನಾಗಿದ್ದೇನೆ. ಬಸವನ ಹುಳಗಳಿಗೆ ಒಳ್ಳೆಯ ಬೆಲೆ ಕೊಟ್ಟು ಕೊಳ್ಳಲು ಈ ಹೋಟೆಲಿನ ಮಾಲಕರು ಸಿದ್ಧರಿದ್ದಾರೆ" ಎಂದು ದುವಾಲ ಬರೆದಿದ್ದನು.

ಆಗ ಸ್ಟೇನರು ಬಸವನ ಹುಳಗಳ ಬಗ್ಗೆ ಮಾಹಿತಿಯಿದ್ದ ಪುಸ್ತಕಗಳನ್ನೆಲ್ಲ ತಿರುವಿ ಹಾಕತೊಡಗಿದರು. ವಾರಕ್ಕೊಮ್ಮೆ ತಪ್ಪದೆ ಬಸವನ

ಹುಳಗಳಿಂದ ತುಂಬಿದ ಪೆಟ್ಟಿಗೆಯೊಂದನ್ನು ಫ್ರಾನ್ಸಕ್ಕೆ ಕಳಿಸತೊಡಗಿದರು. ತುಸು ಸಮಯದಲ್ಲಿ ಒಂದು ತುಂಡು ಭೂಮಿ ಲಾವಣಿಗೆ ಹಿಡಿದು ಅಲ್ಲಿ ಬಸವನಹುಳಗಳನ್ನು ಸಾಕಿ ಬೆಳೆಸತೊಡಗಿದರು. ಫ್ರೆಂಚ ಹೋಟೆಲುಗಳು ಬಸವನ ಹುಳಗಳಿಗಾಗಿ ಒಳ್ಳೆಯ ಬೆಲೆಯನ್ನು ತೆರುತ್ತಿದ್ದವು.

ಸ್ಟೇನರು ಆಗ ಇರುತ್ತಿದ್ದ ಲಾಯಿಂಜೆನ್ ಊರಿನ ಒರ್ವ ಬ್ಯಾಂಕರರು ಫ್ರಾನ್ಸಿನಿಂದ ಬಂದಿದ್ದ ಹಣವನ್ನು ಸ್ಟೇನರಿಗೆ ಕೊಡುತ್ತಿದ್ದಾಗ ಮಾತಿಗೆ ಮಾತು ಹೊರಟಿತು. ಸ್ಟೇನರು ತಮ್ಮ ಹೊಸ ಉದ್ಯೋಗದ ವಿಚಾರವನ್ನು ಅವರಿಗೆ ಹೇಳಿ ತಮಗೆ ತುಸು ಸಾಲ ಬೇಕಾಗಿದೆಯೆಂದರು.

ಸ್ಟೇನರು ಹಿಂದೊಮ್ಮೆ ಅತ್ಯಂತ ಯಶಸ್ವಿ ಉದ್ದಿಮೆದಾರರಾಗಿದ್ದರು ಎಂಬುದನ್ನು ಅರಿತಿದ್ದ ಈ ಬ್ಯಾಂಕರ ಫ್ರಿಝ್ ಓಡರಫರರು ಬ್ಯಾಂಕಿನಿಂದ ಸ್ಟೇನರಿಗೆ ಸಾಲ ಕೊಡಿಸಿದರು.

ಸ್ಟೇನರು ನಗರದ ಅಧ್ಯಕ್ಷರ ಬಳಿಗೆ ಹೋಗಿ ಬಸವನಹುಳಗಳನ್ನು ಸಾಕಲು ಭೂಮಿಯನ್ನು ಕೇಳಿದರು. ಯುದ್ಧಾನಂತರದಲ್ಲಿ ಈ ಊರಿನಲ್ಲಿ ೧,೭೦೦ ಜನ ನಿರಾಶ್ರಿತರು ಬಂದು ನೆಲೆಸಿದ್ದರು. ಅವರಿಗೆ ಸ್ಟೇನರ ಉದ್ದಿಮೆಯಲ್ಲಿ ಕೆಲಸ ದೊರೆಯಬಹುದು ಎಂಬ ವಿಚಾರದಿಂದ ನಗರ ಸಭೆ ಅವರಿಗೆ ತನ್ನ ೧೨ ಎಕರೆ ಭೂಮಿಯನ್ನು ಬಾಡಿಗೆಗೆ ಕೊಟ್ಟಿತು.

ಬಸವನಹುಳಗಳನ್ನು ಆರಿಸಿ ತರಲು ಬಹಳ ಜನ ಮುಂದೆ ಬಂದರು. ಸ್ಟೇನರು ಇವುಗಳನ್ನು ಆರಿಸುವ ಬಗೆ, ಉತ್ಪಾದಿಸಿ ಸಾಕುವ ಬಗೆ ಇತ್ಯಾದಿಗಳ ಬಗ್ಗೆ ಹಸ್ತಪತ್ರಿಕೆಗಳನ್ನು ಮುದ್ರಿಸಿ ಹಂಚಿದರು. ತಮಗೆ ಕಳಿಸುವ ಬಸವನ ಹುಳಗಳಿಗೆ ಯೋಗ್ಯ ಬೆಲೆ ಕೊಡುವದಾಗಿ ಸಾರಿದರು. ಈಗ ಅವರಿಗೆ ಬಸವನಹುಳಗಳನ್ನು ಕಳಿಸುವ ೭,೫೦೦ ಏಜನ್ಸಿಗಳಿವೆ.

೧೯೫೦ ರಷ್ಟು ಹೊತ್ತಿಗೆ ಸ್ಟೇನರು ಫ್ರಾನ್ಸ, ಬೆಲ್ಜಿಯಂ ಮತ್ತು ಸ್ವಿಜರ್ಲಂಡಗಳಿಗೆ ಬಸವನಹುಳಗಳನ್ನು ಕಳಿಸತೊಡಗಿದರು. ೧೯೫೫ ರಲ್ಲಿ ಈ ವ್ಯಾಪಾರ ೮,೦೦,೦೦೦ ಮಾರ್ಕ (ಜರ್ಮನ್ ನಾಣ್ಯ) ಗಳಿಗೆ ಏರಿತು.

ಇವರ ಉದ್ದಿಮೆ ಈಗ ೪,೦೦೦ ಜನರಿಗೆ ಉದ್ಯೋಗವನ್ನು ಒದಗಿಸಿದೆ.

ಬಸವನಹುಳಗಳನ್ನು ತಿನ್ನುವ ವಿಚಾರದಿಂದ ಈಗ ಸ್ಟೇನರ ಮೈ ಕಂಪಿಸುವದಿಲ್ಲ. ಅವರಿಗೆ ಈಗ ಅದು ಪ್ರಿಯ ವಸ್ತುವಾಗಿದೆ.



## ಮಾತು ಬಲ್ಲವರ ಮಾತು

ನನಗೆ ಅದೃಷ್ಟದಲ್ಲಿ ತುಂಬ ನಂಬಿಕೆ. ನಾನು ಕಷ್ಟಪಟ್ಟು ದುಡಿದಷ್ಟೂ ಅದು ನನಗೆ ಹೆಚ್ಚು ಹೆಚ್ಚು ಪ್ರಸನ್ನವಾಗುತ್ತದೆ. —ಎಫ್. ಎಲ್. ಎಮರ್ಸನ್

ನಮ್ಮ ಮೌಢ್ಯಪ್ರದರ್ಶನ ಮಾಡಲು ಏನೇನೂ ಕಷ್ಟವಿಲ್ಲ; ಹೆಂಗಸಿನ ಸಹಾಯವಿದ್ದರಂತೂ ಅದು ಬಲು ಬೇಗ ಸಾಧ್ಯವಾಗುತ್ತದೆ. —ಅಜ್ಞಾತ

ಕಪಟವೆಂಬುದು ಯಾವಾಗಲೂ ಗಿಡ್ಡ ಕಂಬಳಿ. ಅದನ್ನು ಮುಖದ ಮೇಲೆಳೆದುಕೊಂಡರೆ ಕಾಲು ಹೊರಹಣಕುತ್ತದೆ. —ಅಸ್ಕಿನ್ ಓಮಾಲಿ

ಹಳೇ ಕಥೆಗೆ ಹೊಸ ಒಪ್ಪಕೊಟ್ಟು ಹೇಳಿದ್ದು—

# ಚಿತ್ರವನ್ನು ಪ್ರೇಮಿಸಿದ ಚಿನಿವಾಲ

ಒಂದಾನೊಂದು ಕಾಲದಲ್ಲಿ ಒಂದು ಊರಿನಲ್ಲಿ ಒಬ್ಬ ಚಿನಿವಾಲನಿದ್ದನು. ಸುಂದರ ಸ್ತ್ರೀಯರು ಮತ್ತು ಸ್ವಾದಿಷ್ಟ ಮದ್ಯ ಇವೆರಡರ ಹೊರತು ಅವನಿಗೆ ಜೀವನದಲ್ಲಿ ಮತ್ತಾವದರಲ್ಲೂ ಆಸ್ಥೆಯಿರಲಿಲ್ಲ. ಅವನ ಕಣ್ಣು ನೋಡಬಯಸುತ್ತಿದ್ದುದು ಹೆಣ್ಣಿನ ಸೌಂದರ್ಯವನ್ನು ಮಾತ್ರ; ಬಾಯಿ ಚಪ್ಪರಿಸಬಯಸುತ್ತಿದ್ದುದು ಸವಿ ಮದ್ಯವನ್ನು ಮಾತ್ರ.

ಒಮ್ಮೆ ಈ ಚಿನಿವಾಲ ತನ್ನ ಓರ್ವ ಗೆಳೆಯನ ಮನೆಯಲ್ಲಿ ಒಂದು ಭಾವಚಿತ್ರವನ್ನು ನೋಡಿದ. ಆ ಚಿತ್ರದಲ್ಲಿದ್ದ ತರುಣಿ, ಅಹಾ! ಅದೆಂಥ ದಿವ್ಯ ಸೌಂದರ್ಯ! ಅಂಥ ಸೌಂದರ್ಯರಾಶಿಯನ್ನು ಮಾನವೀ ನೇತ್ರಗಳು ನೋಡಿರುವದು ಸಾಧ್ಯವಿರಲಿಲ್ಲ; ಹಿಂದೆ ನೋಡಿರುವದೂ ಶಕ್ಯವಿರಲಿಲ್ಲ, ಮುಂದೆ ನೋಡುವ ಸಂಭವವೂ ಇರಲಿಲ್ಲ.

ಆ! ಎಂದು ಬಾಯಿ ತೆರೆದುಕೊಂಡು ಆ ಚಿನಿವಾಲ ಆ ಸೌಂದರ್ಯದ ಪುತ್ಥಳಿಯನ್ನು ದಿಟ್ಟಿಸಿ ನೋಡಿಯೇ ನೋಡಿದ. ನೋಡ ನೋಡುತ್ತಿರುವಂತೆ ಆ ಚಿತ್ರದ ತರುಣಿಯಲ್ಲಿ ಅವನು ಮೋಹಗೊಂಡನು. ಅವಳ ಮೇಲಿನ ಪ್ರೇಮ ಅವನ ಮನಸ್ಸು—ಹೃದಯಗಳನ್ನು ವ್ಯಾಪಿಸಿತು. ದೇಹ ರೋಮಾಂಚಿತವಾಯಿತು. ಆ ಪ್ರೇಮಪ್ರವಾಹದ ಹುಚ್ಚು ಆವೇಗದಲ್ಲಿ ಚಿನಿವಾಲ ಬೇನೆ ಬಿದ್ದ, ಮೃತ್ಯುವಿನ ಬಾಗಿಲಲ್ಲಿ ಬಂದು ನಿಲ್ಲುವವರೆಗೂ ಬಳಲಿದ.

ಹೀಗೆ ಆತ ಒದ್ದಾಡುತ್ತಿರುವಾಗ ಅವನನ್ನು ಕಾಣಲು ಬಂದ ಮಿತ್ರನೊಬ್ಬನು, "ಏನು ನಿನ್ನ ಬೇನೆ! ಎಲ್ಲಿ ನೋವಿದೆ?" ಎಂದು ಮುಂತಾಗಿ ಕೇಳಿದ.

ಚಿನಿವಾಲ ಹೇಳಿದ, "ಮಿತ್ರಾ, ನನ್ನ ಬೇನೆ

'ಅರೇಬಿಯನ್ ನೈಟ್ಸ್' ಕಥೆ

ನೋವು ಎಲ್ಲವೂ ಪ್ರೇಮದಿಂದ ಬಂದದ್ದು. ಆ... ಇದ್ದಾನಲ್ಲ, ಅವನ ಮನೆಯ ಗೋಡೆಯ ಮೇಲೆ ಓರ್ವ ಸುರಸುಂದರಿಯ ಚಿತ್ರವಿದೆ. ಆ ಚಿತ್ರ ದಲ್ಲಿ ಅನುರಕ್ತನಾಗಿ ನಾನೀ ಅವಸ್ಥೆಗೆ ಬಂದು ಮುಟ್ಟಿದ್ದೇನೆ."

"ಹ್ಹಾ! ನಿನ್ನ ಮಾತೇ ನೀನೆಂಥ ಹುಚ್ಚ ಎಂಬುದನ್ನು ತೋರಿಸುತ್ತದೆ. ಅಲ್ಲೋ, ಗೋಡೆಯ ಮೇಲಿರುವ ಚಿತ್ರದ ಪ್ರೇಮದಲ್ಲಿ ನೀನು ಸಿಲುಕಿದ್ದಾದರೂ ಹೇಗೆ? ಯಾರನ್ನೂ ನೋಯಿಸಲಾರದ, ಯಾರಿಗೂ ಸಹಾಯ ಮಾಡ ಲಾರದ ವಸ್ತು ಅದು. ಅದಕ್ಕೆ ಕಾಣುವದಿಲ್ಲ, ಕೇಳುವದಿಲ್ಲ; ಮಾತನಾಡಬರುವದಿಲ್ಲ; ಬೇಡ—ಬೇಕು ಎನ್ನಲು....."

ಮಿತ್ರನ ಮಾತುಗಳನ್ನು ತಡೆದು ನಡುವೆಯೆ ಬಾಯಿ ಹಾಕಿ ಚಿನಿವಾಲನು, "ಸರಿಸರಿ. ಆದರೆ ಆ ಚಿತ್ರವನ್ನು ಬರೆವಾಗ ಚಿತ್ರಕಾರನು ಎದು ರಿಗೆ ಓರ್ವ ತರುಣಿಯನ್ನು ಕೂಡ್ರಿಸಿಕೊಂಡಿರ ಬೇಕು" ಎಂದ.

"ಅದೇಕೆ? ಕಲ್ಪನೆಯಿಂದ ಅವನೇಕೆ ಚಿತ್ರ ವನ್ನು ಬಿಡಿಸಿರಬಾರದು?"

"ಅದೇನೇ ಇರಲಿ. ನಾನಂತೂ ಆ ಚಿತ್ರದ ತರುಣಿಯ ಪ್ರೇಮದಲ್ಲಿ ಸಿಲುಕಿದ್ದೇನೆ. ಮತ್ತೆ ಸಾವಿನ ಮುಖದಲ್ಲಿದ್ದೇನೆ. ಆ ಚಿತ್ರಕ್ಕೆ ಆಧಾರ ವಾದ ತರುಣಿ ಈ ಜಗತ್ತಿನಲ್ಲಿ ಎಲ್ಲಿಯಾದರೂ ಇದ್ದರೆ ಅವಳನ್ನು ಕಾಣುವ ವರೆಗೆ ಆಯುಷ್ಯ ವನ್ನು ಅಲ್ಲಾನು ನನಗೆ ಕರುಣಿಸಲಿ ಎಂದು ಪ್ರಾರ್ಥಿಸಿಕೊಳ್ಳುತ್ತೇನೆ," ಎಂದು ಚಿನಿವಾಲ ಗೋಗರೆದ.

ಚಿನಿವಾಲನ ಮನೆಯಿಂದ ಹೊರಟ ಅವನ ಮಿತ್ರರು ಆ ಚಿತ್ರವನ್ನು ಬಿಡಿಸಿದವನಾರು ಎಂಬುದನ್ನು ಗೊತ್ತುಹಚ್ಚತೊಡಗಿದರು. ಚಿತ್ರ ಕಾರ ಮತ್ತೊಂದು ಊರಿಗೆ ಹೋಗಿದ್ದಾನೆಂದು ತಿಳಿದುಬರಲು ಅವರು ಅವನಿಗೆ ಒಂದು ಪತ್ರ ಬರೆದು ತಮ್ಮ ಮಿತ್ರನ ದುರವಸ್ಥೆಯನ್ನು ಬಣ್ಣಿಸಿ ಚಿತ್ರವನ್ನು ಕಲ್ಪನೆಯಿಂದ ಬರೆದದ್ದೇ ಅಥವಾ ಜೀವಂತ ವ್ಯಕ್ತಿಯನ್ನು ನೋಡಿ ಬರೆದದ್ದೇ ಎಂದು ತಿಳಿಸಬೇಕೆಂದು ಪ್ರಾರ್ಥಿಸಿಕೊಂಡರು.

ಚಿತ್ರಕಾರನ ಉತ್ತರ ಬಂತು: "ಓರ್ವ ಗಾಯಕಿಯನ್ನು ಕಂಡು ನಾನು ಆ ಚಿತ್ರ ಬಿಡಿಸಿದೆ. ಭಾರತದ ಕಾಶ್ಮೀರದಲ್ಲಿರುವ ಓರ್ವ ವಜೀರನ ತೊತ್ತು ಅವಳು," ಎಂದು.

ಇರಾಣದಲ್ಲಿ ವಾಸಿಸುತ್ತಿದ್ದ ಚಿನಿವಾಲನಿಗೆ ಈ ಸಂಗತಿ ಗೊತ್ತಾದೊಡನೆಯೆ ಆತ ಸರ್ವಸಿದ್ಧತೆ ಮಾಡಿಕೊಂಡು ಭಾರತಕ್ಕೆ ಹೊರಟುಬಿಟ್ಟ. ಬಹು ಕಷ್ಟನಷ್ಟಗಳನ್ನನುಭವಿಸಿ ಆತ ಕಾಶ್ಮೀರ ವನ್ನು ತಲುಪಿದ. ಅಲ್ಲಿ ಒಂದು ಮನೆಯನ್ನು ಬಾಡಿಗೆಗೆ ಹಿಡಿದು ವಾಸಿಸತೊಡಗಿದ. ಕೆಲ ದಿನಗಳ ನಂತರ ಆ ಊರಿನ ಔಷಧ ವ್ಯಾಪಾರಿ ಯೊಬ್ಬನನ್ನು ಭೆಟ್ಟಿಯಾಗಿ ಕಾಶ್ಮೀರದ ರಾಜನ ಬಗ್ಗೆ ವಿಚಾರಿಸಿದ. ಈ ವ್ಯಾಪಾರಿ ಚತುರನೂ ದೂರದರ್ಶಿಯೂ ಧೂರ್ತನೂ ಆಗಿದ್ದನು.

"ಹಾ! ನಮ್ಮ ರಾಜ ಬಹು ನ್ಯಾಯನಿಷ್ಠುರನು. ಗೌರವಕ್ಕೆ ಅರ್ಹನಾದವನು. ಪ್ರಜೆಗಳಿಗೆ ಕಲ್ಯಾಣಪ್ರದನು. ಸಕಲರನ್ನು ಸಮಾನ ದೃಷ್ಟಿ ಯಿಂದ ನೋಡತಕ್ಕವನು. ಆದರೆ ಆತನಿಗೆ ಮಂತ್ರವಾದಿಗಳು ಎಂದರೆ ಮಾತ್ರ ಮೈ ಉರಿ ಯುತ್ತದೆ. ಮಂತ್ರವಾದಿ ಗಂಡಸಾಗಿರಲಿ, ಹೆಂಗ ಸಾಗಿರಲಿ, ರಾಜನ ಕಣ್ಣಿಗೆ ಬಿದ್ದುದಾದರೆ ತತ್‌ಕ್ಷಣ ಅವರನ್ನು ಊರಹೊರಗಿರುವ ಒಂದು ಆಳವಾದ ತಗ್ಗಿನಲ್ಲಿ ಚಲ್ಲಿಸಿಬಿಡುತ್ತಾನೆ. ಅಲ್ಲಿ ಅವರು ಉಪವಾಸ ಸತ್ತು ಹೋಗಬೇಕಾ ಗುವದು," ವ್ಯಾಪಾರಿ ತಮ್ಮ ರಾಜನ ವಿಚಾರ ವನ್ನು ಬಣ್ಣಿಸಿ ಹೇಳಿದ.

"ಮತ್ತೆ ಆತನ ಮಂತ್ರಿಗಳು?"

ವ್ಯಾಪಾರಿ ಪ್ರತಿಯೊಬ್ಬ ಮಂತ್ರಿಯ ವಿಚಾರ ವನ್ನೂ ಚಿನಿವಾಲನಿಗೆ ವಿವರಿಸಿ ಹೇಳಿದ. ಮುಂದೆ ಮಾತು ಚಿನಿವಾಲ ಮೋಹಿಸಿದ್ದ ಚಿತ್ರದ ತರು-ಣಿಯ ವಿಷಯಕ್ಕೆ ಬಂತು.

"ಅವಳೇ? ಅವಳು ಆ . . . . . ವಜೀರನ ಪರಿವಾರದವಳು," ವ್ಯಾಪಾರಿ ತಿಳಿಸಿದ.

ಚಿನಿವಾಲ ಕೆಲದಿನಗಳ ವರೆಗೆ ಯೋಚಿಸಿದ. ಯೋಚಿಸಿ ಒಂದು ಉಪಾಯ ಹುಡುಕಿದ. ಕಡೆಗೊಂದು ದಿನ ರಾತ್ರಿ ಮಳೆ ಮುಸಲಧಾರೆ ಯಾಗಿ ಬೀಳುತ್ತಿದ್ದಾಗ, ಗುಡುಗು ಬಿರುಗಾಳಿಯ



ಈತನಾರೋ ತನ್ನ ಆಭರಣಗಳಾಶೆಯಿಂದ ಬಂದ ಕಳ್ಳ, ಕೂಗಿಕೊಂಡರೆ ತನ್ನನ್ನು ಕೊಂದಾನು ಎಂದು ಅವಳು ಅಪಾರ ವೇದನೆಯಾಗುತ್ತಿದ್ದರೂ ಬಾಯಿ ಬಿಗಿಹಿಡಿದುಕೊಂಡಳು.

"ತೆಗೆದುಕೊ ಮಹಾರಾಯಾ. ಇಲ್ಲಿ ನನ್ನ ಎಲ್ಲ ಆಭರಣಗಳಿರುವ ಪೆಟ್ಟಿಗೆಯಿದೆ. ನನ್ನನ್ನು ಕೊಂದರೆ ನಿನಗೆ ಆಗುವ ಲಾಭವೇನು ? ನಿನ್ನನ್ನು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ. ನನಗೆ ಜೀವದಾನ ಮಾಡು," ಎಂದಾಕೆ ಪಿಸುಮಾತಿನಲ್ಲಿ ಚಿನಿವಾಲನನ್ನು ಬೇಡಿಕೊಂಡಳು.

ಆರ್ಭಟ ನಡೆದಿದ್ದಾಗ ಕಳ್ಳರ ಆಯುಧಗಳನ್ನೆಲ್ಲ ಧರಿಸಿಕೊಂಡು ವಜೀರನ ಮನೆಗೆ ಹೊರಟ.

ಗೋಡೆಗೆ ನೂಲೇಣಿಯೊಂದನ್ನು ಇಟ್ಟುಕೊಂಡು ಚಿನಿವಾಲ ವಜೀರನ ಮನೆಯನ್ನೇರಿ ಹಿಂದಿನ ಅಂಗಳಕ್ಕಿಳಿದನು. ಅಂಗಳಕ್ಕೆ ಸುಂದರವಾದ ಚಪ್ಪರವನ್ನು ಹಾಕಿದ್ದರು. ಅಲ್ಲಿ ಚಿನಿವಾಲನ ಅದೃಷ್ಟದಿಂದಲೋ ಎಂಬಂತೆ ವಜೀರನ ದಾಸಿಯರೆಲ್ಲ ಮಲಗಿದ್ದರು. ಪ್ರತಿಯೊಬ್ಬಳಿಗೂ ಪ್ರತ್ಯೇಕವಾದ ಹಾಸಿಗೆಯಿತ್ತು.

ಆ ಹಲವಾರು ಮಂಚಗಳಲ್ಲಿ ಒಂದು ಮಾತ್ರ ಅಮೃತಶಿಲೆಯದಾಗಿತ್ತು. ಅದರ ಮೇಲೆ ಹುಣ್ಣಿವೆಯ ಚಂದ್ರನಂಥ ಮುಖವುಳ್ಳ ತರುಣಿಯೋರ್ವಳು ಪವಡಿಸಿದ್ದಳು. ಚಿನಿವಾಲ ಮಂಚದ ಬಳಿಗೆ ಹೋಗಿ ಆ ತರುಣಿಯ ತಲೆಯ ಪಕ್ಕದಲ್ಲಿ ಕುಳಿತುಕೊಂಡು ಅವಳು ಹೊದೆದುಕೊಂಡಿದ್ದ ಬಂಗಾರದ ನಕ್ಷೆಯುಳ್ಳ ಶಾಲನ್ನು ಸರಿಸಿದನು. ಅವಳ ತಲೆದಿಂಬಿನ ಬುಡದಲ್ಲಿ ಅವಳ ಸಕಲಾಭರಣಗಳಿದ್ದ ಬೆಳ್ಳಿಡಬ್ಬಿಯೊಂದಿತ್ತು.

ತನ್ನಲ್ಲಿದ್ದ ಚಾಕುವಿನಿಂದ ಚಿನಿವಾಲ ಆ ತರುಣಿಯ ಪೃಷ್ಠಕ್ಕೆ ತಿವಿದನು. ರಕ್ತ ಚಿಮ್ಮಿತು. ಆ ತರುಣಿ ಕಂಗಾಲಾಗಿ ಎದ್ದಳು. ತನ್ನ ಸನಿಹದಲ್ಲಿ ಚಿನಿವಾಲನನ್ನು ಕಂಡು ಅಂಜಿಕೆಯಿಂದ ತತ್ತರಿಸಿದ ಅವಳಿಂದ ಕೂಗಿಕೊಳ್ಳುವದೂ ಆಗಲಿಲ್ಲ.

ಚಿನಿವಾಲ ಮಾತಾಡಲಿಲ್ಲ. ಆಭರಣದ ಪೆಟ್ಟಿಗೆಯನ್ನೆತ್ತಿಕೊಂಡು ಹೊರಟುಬಿಟ್ಟನು.

ಮರುದಿನ ಮುಂಜಾನೆ ಎದ್ದು ಆತ ಪೋಷಾಕು ಧರಿಸಿಕೊಂಡು, ಆಭರಣಗಳ ಪೆಟ್ಟಿಗೆಯನ್ನು ಹಿಡಿದುಕೊಂಡು ರಾಜನ ಭೆಟ್ಟಿಗೆ ಹೋದನು.

ನೆಲ ಮುಟ್ಟಿ ಬಗ್ಗಿ ಕುರ್ನಿಸಾತು ಮಾಡಿ ಚಿನಿವಾಲ ಅರಸನಿಗೆ ಹೇಳಿದ: "ಪ್ರಭೋ, ನಾನು ತಮ್ಮ ಅಡಿಯಾಳು, ಹಿತಚಿಂತಕ. ತಮ್ಮ ಆಶ್ರಯ ಬಯಸಿ ಖೋರಾಸಾನದಿಂದ ಬಂದಿದ್ದೇನೆ. ನಾನು ನಿನ್ನೆ ರಾತ್ರಿ ಈ ಊರಿಗೆ ಬಂದೆ. ಆದರೆ ಹೆಬ್ಬಾಗಿಲು ಹಾಕಿದ್ದರಿಂದ ಹೊರಗಡೆಯೇ ಮಲಗಿಕೊಂಡೆ. ಅರ್ಧನಿದ್ದೆ, ಅರ್ಧ ಎಚ್ಚರದ ಸ್ಥಿತಿಯಲ್ಲಿ ನಾನಿದ್ದಾಗ ನಾಲ್ವರು ಸ್ತ್ರೀಯರು ನನ್ನತ್ತ ಬರುತ್ತಿದ್ದುದನ್ನು ಕಂಡೆ. ಒಬ್ಬಳು ಕಸಬರಿಗೆಯ ಮೇಲೆ, ಮತ್ತೊಬ್ಬಳು ಬೀಸಣಿಕೆಯ ಮೇಲೆ ಸವಾರಿ ಮಾಡುತ್ತಿದ್ದರು. ಹಾ! ಈ ನಗರವನ್ನು ಪ್ರವೇಶಿಸಲು ಬಂದಿರುವ ಮಾಟಗಾತಿಯವರಿವರು ಎಂದುಕೊಂಡೆ.

"ಆ ನಾಲ್ವರಲ್ಲಿ ಒಬ್ಬಳು ನನ್ನ ಸಮೀಪಕ್ಕೆ ಬಂದಾಗ ಮೊದಲು ನನ್ನನ್ನು ಕಾಲಿಂದೊದ್ದು ಬಳಿಕ ತನ್ನ ಕೈಲಿದ್ದ ನರಿಯ ಬಾಲದಿಂದ ಹೊಡೆದಳು ನನಗೆ ಅಸಾಧ್ಯ ವೇದನೆಯಾಯಿತು. ಎಲ್ಲಿಲ್ಲದ ಸಿಟ್ಟು ಬಂತು. ಹಿಂದೆಮುಂದೆ

ವಿಚಾರಮಾಡದೆ ಅವಳು ನನ್ನನ್ನು ದಾಟಿ ಮುಂದೆ ಹೋಗುತ್ತಿದ್ದಾಗ ಅವಳ ಪೃಷ್ಠವನ್ನು ನನ್ನ ಕೈಲಿದ್ದ ಚಾಕುವಿನಿಂದ ಇರಿದುಬಿಟ್ಟೆ.

"ಗಾಯವಾದೊಡನೆ ಹೆದರಿದ ಆ ಮಾಟಗಾತಿ ಕಾಲುಕಿತ್ತಳು. ಆ ಗಡಿಬಿಡಿಯಲ್ಲಿ ಈ ಪೆಟ್ಟಿಗೆ ಅವಳ ಕೈಯಿಂದ ಜಾರಿ ಬಿತ್ತು. ಪೆಟ್ಟಿಗೆ ತೆರೆದು ನೋಡಿದೆ, ಅದರ ತುಂಬ ಆಭರಣಗಳಿದ್ದವು.

"ಪ್ರಭೋ, ನನಗೆ ಇವು ಬೇಡ. ತಾವು ಒಪ್ಪಿಸಿಕೊಳ್ಳಬೇಕು. ಊರೂರು, ಅಡವಿಅಡವಿ ಅಲೆಯುವ ನನಗೆ ಈ ಆಭರಣಗಳಿಂದ ಪ್ರಯೋಜನವೇನು? ನಾನು ಇಹದ ಭೋಗಗಳ ಆಸೆಯನ್ನು ಬಿಟ್ಟವನು. ಅಲ್ಲಾನ ಕೃಪೆ ಸಂಪಾದಿಸಲು ಫಕೀರನಾಗಿರುವವನು. ಒಪ್ಪಿಸಿಕೊಳ್ಳಿ."

ಇಷ್ಟೆಂದು ಚಿನಿವಾಲ ಆ ಪೆಟ್ಟಿಗೆಯನ್ನು ರಾಜನ ಸಮ್ಮುಖದಲ್ಲಿ ಇಟ್ಟು ಹೊರಟುಬಿಟ್ಟ. ಆತ ಹೋದೊಡನೆ ರಾಜ ಆ ಆಭರಣಗಳನ್ನು ನೋಡತೊಡಗಿದ. ಅವುಗಳನ್ನು ನೋಡುತ್ತಿದ್ದಾಗೆ ಒಂದು ಹಾರದ ಗುರುತು ಅವನಿಗೆ ಹತ್ತಿತು. ಹೌದು. ಚಿನಿವಾಲ ಹಿಂದಿನ ರಾತ್ರಿ ಗಾಯಗೊಳಿಸಿ ಬಂದಿದ್ದ ದಾಸಿಯ ಒಡೆಯನಾದ ವಜೀರನಿಗೆ ಆ ಹಾರವನ್ನು ಕೊಟ್ಟಿದ್ದ ನೆನಪು ರಾಜನಿಗೆ ಬಂತು. ರಾಜ ತತ್ಕ್ಷಣ ವಜೀರನ್ನು ಕರೆಯಿಸಿದನು.

"ಈ ಹಾರವನ್ನು ನಾನು ನಿನಗೆ ಕೊಟ್ಟಿರಲಿಲ್ಲವೆ?" ರಾಜ ಕೇಳಿದ.

"ಹೌದು ಪ್ರಭೋ, ನಾನದನ್ನು ನನ್ನ ದಾಸಿಗೆ ಕೊಟ್ಟಿದ್ದೆ," ವಜೀರ ಹೇಳಿದ.

"ಕರೆಸವಳನ್ನು."

ರಾಜನ ಅಪ್ಪಣೆಯಂತೆ ವಜೀರನು ದಾಸಿಯನ್ನು ತಂದು ನಿಲ್ಲಿಸಿದ.

"ಈಗ ಅವಳ ಉಡುಪನ್ನು ಬಿಚ್ಚಿ ಅವಳ ಪೃಷ್ಠದ ಮೇಲೆ ಚಾಕುವಿನ ಗಾಯವಿದೆಯೇ ಎಂದು ನೋಡು."

ರಾಜನ ಅಪ್ಪಣೆಯಂತೆ ವಜೀರನು ನೋಡಲು ಅವನಿಗೆ ಚಾಕುವಿನ ಗಾಯ ಸ್ಪಷ್ಟವಾಗಿ ಕಾಣಿಸಿತು. "ಹೌದು ಪ್ರಭೋ, ಗಾಯವಿದೆ."

"ಹಾ! ಸರಿ. ಹಾಗಾದರೆ ಇವಳೊಬ್ಬ ಮಾಟಗಾತಿ. ಆ ಫಕೀರ ಸತ್ಯವನ್ನೇ ಹೇಳಿದ. ಚಲ್ಲಿರಿ ಇವಳನ್ನು ಊರ ಹೊರಗಿನ ತಗ್ಗಿನಲ್ಲಿ. ಅನ್ನ-ನೀರಿಲ್ಲದೆ ಸಾಯಲಿ."

ರಾಜನ ಅಪ್ಪಣೆಯನ್ನು ಸೇವಕರು ಆಗಿಂದಾಗ ಪಾಲಿಸಿದರು.

ಅಂದು ರಾತ್ರಿ ಚಿನಿವಾಲ ಆ ತಗ್ಗಿದ್ದಲ್ಲಿ ಬಂದ. ಒಂದು ಸಾವಿರ ದಿನಾರಗಳಿದ್ದ ಚೀಲ ಅವನ ಹತ್ತಿರ ಇತ್ತು. ತಗ್ಗಿನ ಕಾವಲುಗಾರನೊಂದಿಗೆ ಮಾತಿಗಾರಂಭಿಸಿದ.

ಮಾತಾಡುತ್ತ ಆಡುತ್ತ ಚಿನಿವಾಲ ಹೇಳಿದ, "ಭಾಯಿ, ಪಾಪ ಇಂದು ತಗ್ಗಿನಲ್ಲಿ ಚಲ್ಲಿಕೊಟ್ಟ ಹುಡುಗಿ ನಿಜವಾಗಿಯೂ ನಿಷ್ಪಾಪ ಜೀವಿ. ಅವಳು ಮಾಟಗಾತಿಯಲ್ಲ. ನಾನೇ ಅವಳನ್ನು ಈ ದುರವಸ್ಥೆಗೆ ಗುರಿಮಾಡಿದವನು."

ಚಿನಿವಾಲ ಆ ಕಾವಲುಗಾರನಿಗೆ ತನ್ನ ಕಥೆಯನ್ನೆಲ್ಲ ಹೇಳಿದ. ಮತ್ತೆ, "ಭಾಯಿ, ಇಗೊ, ಸಾವಿರ ದಿನಾರಗಳು. ಆ ಹುಡುಗಿಯನ್ನು ನನಗೊಪ್ಪಿಸು. ನನ್ನ ದೇಶಕ್ಕೆ ಅವಳನ್ನು ಕರೆದೊಯ್ಯುತ್ತೇನೆ. ಆ ಹುಡುಗಿ ಸತ್ತರೆ ನಿನಗೇನು ಲಾಭವಿದೆ ಹೇಳು? ಸಾವಿರ ದಿನಾರಗಳಿದ್ದರೆ ಸಂಸಾರದ ತಾಪತ್ರಯವಾದರೂ ನೀಗೀತು. ಮತ್ತೆ ಒಂದು ಜೀವವುಳಿಸಿದ್ದಕ್ಕಾಗಿ, ಒಬ್ಬನಿಗೆ ಉಪಕಾರಮಾಡಿದ್ದಕ್ಕಾಗಿ ಅಲ್ಲಾನ ಅನುಗ್ರಹವೂ ಸಿಗುವದು. ನಾವಿಬ್ಬರೂ ಖಂಡಿತವಾಗಿ ನಿನ್ನ ಬಗ್ಗೆ ಪ್ರಾರ್ಥನೆ ಸಲ್ಲಿಸುತ್ತೇವೆ," ಎಂದ.

ಆ ಚಿನಿವಾಲನ ಬುದ್ಧಿಕೌಶಲ್ಯ, ಗತ್ತುಗಾರಿಕೆಗಳನ್ನು ಕಂಡು ಕಾವಲುಗಾರ ಪರಮಾಶ್ಚರ್ಯಪಟ್ಟುಕೊಂಡನು. ಸಾವಿರ ದಿನಾರಗಳನ್ನು ತೆಗೆದುಕೊಂಡು ಹುಡುಗಿಯನ್ನು ಮುಕ್ತಮಾಡಿದನು. ಆದರೆ ಒಂದೇ ಒಂದು ಕ್ಷಣವಾದರೂ ಈ ಊರಿನಲ್ಲಿ ಇರಲಾಗದು ಎಂದು ವಿಧಿಸಿದನು.

ಚಿನಿವಾಲನಿಗಾದರೂ ಅಷ್ಟೇ ಬೇಕಾಗಿತ್ತು. ಅತಿ ಅವಸರದಿಂದ ಆತ ಪ್ರಯಾಣ ಮಾಡಿ ಆ ಹುಡುಗಿಯೊಂದಿಗೆ ತನ್ನ ಊರನ್ನು ಸೇರಿದನು.

ಎಲ್ಲರೂ ಬೈಯ್ಯುವ, ಆದರೆ
ಎಲ್ಲರೂ ಸಾಕುವ ಪ್ರಾಣಿ

# ಬೆಕ್ಕು

ಗಂಗಾಧರ



ಯಾವದೇ ಒಂದು ಕೆಲಸಕ್ಕಾಗಿ ನೀವು ಮನೆಯಿಂದ ಹೊರಟಿದ್ದೀರಿ! ನೀವು ಬಾಗಿಲಿಂದ ಹೊರಬೀಳುವದಕ್ಕೂ, ಒಂದು ಬೆಕ್ಕು ಅಡ್ಡ ಹಾಯುವದಕ್ಕೂ ಸರಿಹೋಗುತ್ತದೆ. ನೀವು ಕಲಿತವರಾಗಿದ್ದರೂ ಮೂಢ ನಂಬಿಗೆಗಳನ್ನು ತೆಗಳುವವರಾಗಿದ್ದರೂ ಆಗ ನಿಮ್ಮ ಮನಸ್ಸಿನಲ್ಲಿ "ಎಲಾ! ಎಂಥ ಅಪಶಕುನ!" ಎಂಬ ವಿಚಾರ ಸುಳಿದುಹೋಗುತ್ತದೆ. ನಮ್ಮ ಸಂಸ್ಕಾರವು ಇದಕ್ಕೆ ಕಾರಣವಾಗಿದೆ. ಬಹುಕಾಲದಿಂದ ಅನೇಕ ಸಂಗತಿಗಳು ಅಪಶಕುನವೆಂಬ ನಂಬಿಗೆ ನಮ್ಮಲ್ಲಿ ಮೂಡಿಬಂದಿರುತ್ತದೆ. ನಮ್ಮ ವಿವೇಕ ಅದನ್ನು ಒಪ್ಪದಿದ್ದರೂ, ಮನಸ್ಸು ಅಂಥ ಸಂದರ್ಭಗಳಲ್ಲಿ ಅಳುಕುತ್ತದೆ. ಬೆಕ್ಕು ಅಡ್ಡ ಬಂದರೆ ಅದೊಂದು ಅಪಶಕುನವೆಂಬ ನಂಬಿಗೆ ಸಾಮಾನ್ಯವಾಗಿ ಎಲ್ಲ ದೇಶಗಳಲ್ಲೂ ಇರುವದೆನ್ನಬಹುದು.

ಹದಿಮೂರನೆಯ ಶತಮಾನದ ಹಂಸದೇವನು ತನ್ನ "ಮೃಗಪಕ್ಷಿ-ಶಾಸ್ತ್ರ" ದಲ್ಲಿ ಬೆಕ್ಕುಗಳು ಸ್ವಾರ್ಥಿ ಮತ್ತು ಕ್ಷುಲ್ಲಕ ಮನಸ್ಸಿನ ಪ್ರಾಣಿಗಳು ಎಂದು ವರ್ಣಿಸಿದ್ದಾನೆ. ಅವನ್ನು ತೀರ ಕೆಳವರ್ಗದ ಪ್ರಾಣಿ-ಪಕ್ಷಿಗಳಲ್ಲಿ ಸೇರಿಸಿ ಅವು ತಾಮಸಿಯಾದ ಅಧಮ ಜಾತಿಯವು ಎಂದಿದ್ದಾನೆ. ಹಂಸದೇವನು ಬೆಕ್ಕುಗಳಲ್ಲಿ ಐದು ಬಗೆಗಳನ್ನು ಹೇಳಿದ್ದು ಅವುಗಳ ಗುಣ-ಸ್ವಭಾವವನ್ನು ವರ್ಣಿಸಿದ್ದಾನೆ.

**ಬಿಡಾಲ:** ಕಪ್ಪು ಚುಕ್ಕೆಗಳುಳ್ಳ, ತೀಕ್ಷ್ಣ ದೃಷ್ಟಿಯ ಇಲಿ ಮತ್ತು ಹಾಲಿನ ಮೇಲೆ ಜೀವಿಸುವ ಬೆಕ್ಕು.

**ಮಾರ್ಜಾಲ:** ಎತ್ತರವಾಗಿ, ದಪ್ಪವಾಗಿ ಬೆಳೆಯುವ, ಮೈಮೇಲೆ ಪಟ್ಟಿಗಳಿರುವ, ಹರಿತವಾದ ಉಗುರುಗಳಿರುವ, ಕರ್ಕಶವಾಗಿ 'ಮ್ಯಾಂವ್' ಎಂದು ಕೂಗುವ ಸಾಮಾನ್ಯವಾಗಿ ಮಾಂಸದ ಮೇಲೆಯೇ ಜೀವಿಸುವ ಬೆಕ್ಕು.

**ಓತು:** ಕಪ್ಪು ಬಣ್ಣದ, ಮೈಮೇಲೆ ಚುಕ್ಕೆಗಳಿರುವ, ಕಾಣಲು ಭೀಕರವಾಗಿರುವ ಮತ್ತು ಚಿಕ್ಕ ಪ್ರಾಣಿಗಳಿಗೆ ಯಮಸ್ವರೂಪಿಯಾಗಿರುವ ಕಾಡು ಬೆಕ್ಕು.

**ಆಋುಭುಕ್:** ಎತ್ತರವಾದ ಹಳದಿಮಿಶ್ರಿತ ಕಂದುಬಣ್ಣದ ಮೈಯ್ಯ, ರಾತ್ರಿ ಸಂಚರಿಸುವ, ಸಾಮಾನ್ಯವಾಗಿ ಸಾಧುವಾಗದ ಬೆಕ್ಕು.

**ಮೋದಕ:** ದೊಡ್ಡಮೀಸೆಯ, ಚುರುಕು ಕಿವಿಗಳ ಪುನುಗು ಎಂಬ ಸುವಾಸಿಕ ದ್ರವ್ಯ ವನ್ನು ಕೊಡುವ ಪುನುಗಿನ ಬೆಕ್ಕು.

ವಿಷ್ಣುಶರ್ಮನ ಪಂಚತಂತ್ರದಲ್ಲಿ ಬರುವ ಬೆಕ್ಕು ಬಹು ಕಪಟಿ. ಪವಿತ್ರ ಗಂಗಾನದಿಯ ತೀರದಲ್ಲಿ ವಾಸಿಸುವ ಈ ಬೆಕ್ಕು ವಿರಕ್ತ ಜೀವನದ ನಟನೆ ಮಾಡುತ್ತದೆ ; ಸೂರ್ಯನತ್ತ ನೋಡುತ್ತ, ಹಿಂಗಾಲಿನ ಮೇಲೆ ನಿಂತು ಮುಂಗಾಲ ನ್ನೆತ್ತಿ, ಕಣ್ಣು ಮಿಳುಕಿಸುವದು; ಬಾಯಿಬಿಟ್ಟರೆ ನೀತಿ ವಚನಗಳನ್ನು ಹೇಳುವದು. ನಿರುಪದ್ರವಿ ವೃದ್ಧನ ಪಾತ್ರವನ್ನು ನಟಿಸಿ ತನ್ನ ಬಳಿ ನ್ಯಾಯ ತೀರ್ಪಿಗಾಗಿ ಬಂದಿದ್ದ ಮೊಲ ಮತ್ತು ತಿತ್ತಿರಿ ಪಕ್ಷಿಗಳನ್ನು ಇದು ತಿನ್ನುತ್ತದೆ.

ಅನಂತರದ ಕಾಲದಲ್ಲಿ ಸೋಮದೇವನೆಂಬಾತನು ಬರೆದ ಕಥಾಸರಿತ್ಸಾಗರದಲ್ಲಿ ಇಂಥದೇ ಕಪಟಿ ಬೆಕ್ಕೊಂದರ ಕಥೆ ಇದೆ. ಅದರಲ್ಲಿಯೆ ಗೌತಮಪತ್ನಿ ಅಹಲ್ಯೆಯ ಕಥೆಯೂ ಇದೆ. ಇಂದ್ರನು ಅಹಲ್ಯೆಯ ಸೌಂದರ್ಯಕ್ಕೆ ಮರುಳಾಗುತ್ತಾನೆ. ಅವಳು ಅವನನ್ನು ಕಾಮಿಸುತ್ತಾಳೆ.

ಒಮ್ಮೆ ಇವರಿಬ್ಬರು. ಪ್ರೇಮಸಲ್ಲಾಪದಲ್ಲಿ ಮಗ್ನರಾಗಿದ್ದಾಗ ಅಹಲ್ಯೆಯಲ್ಲಿ ಸಂಶಯ ತಾಳಿದ್ದ ಗೌತಮನು ಅಕಸ್ಮಾತ್ತಾಗಿ ಬರುತ್ತಾನೆ. ಆದರೆ ಅವನು ಬರುವಷ್ಟರಲ್ಲಿ ಅಂಜಿಕೆಯಿಂದ ಕಂಗಾಲಾದ ಇಂದ್ರನು ಒಂದು ಬೆಕ್ಕಿನ ರೂಪ ತಾಳುತ್ತಾನೆ. "ಯಾರಿದ್ದಾರೆ ಇಲ್ಲಿ ?" ಎಂದು ಗೌತಮ ಕೇಳಿದ್ದಕ್ಕೆ ''ಇಲ್ಲಿ ಒಂದು ಬೆಕ್ಕು ಮಾತ್ರ ಇದೆ.'' ಎಂದು ಅಹಲ್ಯೆ ಉತ್ತರವೀಯುತ್ತಾಳೆ. ಅವಳು ಪ್ರಾಕೃತ ಭಾಷೆಯಲ್ಲಿ ಮಾತಾಡುತ್ತಾಳೆ. ಪ್ರಾಕೃತ ಭಾಷೆಯಲ್ಲಿ "ಮಜ್ಜಾರ" ಎಂದರೆ ಬೆಕ್ಕು ಎಂದೂ ವಿಟ ಎಂದೂ ಅರ್ಥವಾಗುತ್ತದೆ. ಗೌತಮನಿಗೆ ಸತ್ಯ ಸಂಗತಿ ಹೊಳೆದು ಅವನು ಅಹಲ್ಯೆಗೆ ಶಾಪವೀಯುತ್ತಾನೆ. ಅವಳು ಕಲ್ಲಾಗುತ್ತಾಳೆ.

ಬಳಿಕ ಈ ಕಥಾಸರಿತ್ಸಾಗರದಲ್ಲಿ, ಒಂದು ಬೆಕ್ಕು, ಮೂರ್ಖ ಗುರು ಮತ್ತು ಅವನ ಶಿಷ್ಯರು ಇವರ ಕಥೆ ಬರುತ್ತದೆ. ಓರ್ವ ಬ್ರಾಹ್ಮಣ ತನಗೆ ಹೇಳಿದ್ದ ರೀತಿಯಲ್ಲಿ ಈ ಶಿಕ್ಷಕನು ಬೆಕ್ಕಿನ ವರ್ಣನೆ ಮಾಡಿ ಒಂದು ಬೆಕ್ಕನ್ನು ತರುವಂತೆ ತನ್ನ ವಿದ್ಯಾರ್ಥಿಗಳಿಗೆ ಹೇಳುತ್ತಾನೆ. ಈ ವರ್ಣನೆಯ ಬಲದಿಂದ ವಿದ್ಯಾರ್ಥಿಗಳು ಬೆಕ್ಕಿನ ಬದಲು ಕಾಜಿನಂಥ ಕಣ್ಣುಳ್ಳ, ಕಂದು ಬೂದಿಬಣ್ಣದ, ಚಿಗರಿಯ ಚರ್ಮ ಧರಿಸಿದ್ದ ಓರ್ವ ಬ್ರಾಹ್ಮಣ ಹುಡುಗನನ್ನು ಹಿಡಿದುತಂದು ಗುರುವಿನ ಎದುರು ನಿಲ್ಲಿಸುತ್ತಾರೆ. ಆ ಮೂರ್ಖ ಗುರುವು ಕೂಡ ಈ ಹುಡುಗ ಒಂದು ಸುಂದರ ಬೆಕ್ಕೆಂದು ಭಾವಿಸುತ್ತಾನೆ. ಬಳಿಕ ಆ ಹುಡುಗನ ತಂದೆ ಬಂದು ಬೆಕ್ಕು ಚತುಷ್ಪಾದ ಪ್ರಾಣಿ ಎಂದು ಈ ಶಿಕ್ಷಕ ಮತ್ತು ವಿದ್ಯಾರ್ಥಿಗಳಿಗೆ ತಿಳಿಸಿಕೊಡುತ್ತಾನೆ.

ರಾಮಾಯಣದಲ್ಲಿ ಹನುಮಂತನು ಲಂಕೆಗೆ ದಾಳಿಯಿಡುವ ಪೂರ್ವದಲ್ಲಿ ಬೆಕ್ಕಿನ ರೂಪ ತಾಳಿ ಲಂಕಾ ನಗರದಲ್ಲೆಲ್ಲ ಅಡ್ಡಾಡಿ ಬಂದನು ಎಂದು ಹೇಳಿದೆ.

ಕರ್ನಾಟಕದ ಒಂದು ಜಾನಪದ ಕಥೆಯಲ್ಲಿ ಬೆಕ್ಕು ತಾನು ಹುಲಿಯ ವಂಶದ್ದೆಂದು, ಕ್ಷುಲ್ಲಕ ಪ್ರಾಣಿಯಲ್ಲವೆಂದು ಹೇಳುತ್ತದೆ. ಕರ್ನಾಟಕದ ಇನ್ನೊಂದು ಜಾನಪದ ಕಥೆಯಲ್ಲಿ ಬೆಕ್ಕು ಹುಲಿಗೆ ತಾನು ಬಲ್ಲ ಎಲ್ಲ ಯುಕ್ತಿಗಳನ್ನು ಹೇಳಿಕೊಡುತ್ತದಾದರೂ ಹುಲಿ ತನ್ನ ಮೇಲೆ ಅಕಸ್ಮಾತ್ತಾಗಿ ಏನಾದರೂ ದಾಳಿಮಾಡಿದರೆ ತಪ್ಪಿಸಿಕೊಳ್ಳಲೆಂದು ಅದಕ್ಕೆ ಗಿಡಹತ್ತುವ ರೀತಿಯನ್ನು ಮಾತ್ರ ಹೇಳಿಕೊಡುವದಿಲ್ಲ.

ಹಾಲು ಕಂಡರೆ ಓಡಿಹೋಗುವ ತೆನ್ನಾಲಿ ರಾಮಕೃಷ್ಣನ ಬೆಕ್ಕಿನ ಕಥೆಯನ್ನಂತೂ ಸಕಲರೂ ಬಲ್ಲರು. ಸಂಥಾಲಿ ಕಥೆಯೊಂದರಲ್ಲಿ '' ಒಂದು ಬೆಕ್ಕು ಮತ್ತು ಕೆಲ ಹುಲಿಗಳು ಬಹು ಸ್ನೇಹದಿಂದ ಒಂದೆಡೆ ಇರುತ್ತಿದ್ದವು. ಒಮ್ಮೆ ಬೆಕ್ಕು ಬೆಂಕಿಯ ಕೊಳ್ಳಿಯನ್ನು ತರಲು ಬಹಳ ತಡಮಾಡಲು ಹುಲಿಗಳು ಹಸಿವು ತಾಳಲಾರದೆ ಹಸಿ ಮಾಂಸವನ್ನು ತಿಂದವು'' ಎಂದು ಹೇಳಿದೆ. ಇದರಲ್ಲಿ ಹುಲಿಗಳು ಹಸಿ ಮಾಂಸವನ್ನು ತಿನ್ನುವ ಕಾರಣವನ್ನೂ ಹುಲಿಗಳಿಗೂ

ಬೆಕ್ಕುಗಳಿಗೂ ವೈರತ್ವವೇಕಿದೆ ಎಂಬುದನ್ನೂ ವಿವರಿಸಿದೆ. ಬೆಕ್ಕು ಕಣ್ಣು ಮುಚ್ಚಿದಾಗ ತನ್ನಂತೆ ಜಗತ್ತಿಗೂ ಏನೂ ಕಾಣಿಸುವದಿಲ್ಲ ಎಂದು ತಿಳಿಯುತ್ತದೆ, ಎಂಬರ್ಥದ ಗಾದೆಯೊಂದು ನಮ್ಮಲ್ಲಿದೆ.

ಹುಲಿಯನ್ನು ತನ್ನ ವಾಹನವನ್ನಾಗಿ ಮಾಡಿಕೊಂಡಿರುವ ದುರ್ಗಾದೇವಿಯ ಅವತಾರವೇ ಎಂದು ಭಾವಿಸಲ್ಪಡುತ್ತಿರುವ ಶಾಸ್ತಿ ದೇವತೆಯ ವಾಹನವು ಬೆಕ್ಕು. ಈ ದೇವತೆ ಮಕ್ಕಳನ್ನು ಕಾಪಾಡುವವಳು ಎಂದು ತಿಳಿಯುತ್ತಾರೆ. ಬಂಗಾಲಿ ದಂತಕಥೆಯೊಂದರಲ್ಲಿ "ಒಮ್ಮೆ ಒರ್ವ ತರುಣಿ ಏನನ್ನೊ ಕದ್ದು ತಿಂದು ಕಳವನ್ನು ಬೆಕ್ಕಿನ ಮೇಲೆ ಹೊರಿಸಿದಳು. ಶಾಸ್ತಿ ಈ ಸುಳ್ಳು ಆರೋಪಕ್ಕಾಗಿ ಸಿಟ್ಟಿಗೆದ್ದು ಆ ತರುಣಿಯ ಎಂಟು ಮಕ್ಕಳು ಸಾಯಲಿ ಎಂದು ಶಾಪವಿತ್ತಳು. ನಂತರ ಆ ತರುಣಿ ಪಶ್ಚಾತ್ತಾಪದಿಂದ ಬೆಕ್ಕನ್ನು ಪೂಜಿಸಲು ಶಾಸ್ತಿ ದೇವಿ ಸತ್ತ ಮಕ್ಕಳನ್ನೆಲ್ಲ ಬದುಕಿಸಿ ಕೊಟ್ಟಳು" ಎಂದು ಹೇಳಿದೆ.

ಮೃಗ-ಪಕ್ಷಿ-ಶಾಸ್ತ್ರದಲ್ಲಿ ಬೆಕ್ಕು ಅಪಶಕುನದ ಪ್ರಾಣಿ ಎಂದು ಹೇಳಿದೆ. ನಮ್ಮಲ್ಲಿ ಯಾವುದೊಂದು ಕಾರ್ಯಕ್ಕೆಂದು ಹೊರಟಾಗ ಬೆಕ್ಕು ಅಡ್ಡ ಬಂದರೆ ಕಾರ್ಯ ಕೆಡುತ್ತದೆ ಎಂಬ ನಂಬಿಗೆಯಿದೆ. ಕಳ್ಳರಲ್ಲಿ ಕೂಡ ಈ ನಂಬಿಗೆಯಿದೆಯೆನ್ನುತ್ತಾರೆ. ಬೆಕ್ಕನ್ನು ಕೊಂದರಂತೂ ಮಹಾ ಪಾಪವೆನ್ನುತ್ತಾರೆ. ಬೆಕ್ಕನ್ನು ಅಕಸ್ಮಾತ್ತಾಗಿ ಕೊಂದವನು ಕೂಡ ಬಂಗಾರದ ಬೆಕ್ಕನ್ನು ದಾನಮಾಡಿ ಪಾಪ ಪರಿಹಾರ ಮಾಡಿಕೊಳ್ಳಬೇಕು ಎಂದು ಹೇಳಲಾಗಿದೆ.

ಈ ವರೆಗೆ ಹೇಳಿದ್ದು ಬೆಕ್ಕಿನ ಅಪಕೀರ್ತಿಯಾಯಿತು. ಅದಕ್ಕೆ ಸತ್ಕೀರ್ತಿಯೂ ಇಲ್ಲದಿಲ್ಲ.

ಬೆಕ್ಕಿನ ಶ್ರವಣೇಂದ್ರಿಯ ಮನುಷ್ಯನಿಗಿಂತ ತುಂಬ ತೀಕ್ಷ್ಣವಾಗಿರುತ್ತದೆ. ಮನುಷ್ಯನಿಗೆ ತಿಳಿಯದಿರುವ ಎರಡು ಸ್ವರಗಳಲ್ಲಿಯ ಸೂಕ್ಷ್ಮ ಭೇದವೂ ಬೆಕ್ಕಿಗೆ ತಿಳಿಯುತ್ತದೆ.

ನ್ಯೂಕ್ಯಾಸಲದಲ್ಲಿ ಒಮ್ಮೆ ಒಂದು ಅದ್ಭುತ ಬೆಕ್ಕಿದ್ದಿತು. ಅದು ನದಿಗೆ ಹೋಗಿ ಮೀನಗಳನ್ನು ಹಿಡಿದು ತನ್ನ ಒಡೆಯನಿಗೆ ಕೊಡುತ್ತಿತ್ತು. ಇತರ ಬೆಕ್ಕುಗಳಿಗೆ ಮೀನು ಹಿಡಿಯುವ ಕಲೆಯನ್ನು ಇದು ಕಲಿಸಿಕೊಡುತ್ತಿತ್ತಲ್ಲದೆ ಅವುಗಳಿಂದ ಎರಡು ಮೀನುಗಳನ್ನು ಗುರುದಕ್ಷಿಣೆಯೆಂದು ಪಡೆಯುತ್ತಿತ್ತು !

ಫ್ರಾನ್ಸದಲ್ಲಿಯ ಒಂದು ಮಠದಲ್ಲಿದ್ದ ಇನ್ನೊಂದು ಬೆಕ್ಕು ಬಹು ಕುಶಾಗ್ರ ಬುದ್ಧಿಯದಾಗಿತ್ತು. ಗಂಟೆ ಬಾರಿಸಿದೊಡನೆ ಅಡಿಗೆ ಭಟ್ಟ ಹೊರಗೆ ಹೋಗುತ್ತಾನೆಂಬುದು ಅದಕ್ಕೆ ಗೊತ್ತಾಯಿತು. ಆ ಬೆಕ್ಕು ಮೇಲೆ ಜಿಗಿದು ಹಗ್ಗ ಜಗ್ಗಿ ಗಂಟೆಬಾರಿಸಿತು. ಅಡಿಗೆಯವ ಹೊರಗೆ ಹೋಗಲು ತಾನು ಅಡಿಗೆ ಮನೆಗೆ ಹೋಗಿ ಹೊಟ್ಟೆತುಂಬಾ ತಿಂದಿತು. ಮೂರು ನಾಲ್ಕು ಸಲ ಈ ರೀತಿ ನಡೆಯಲು ಈ ಬೆಕ್ಕಿನ ತಂತ್ರ ಬೆಳಕಿಗೆ ಬಂತು. ಅದನ್ನು ಆ ಮಠದಿಂದ ಓಡಿಸಿದರು.

ಪ್ರಾಚೀನ ಕಾಲದಲ್ಲಿ ಇಜಿಪ್ತದಲ್ಲಿ ಬೆಕ್ಕನ್ನು ದೇವರೆಂದು ಮನ್ನಿಸಿ ಅದರ ಪೂಜೆ ಮಾಡುತ್ತಿದ್ದರು. ಬೆಕ್ಕನ್ನು ಕೊಂದವನಿಗೆ ದೇಹಾಂತ ಶಿಕ್ಷೆ ವಿಧಿಸಲ್ಪಡುತ್ತಿತ್ತು. ಬೆಕ್ಕು ಸತ್ತಾಗ ಆ ಮನೆಯವರು ಸೂತಕ ಪಾಲಿಸಬೇಕಾಗುತ್ತಿತ್ತು. ಸತ್ತ ಬೆಕ್ಕನ್ನು ವೈಭವದಿಂದ ಹೂಳುತ್ತಿದ್ದರು.



ಮಿಸ್ ಹೆಚ್. ಎಂಬ ಫ್ರೆಂಚ ಕುಮಾರಿ ಅಡವಿಯಲ್ಲಿ ವಾಸಿಸುತ್ತಿದ್ದಾಳೆ. ಪುರುಷರ ದರ್ಶನವಾಗಬಾರದು ಎಂಬುದೇ ಅವಳ ಈ ಅರಣ್ಯವಾಸದ ಉದ್ದೇಶವಾಗಿದೆ.

ಶಿಷ್ಯ ಆನಂದನ ಒತ್ತಾಯಕ್ಕೆ ಬುದ್ಧ ಹೊಸದಿಲ್ಲಿಗೆ ಬಂದ,
ಆದರೆ ಅಲ್ಲಿ ಆವನೇನು ಕಂಡ?

# ಹೊಸದಿಲ್ಲಿಯಲ್ಲಿ ತಥಾಗತ

ಅಮೃತಲಾಲ ನಾಗರ

ಚೈತ್ರ ಪೂರ್ಣಿಮೆಯ ರಾತ್ರಿ ಕುಶೀನಾರದಲ್ಲಿರುವ ಬುದ್ಧದೇವನ ಮಲಗಿದ್ದ ಮೂರ್ತಿಯ ಪದತಲದಲ್ಲಿ ಕುಳಿತು ಆನಂದ ಹೇಳಿದ:

" ಒಡೆಯಾ, ಈಗ ಸಮಯ ಬಂದಿದೆ. ''

ವೃಷಭದೇಹಧಾರಿಯಾದ ಆನಂದನನ್ನು ಬುದ್ಧದೇವ ಕೇಳಿದ:

" ಎಂಥ ಸಮಯ, ಆವುತ್ತ" ?

" ದಿಲ್ಲಿಗೆ ಹೋಗುವ ಸಮಯ, ಸ್ವಾಮಿ! ''

ಸ್ವಲ್ಪ ಕಾಲ ಬುದ್ಧದೇವ ಮೌನವಾಗಿ ಆಲೋಚಿಸಿ ಅನಂತರ ಹೇಳಿದ:

'' ಆವುತ್ತ, ಯುಗದ ಪ್ರಭಾವದಿಂದ ನಾನು ಜಡನಾಗಿದ್ದೇನೆ. ನನ್ನ ನೆನಪು ಸಮಾಧಿಯಲ್ಲಿ ಅಡಗಿದೆ. ಆನಂದ, ಈ ನೆನಪನ್ನು ನಿರ್ವಾಣ ನಿದ್ರೆಯಿಂದ ಎಚ್ಚರಿಸು. ಆಗ ಮಾತ್ರ ನಿನ್ನ ಮಾತಿನ ವಿಚಾರ ಮಾಡಲು ನನಗೆ ಸಾಧ್ಯವಾಗುವುದು. "

ಆನಂದ ನುಡಿದ:

'' ಎಚ್ಚರಾಗಿರಿ, ದೇವ, ಅಂದು ಪರಿನಿರ್ವಾಣಕ್ಕಾಗಿ ವೈಶಾಲಿಯನ್ನು ತೊರೆದು ಈ ಕುಗ್ರಾಮ ಕುಶೀನಾರದಲ್ಲಿ ಪ್ರವೇಶಿಸಬಯಸಿದಾಗ ನನಗೆ ನಿಮ್ಮ ವಿಚಾರ ಸರಿಬರಲಿಲ್ಲ. ಅದನ್ನು ನೆನಪಿಗೆ ತನ್ನಿರಿ; ನಿಮ್ಮ ಪರಿನಿರ್ವಾಣಕ್ಕೆ ಯಾವುದಾದರೂ ಒಂದು ಮಹಾ ನಗರವೇ ತಕ್ಕುದಾದ ಸ್ಥಳ ಎಂದು ನನಗನಿಸಿತ್ತು. ಚಂಪಾ, ರಾಜಗೃಹ, ಶ್ರಾವಸ್ತಿ, ಸಾಕೇತ, ಕೋಶಾಂಬಿ, ವಾರಾಣಸೀ ಇಂಥ ಮಹಾ ನಗರಗಳಲ್ಲಿ ತಮಗೆ ಧನವಂತರಾದ ಕ್ಷತ್ರಿಯರು, ಬ್ರಾಹ್ಮಣರು, ವೈಶ್ಯರು, ಶಿಷ್ಯರಿದ್ದರು. ಅವರು ತಮ್ಮ ಶರೀರ ಪೂಜೆ ಮಾಡಬೇಕು ಎಂದು ನನ್ನ ಬಯಕೆ ಇದ್ದಿತು. ''

" ಹೌದು ಆವುತ್ತ, ನೆನಪಿಗೆ ಬಂತು. ಆನಂದ, ನಿನ್ನ ಸ್ಮರಣಶಕ್ತಿಯನ್ನೂ ಜಾಗೃತಗೊಳಿಸು. ಆಗ ನಾನು ನಿನಗೆ ಹೇಳಿದ್ದೆ : ತಥಾಗತನ ಶರೀರ ಪೂಜೆಯಲ್ಲಿ ಮಗ್ನನಾಗಿ ನೀನು ತೊಡಕಿಗೆ ಸಿಕ್ಕದಿರು; ಸತ್ಯವಸ್ತುವಿಗಾಗಿ ಪ್ರಯತ್ನ ಮಾಡು; ತನಗೆ ತಾನೇ ಶರಣಾಗು; ತನಗಿಂತ ಬೇರೆಯವರಿಗೆ ಶರಣೆನ್ನಬೇಡ; ಅಪ್ಪದೀಪೋ ಭವ."

" ಒಡೆಯ, ಅದೇ ಆತ್ಮದೀಪವನ್ನು ಹೊತ್ತಿಸಿ ಕುಳಿತಿದ್ದೆ. ಆದರೆ ತಮ್ಮ ಎರಡೂವರೆ ಸಾವಿರ ವರ್ಷದ ಜಯಂತಿಯನ್ನು ಆಚರಿಸಲು ಭಾರತ ಸರಕಾರ ಬೆಳಗಿಸಿದ ದೀಪಗಳಿಂದ ನನ್ನ ಆತ್ಮದೀಪವು ಕಂದಿ ಚಂಚಲವಾಗುತ್ತಿರುವಂತಿದೆ. "

ಹೀಗೆ ನುಡಿಯುತ್ತಿರುವಾಗ ಆನಂದನ ಕಣ್ಣುಗಳು ತುಂಬಿಬಂದವು. ವೃಷಭದೇಹಧಾರಿಯಾದ ಆನಂದ ತನ್ನ ಮುಂಗಾಲುಗಳನ್ನು ಜೋಡಿಸಿ ಗದ್ಗದಕಂಠದಿಂದ ಮುಂದುವರಿಸಿದನು: '' ಈ ಜನ್ಮದಲ್ಲಿ ಕೈಗಳಿಲ್ಲವೆಂದು ಕಾಲುಗಳನ್ನೇ

ಹಿಂದೀ " ಜ್ಞಾನೋದಯ " ದಿಂದ

ಮುಗಿದು ಬೇಡುತ್ತೇನೆ. ಒಡೆಯ, ನನ್ನ ವಿನಂತಿಯನ್ನು ಮನ್ನಿಸಿ ಕೋಸಲಕ್ಕಾಗಲಿ, ಕಾಶಿಗಾಗಲಿ ಹೋಗದಿದ್ದರೆ ಬೇಡ ನೀವೊಮ್ಮೆ ದಿಲ್ಲಿಗೆ ಅವಶ್ಯ ಹೋಗಬೇಕು."

"ದಿಲ್ಲಿಯಲ್ಲಿ ಏನಿದೆ, ಆವುತ್ತ?"

"ದಿಲ್ಲಿಯಲ್ಲಿ ತಮ್ಮ ಪೂಜೆಯಾಗುವುದು. ತಮ್ಮ ಎರಡುಸಾವಿರದ ಐನೂರನೇ ಜಯಂತಿಯನ್ನು ಆಚರಿಸಲಾಗುತ್ತಿದೆ. ನಿಮ್ಮ ಸೇವಕನಾನಿರುವಂತೆ ಗಾಂಧಿದೇವನ ಶಿಷ್ಯನಾದ ನೆಹರೂ ತಮ್ಮನ್ನು ಎಬ್ಬಿಸುತ್ತಿರುವನು. ಈ ಸಮಯದಲ್ಲಿ ನನ್ನ ಬೇಡಿಕೆಯನ್ನು ಮನ್ನಿಸಿ ತಾವು ದಿಲ್ಲಿಗೆ ನಡೆದರೆ ನನ್ನ ಕೀರ್ತಿಯೂ ಹಬ್ಬುವುದು" ಆನಂದ ಉತ್ತರವಿತ್ತ.

"ಆವುತ್ತ, ನೀನು ತುಂಬ ಹಟಮಾರಿ. ಆಗಲಿ, ನಾನು ದಿಲ್ಲಿಗೆ ತೆರಳುವೆನು; ಆದರೆ ನೀನು ಹೋಗಲಾರೆ."

ಆನಂದನೊಮ್ಮೆ ನಿಟ್ಟುಸಿರೆಳೆದು, "ನಾನಿಲ್ಲಿಯೇ ಆತ್ಮದೀಪವನ್ನು ಬೆಳಗಿ ತಾವು ದಿಲ್ಲಿಯಲ್ಲಿ ಅವತರಿಸುವುದನ್ನು ನೋಡುತ್ತಿರುವೆನು. ಆದರೆ ದಿಲ್ಲಿಯಲ್ಲಿ ತಥಾಗತನಿಗೆ ನಡೆಯುವ ಸ್ವಾಗತದ ರನ್ನಿಂಗ ಕಾಮೆಂಟರಿಯನ್ನು ಕೇಳಲು ತಮ್ಮ ಧನಿಕ ಶಿಷ್ಯನೊಬ್ಬನ ಮೂಲಕ ಒಂದು ರೇಡಿಯೋ ಸೆಟ್ಟನ್ನು ಕಳಿಸುವ ಕೃಪೆಯಾಗಲಿ."

ಹೊಸದಿಲ್ಲಿಯ ಸೆಕ್ರೆಟೇರಿಯಟ್ಟಿನಲ್ಲಿ ಕೆಲಸ ಮಾಡುವ ಕ್ಲಾರ್ಕ ಮಿಸ್ಟರ ಸೋಹನಲಾಲ ತನ್ನ ಶ್ರೀಮತಿಯೊಂದಿಗೆ ಚಹಾ ಕುಡಿಯುತ್ತಿದ್ದವನು ಕೋಣೆಯ ಮೂಲೆಯಲ್ಲಿ ಮಡಗಿದ ಪೆಟ್ಟಿಗೆಗಳ ರಾಶಿಯನ್ನು ನೋಡಿದ. ಹುಬ್ಬು ಗಂಟಿಕ್ಕಿ, "ಈ ಮೂಲೆ ಚೆನ್ನಾಗಿಲ್ಲ; ಇದರ ಅಲಂಕಾರ ಸ್ವಲ್ಪ ಕಡಮೆಯಿದೆ" ಎಂದು ಆತ ಶ್ರೀಮತಿಗೆ ನುಡಿದ.

ತಾನೂ ಚಹಾ ಗುಟುಕರಿಸಿ ಪ್ರೇಮಲತೆ ಹೇಳಿದಳು, "ನನಗೂ ಹಾಗೇ ಎನಿಸುತ್ತದೆ. ಮಾರ್ಕೆಟ್ಟಿಗೆ ಹೋಗಿ ಏನಾದರೂ ಅಲಂಕಾರ ವಸ್ತುವನ್ನು ಕೊಂಡು ತರೋಣ. ಆದರೂ ಈ ದರಿದ್ರ ಕೋಣೆಗೇನು ಮಣ್ಣಿನ ಸಿಂಗಾರ! ನಮ್ಮ ಹಣೇಬರಹವೇ ಕೆಟ್ಟ; ಅಲ್ಲಾ, ಒಂದು ಬಂಗಲೆ, ಒಂದು ಮೋಟರ, ಡ್ರಾಯಿಂಗ ರೂಮ...... ಏನೇನೂ ಇಲ್ಲ." ಅವಳ ಚೆಂದುಟಿಗಳು ಬಿಗಿದವು. ಅವಳು ತಣ್ಣಗೆ ನಿಟ್ಟುಸಿರಿಟ್ಟಳು.

"ಡೋಂಟ್ ವರಿ, ಡಾರ್ಲಿಂಗ್. ಸಮಾಜವಾದ ಬಂದಾಗ ಈ ನೌಕರಶಾಹಿ ಅಳಿದು ನಾವೂ ಬಂಗಲೆಯಲ್ಲಿಯೇ ವಾಸಿಸುವಂತಾಗುವದು," ಸೋಹನಲಾಲ ಅವಳನ್ನು ಸಂತೈಸಿದ.

ಸೋಹನಲಾಲ, ಪ್ರೇಮಲತಾ ಇಬ್ಬರೂ ಆಧುನಿಕರು, ಓದಿ ಬರೆದ ಸುಶಿಕ್ಷಿತರು; ಅವರ ಮೇಲೆ ಹೊಸದಿಲ್ಲಿಯ ಪ್ರಭಾವ ಬಿದ್ದಿತ್ತು.

ಸ್ವಾತಂತ್ರ್ಯದ ಬಳಿಕ ಹೊಸದಿಲ್ಲಿ ಹೊಸ ತಲೆಗಳಿಂದ ಹೊಸದಾಗಿದೆ. ಚೀನರು, ರಶಿಯನರು, ಬ್ರಹ್ಮದೇಶದವರು, ಇರಾಣೀಯರು ಮುಂತಾದವರು ಅಲ್ಲಿ ಹೆಜ್ಜೆಹೆಜ್ಜೆಗೆ ಕಾಣುವಂತಿದ್ದಾರೆ. ತ್ರಿವೇಂದ್ರಂನಿಂದ ಶ್ರೀನಗರದವರೆಗಿನ, ಕಚ್ಛದಿಂದ ನಾಗಾ ಗುಡ್ಡಗಳ ವರೆಗಿನ, ಗೀತನೃತ್ಯಗಳನ್ನು ಅಲ್ಲಿ ದಿನವಹಿ ಕೇಳಬಹುದು, ನೋಡಬಹುದು.

ಹೊಸದಿಲ್ಲಿಯ ಅಧಿಕಾರಸ್ಥರ ಬೂಟಿನ ಕೆಳಗೆ ನವೆಯುವ "ಕಲ್ಚರ (ಸಂಸ್ಕೃತಿವಂತ) ಜಾತಿ"ಯ ನಮ್ಮೀ ಸೋಹನಲಾಲ ಸಾಹೇಬರೂ ಅವರ ಮೇಮ ಸಾಹೇಬರೂ ಸೆಕ್ರೆಟರಿ (ಜಾಯಿಂಟ್, ಅಡಿಶನಲ್ ಮತ್ತು ಅಂಡರ್ ಸಹಿತ) ಜನರ ಬಂಗಲೆಗಳ ಇರವು-ತೆರವು

ಗಳನ್ನು ನೋಡಿ, ಅವುಗಳ ಮಾದರಿಯಲ್ಲಿ ತಮ್ಮ ಸೀ-ಕ್ಲಾಸ್ ಬಿಡಾರಗಳನ್ನು ಸಿಂಗರಿಸುತ್ತಿದ್ದರು. ಬಸ್ಸಿನಲ್ಲಿ, ಸೈಕಲಿನಲ್ಲಿ ಸವಾರಿ ಮಾಡುವಾಗ ನಿಟ್ಟುಸಿರು ಬಿಡುತ್ತ ಅವರು ಮೋಟಾರು ಕಾರುಗಳ ಕನಸು ಕಾಣುತ್ತಿದ್ದರು. ಮೇಮ ಸಾಹೇಬರು ನಕಲಿ ರೇಶ್ಮೆ ರವಿಕೆ, ಅಗ್ಗದ ಲಿಪ್‌ಸ್ಟಿಕ್, ನಕಲಿ ಮುತ್ತು ಬಂಗಾರಗಳ ಆಭರಣ ತೊಟ್ಟು ಪಟ್ಟೇವಾಲ ಚಪರಾಸಿಗಳು ಇಲ್ಲದ್ದಕ್ಕೆ ತಮ್ಮ ಪತಿಸಾಹೇಬರುಗಳ ಮೇಲೆಯೇ ರೇಗಾಡುತ್ತ ಹೊಟ್ಟೆ ತಣ್ಣಗೆ ಮಾಡಿಕೊಳ್ಳುತ್ತಿದ್ದರು. ಕಳ್ಚರವಾದಿ ಯುಗದಲ್ಲಿ ಕಳ್ಚರದ ಗೌರಿಶಂಕರಕ್ಕೇರಲು ಬೇಕಾದ ಧನ ಸಂಪತ್ತಿಲ್ಲದ್ದರಿಂದ ಅವರ ಬಾಯಲ್ಲಿ ಸಮಾಜವಾದಿ + ಸಾಮ್ಯವಾದಿ + ಹಿಂದೂವಾದಿ + ಪ್ರಾಂತವಾದಿ + ಜಾತಿವಾದಿ= ಬಕವಾದಿ ವಿಚಾರಗಳು ಪ್ರಕಟವಾಗುತ್ತಿದ್ದವು.

ಸೋಹನಲಾಲನು ಚಹದ ಕಪ್ಪನ್ನಿಟ್ಟು ಸಿಗರೇಟನ್ನು ಕೈಗೆತ್ತಿಕೊಂಡನು. ಅವನ ಮುಖ ಬಾಡಿ ಹೋಗಿದ್ದಿತು. ಒಮ್ಮೆ ಸಿಗರೇಟಿನ ಹೊಗೆಯನ್ನು ಸಾಧ್ಯವಾದಷ್ಟು ಒಳಗೆ ಎಳೆದು ಅವನು ಆಫೀಸರ ಸಂಸ್ಕೃತಿಯ ಬಗ್ಗೆ ಮಾತನಾಡತೊಡಗಿದ.

ಮೇಮ ಸಾಹೇಬ ಪ್ರೇಮಲತೆ ಭರ್ತ್ಸನೆಯ ದನಿಯಲ್ಲಿ ಹೇಳಿದಳು. " ಈ ಬಡಬಡಿಕೆ ಸಾಕು. ಹೊರಡುತ್ತಿದ್ದರೆ ಏಳಿ. ಅಲಂಕಾರ ವಸ್ತುಗಳನ್ನು ತರೋಣ. ಲಾರ್ಡ್ ರಾಮಾ, ಲಾರ್ಡ್ ಕೃಷ್ಣಾ, ಲಾರ್ಡ್ ಬುದ್ಧಾ ಇವರ(ಮೂರ್ತಿ)ನ್ನು ಕೊಂಡರಾಗಬಹುದು ಎನ್ನಿಸುತ್ತದೆ ನನಗೆ; ಈ ಕಾಲಕ್ಕೆ ಇವೇ ನಿಜವಾದ ಫ್ಯಾಶನ್ನುಗಳು. "

' ಲಾರ್ಡ್ ರಾಮಾ ? ಛೇ ಛೇ, ಆತ ಪ್ರಾಲಿಟೇರಿಯಟ್ ( ಕೂಲಿಕಾರ) ದೇವ. ಭಾರತದಲ್ಲಿ ಯಾರು ಬೇಕಾದರೂ ರಾಮ ರಾಮ ಎನ್ನುತ್ತಾರೆ. ಆದ್ದರಿಂದ ಅವನು ಲಾರ್ಡ್ ಹೇಗಾಗುತ್ತಾನೆ? ಲಾರ್ಡ್ ಬುದ್ಧಾನನ್ನು ಕೊಳ್ಳುವುದೇ ಸರಿ. ಇಂದಿನ ಫ್ಯಾಶನ್ನೆಂದರೂ ಅದುವೆ. ಆತನ ಎರಡು ಸಾವಿರದೈನೂರನೆಯ ಜಯಂತಿಯಲ್ಲಿ ನಮ್ಮ ಪ್ರಧಾನ ಮಂತ್ರಿಗಳಿಗೂ ಬಹಳ ಅಭಿರುಚಿಯಿದೆ. "

ಅಣುಪರಮಾಣುಗಳಲ್ಲಿ ಅಡಗಿದ್ದ ಬುದ್ಧದೇವನು ಈ ಮಾತುಗಳನ್ನು ಕೇಳಿ ಮುಗುಳುನಕ್ಕನು.

ಸೋಹನಲಾಲ ಮತ್ತು ಪ್ರೇಮಲತೆಯರು ಚಪ್ಪಲ, ಸೀರೆ, ಬ್ಲಾವುಜ ಮತ್ತು ಲಾರ್ಡ್ ಬುದ್ಧಾನನ್ನು ಕೊಂಡುಕೊಂಡು ಹಿಂದಿರುಗುತ್ತಿದ್ದರು.

'' ಇಂದು ನಿಮ್ಮಿಂದಾಗಿ ಇಷ್ಟು ಹಣ ಖರ್ಚಾಯಿತು, " ಎಂದಳು ಪ್ರೇಮಲತೆ.

'' ನಾನೇನು ಈ ಸೀರೆ ಬ್ಲಾವುಜ ಚಪ್ಪಲುಗಳನ್ನು ತೊಡುವುದಿಲ್ಲ" ಎಂದು ಸೋಹನಲಾಲ ಹೇಳಿದ.

" ನಿಮಗೆ ಸ್ವಲ್ಪವೂ ಬುದ್ಧಿಯಿಲ್ಲ, ಇದ್ದರೆ ಈ ತಿಂಗಳ ಕೊನೆಗೆ ಬುದ್ಧನನ್ನು ಕೊಳ್ಳುವ ಮಾತೇ ಏಳುತ್ತಿರಲಿಲ್ಲ" ಎಂದು ಗಟ್ಟಿಯಾಗಿ ಹೇಳುತ್ತ ಪ್ರೇಮಲತೆ ಬಿರುಸಾಗಿ ಕಾಲುಹಾಕಿದಳು.

" ಆದರೆ ಡಾರ್ಲಿಂಗ್, ನನ್ನ ಬುದ್ಧನಿಗೆ ಕೇವಲ ಎಂಟಾಣೆಯಷ್ಟೆ?"

"ಎಂಟಾಣೆಯಾದರೇನಂತೆ? ಅದು ಹಣ ಅಲ್ಲವೇನು? ಈ ಎಂಟಾಣೆಗಾಗಿ ನನ್ನ ಲಕ್ಷ ರೂಪಾಯಿ



ಗಳು ಹಾಳಾದವು. ನಿಮಗೆ ರವಷ್ಟು ಬುದ್ಧಿಯಿಲ್ಲ. ಇದ್ದರೆ, ಬುದ್ಧನ ಮಾತೇಕೆ ತೆಗೆಯಬೇಕಿತ್ತು?" ಎಂದು ದನಿಯೇರಿಸಿ "ಅಂಗಡಿ-ಬೀದಿಯಲ್ಲಿ ವಾದ ಮಾಡುವುದಕ್ಕೆ ನಿಮಗೆ ನಾಚಿಕೆಯಾದರೂ ಆಗುವುದಿಲ್ಲವೇನು?" ಪ್ರೇಮಲತಾ ಗಟ್ಟಿಯಾಗಿ ಮಾತನಾಡಿದ್ದನ್ನು ರಸ್ತೆಯಲ್ಲಿ ಹೋಗುವ ಇತರರೂ ಕೇಳಿ ಮುಗುಳು ನಕ್ಕರು.

ಸೋಹನಲಾಲನ ತಲೆ ನಾಚಿಕೆಯಿಂದ ಬಾಗಿತು. ಆದರೆ ಕ್ಲಾರ್ಕನಾದ ಮೇಲೆ "ಬೈಗುಳ ಪ್ರೂಫ'' ನಾಗಿ ಇರಬೇಕಾಗುತ್ತದೆ. ಜನರ ಗೇಲಿ ಮಾಡುವ ಮುಖಗಳನ್ನು ನೋಡಿ ಸೋಹನಲಾಲ ಮುಖ ಮುದುಡಿಸಿಕೊಂಡು ತನ್ನ ಶ್ರೀಮತಿಯೊಡನೆ ಮತ್ತಷ್ಟು ವೇಗವಾಗಿ ಕಾಲು ಹಾಕಿದ.

ದಾರಿಯ ಪಕ್ಕದ ರೆಫ್ಯೂಜಿ ರೆಸ್ಟೂರಾದಿಂದ ಬುದ್ಧ ಜಯಂತಿಯ ವಿಶೇಷ ರೇಡಿಯೋ ಪ್ರಸಾರವು ಕೇಳಿಬರುತ್ತಿತ್ತು. ''ಬುದ್ಧಂ ಶರಣಂ ಗಚ್ಛಾಮಿ.''

ಈ ಕಾಲದಲ್ಲಿ ಬುದ್ಧನಿರುತ್ತಿದ್ದರೆ ತಾನಾದರೂ ಕಚೇರಿ ಮತ್ತು ಶ್ರೀಮತಿಯನ್ನು ಬಿಟ್ಟು "ಬುದ್ಧಂ ಶರಣಂ ಗಚ್ಛಾಮಿ'' ಎನ್ನುತ್ತಿದ್ದೆ. ಭಾರತವು ಸ್ವತಂತ್ರವಾದರೂ ತನಗೆ ಸ್ವಾತಂತ್ರ್ಯ ದೊರೆತಿಲ್ಲ, ಎಂದು ಆಲೋಚಿಸುತ್ತ ಸೋಹನಲಾಲ ದುಃಖತಾಳಿದ.

ಪ್ರಕಟವಾಗಲು ಇದೇ ತಕ್ಕ ಸಮಯ ಎಂದು ಹೊಸದಿಲ್ಲಿಯ ವಾತಾವರಣದಲ್ಲಿ ಲೀನನಾಗಿದ್ದ ಬುದ್ಧ ಬಗೆದ. ರಾಷ್ಟ್ರಪತಿಭವನದಲ್ಲಿ ಪ್ರಕಟವಾಗುವುದಕ್ಕಿಂತ ಈ ಪೀಡಿತ ಜೀವಗಳ ನಡುವೆ ಮೈದೋರುವದು ಅವನಿಗೆ ಇಷ್ಟವಾಗಿದ್ದಿತು.

ಶ್ರೀಮತಿ ಮತ್ತು ಅಧಿಕಾರಿಗಳಿಂದ ನಿತ್ಯ ನೋಯಿಸಲ್ಪಡುತ್ತಿದ್ದ ಆಧುನಿಕ ಸುಸಂಸ್ಕೃತ ಸೋಹನಲಾಲನ ಕೈಯಲ್ಲಿದ್ದ ಬುದ್ಧ ದೇವನನ್ನು ಕಟ್ಟಿದ ಕಾಗದದ ಪುಡಿಕೆಗೆ ಒಮ್ಮೆಲೆ ಜೀವ ಬಂದು ಅದು ಎದ್ದು ಹಾರಿತು.

"ಹಾ! ನನ್ನ ಬುದ್ಧ!" ಸೋಹನಲಾಲ ಗಾಬರಿಯಿಂದ ಕೂಗಿಕೊಂಡನು. ಬುದ್ಧನ ಪುಡಿಕೆ ನೆಲಕ್ಕೆ ಬೀಳುವದನ್ನು ತಡೆಯಲು ಅವನು ಜಗಿದನು. ಆಗ ಅವನ ಕಂಕುಳಲ್ಲಿದ್ದ ಸೀರೆ ಬ್ಲಾವುಜಗಳ ಕಟ್ಟು ನೆಲಕ್ಕೆ ಉರುಳಿತು. "ಹಾ! ನನ್ನ ಬ್ಲಾ—" ಶ್ರೀಮತಿಯವರ ಮಾತು ಅರ್ಧಕ್ಕೇ ನಿಂತಿತು. ದಾರಿಹೋಕರು ಈ ಕಡೆಗೆ ನೋಡಿದರು. ಸೋಹನಲಾಲನನ್ನು ಅಚ್ಚರಗೊಳಿಸಿ ಆ ಕಾಗದದ ಪೊಟ್ಟಣವು ನೆಲಕ್ಕೆ ಉರುಳದೆ ಮೇಲಕ್ಕೆ ಏರಿತು; ಅದರಿಂದ ಪ್ರಕಾಶ ಹೊರಹೊಮ್ಮಿತು.

ಎಲ್ಲರೂ ನೋಡುತ್ತಿದ್ದಂತೆ ಕಾಷಾಯವಸನಧಾರಿ ಭಗವಾನ್ ಬುದ್ಧ ಅಭಯ ಮುದ್ರೆಯೊಂದಿಗೆ ಪ್ರತ್ಯಕ್ಷನಾದ!

ಹೌದು, ಹುಬಹೂ ಮ್ಯೂಜಿಯಂದಲ್ಲಿಟ್ಟ ಮೂರ್ತಿಯಂತೆಯೇ ಇದ್ದ ಅವನು. ಆದರೆ ಅವನ ತಲೆಯ ಮೇಲೆ ಪ್ರತಿಮೆಯಲ್ಲಿಯಂತೆ ಗುಂಗುರುಗೂದಲು ಇರಲಿಲ್ಲ. ಭಿಕ್ಷುಗಳ ತಲೆಯಂತೆ ಅವನ ತಲೆಯೂ ನುಣ್ಣನೆ ಬೋಳಿಸಿದ್ದಿತು.

ಆಕಾಶದಲ್ಲಿ ಹೂಮಳೆ ಸುರಿಯುತ್ತಿದ್ದಂತೆಯೇ "ಬುದ್ಧಂ ಶರಣಂ ಗಚ್ಛಾಮಿ" ಎಂಬ ಶರಣ ಮಂತ್ರ ಕೇಳಬಂತು. ಸಾರಿಗೆಯೆಲ್ಲ ತಡೆದು ಬಿತ್ತು. ರಸ್ತೆಯಲ್ಲಿ ಜನಸಂದಣಿ ಸೇರಿ ಬುದ್ಧದೇವನ ಕಾಲುಗಳಿಗೆ ಬೀಳತೊಡಗಿತು.

ಸೋಹನಲಾಲ ಎಲ್ಲವನ್ನು ನೋಡಿದ. ಅವನ ಪ್ರಸಂಗಾವಧಾನ ಜಾಗೃತವಾಯಿತು. ಪ್ರಧಾನ ಮಂತ್ರಿಯನ್ನು ಇಂಥ ಸಮಯದಲ್ಲಿ ಕರೆಯಬೇಕೆಂದು ಆತ ಫೋನಿನ ಕಡೆಗೆ ಧಾವಿಸಿದ. ಅವನ ಬುದ್ಧ ಕುಳ್ಳನಿಗೆ ಚಂದ್ರನನ್ನು ಮುಟ್ಟಲು ಒಳ್ಳೆಯ ಅವಕಾಶವನ್ನೇ ಕಲ್ಪಿಸಿ ಕೊಟ್ಟಿದ್ದ.

ಹತ್ತೇ ನಿಮಿಷಗಳಲ್ಲಿ ದಿಲ್ಲಿ ಗೊಂದಲದಿಂದ ತುಂಬಿತು.

"ಇದೇನೋ ಸ್ಟಂಟ್."

"ಸುದ್ದಿ ಸತ್ಯವೆಂದು ಗೊತ್ತಾಗಿದೆ. ಈ ರಹಸ್ಯಮಯ ಭಾರತದಲ್ಲಿ ಏನೂ ನಡೆಯಬಹುದು."

"ತನ್ನ ಮೂರ್ತಿಯಂತೆ ಬುದ್ಧ ಸುಂದರನಿರುವನೋ ಇಲ್ಲವೋ ನೋಡಬೇಕಾಗಿದೆ."

"ಅವನ ವಿಚಾರ ನಮ್ಮ ಇಂದಿನ ರಾಷ್ಟ್ರೀಯ ಅಂತಾರಾಷ್ಟ್ರೀಯ ಧೋರಣೆಗೆ ಹೊಂದುತ್ತದೆಯೋ ಎಂಬುದನ್ನು ವಿಚಾರಿಸಬೇಕಾಗಿದೆ.''

ಹೀಗೆ ಜನರು ಮನಸಿಗೆ ಬಂದಂತೆ ಆಡತೊಡಗಿದ್ದರು.

ಅತ್ತ ಬುದ್ಧದೇವನ ಸುತ್ತ ಜನಸಮ್ಮರ್ದವು ಹೆಚ್ಚುತ್ತಲೇ ನಡೆದಿತ್ತು. ಸೇಠರೂ ಲಕ್ಷ್ಮೀಪುತ್ರರೂ ತಮ್ಮ ಕಾರುಗಳೊಂದಿಗೆ ಬಂದು ಬುದ್ಧನನ್ನು ಸ್ವಾಗತಿಸಿ ಅತಿಥಿಯಾಗಿ ಕರೆಯಲು ಆತುರರಾಗಿದ್ದರು.

ವೈಶಾಲಿಯ ರಾಜರಸ್ತೆಯಲ್ಲಿ ಲಿಚ್ಛವಿ ಕುಮಾರರ ರಥದ ಹಿಂದೆ ಅಂಬಾಪಾಲಿಯ ರಥ ಸಾಗಿದಂತೆ ವಿನಯನಗರಿಯ ಸೋಹನಲಾಲ ಬುದ್ಧದೇವನನ್ನು ಹಿಂಬಾಲಿಸಿದ್ದ. ಸೇಠರು ನುಗ್ಗಿನಲ್ಲಿ ಸಿಕ್ಕಿ ಸೋಹನಲಾಲನನ್ನು ನೋಡಿ ತಿರಸ್ಕಾರದಿಂದ, "ತಾನೇನು ತನ್ನ ಯೋಗ್ಯತೆಯೇನು! ಸರಿಯತ್ತ" ಎಂದು ಹಂಗಿಸಿದರು.

ಅವನೂ ಸುಮ್ಮನಿರಲಿಲ್ಲ. "ಸಮಾಜವಾದ ಬಂದಿದೆ. ಈಗ ಭಗವಂತನ ಗುತ್ತಿಗೆ ನಿನಗೊಬ್ಬನಿಗೇ ಇಲ್ಲ, ತಿಳಿಯಿತೆ?"

ನೊಂದ ಜೀವಿಗೆ ತೃಪ್ತಿಕೊಡಲೆಂದು ಬುದ್ಧ ವಿನಯ ನಗರಿಗೆ [ಬಡ ಕಾರಕೂನರ ವಸತಿಗಳಿರುವ ದಿಲ್ಲಿಯ ಭಾಗ] ಬಂದ. ಆತನ ದಯೆಯಿಂದ ವಿನಯ ನಗರವು ವೈಭವನಗರವೇ ಆಯಿತು. ಇಷ್ಟರಲ್ಲಿ ಎಲ್ಲ ಕಟ್ಟುನಿಟ್ಟುಗಳನ್ನು ಹರಿದು ರಾಷ್ಟ್ರಪತಿ ಹಾಗೂ ಪ್ರಧಾನಿಗಳು ಅಲ್ಲಿಗೆ ಬಂದು ರಾಷ್ಟ್ರಪತಿ ಭವನದಲ್ಲಿ ವಿಹರಿಸಲು ಭಗವಂತನನ್ನು ಕೇಳಿಕೊಂಡರು.

"ಆವುತ್ತ, ಒಂದು ದಿನ ಇಲ್ಲಿಯೇ ಇರುವೆನು. ರಾಷ್ಟ್ರಪತಿ ಭವನಕ್ಕೆ ಜನತೆಯು ಬರಲಾರದು" ಸೋಹನಲಾಲನನ್ನು ನೋಡುತ್ತ ಬುದ್ಧದೇವ ನುಡಿದ.

''ಭಗವಂತನನ್ನು ಭಕ್ತರಿಂದ ಬೇರೆ ಇರಿಸುವ ಕ್ರಮವು ತಮ್ಮ ದೇಶದಲ್ಲಿ ಇನ್ನೂ ಇಲ್ಲ ಒಡೆಯ; ತಾವು ಖಂಡಿತವಾಗಿ ಚಿತ್ತೈಸಬೇಕು."

ರಾಷ್ಟ್ರಪತಿಯ ಈ ವಿನಯಶೀಲ ಬೇಡಿಕೆಯನ್ನು ಬುದ್ಧದೇವ ಸ್ವೀಕರಿಸಿದ.

ಸೋಹನಲಾಲ ಮತ್ತು ಶ್ರೀಮತಿಯವರ ಮುಖ ಕಂದಿತು. ಆದರೆ ಬುದ್ಧದೇವ ಅವರಲ್ಲಿ ಇಷ್ಟು ಹೊತ್ತಾದರೂ ಇದ್ದನಲ್ಲ!

ಶ್ರೀಮತಿ ಪ್ರೇಮಲತಾ ಗಂಡನ ಕಿವಿಯಲ್ಲಿ ಏನೋ ಊದಿದಳು. ಕೂಡಲೇ ಸೋಹನಲಾಲ ಬುದ್ಧದೇವನ ಕಿವಿಯಲ್ಲಿ ವಿನಂತಿಸಿಕೊಂಡ:

"ತಾವು ನೆಹರೂಗೆ ಹೇಳಿ ನನ್ನನ್ನು ಸೆಕ್ರೆಟರಿ, ಇಲ್ಲವಾದರೆ ಜಾಯಿಂಟ, ಅಡಿಶನಲ್, ಅಂಡರ.....'' ಅವನ ಪ್ರಾರ್ಥನೆ ಮುಗಿಯಲಿಲ್ಲ.

''ಭಗವಾನ್ ಬುದ್ಧನ ಕಿವಿಯಲ್ಲಿ ಮಾತಾಡುತ್ತೀರಲ್ಲ, ಏನು ಅಸಭ್ಯ ವರ್ತನೆ! ಹೊರಡಿಲ್ಲಿಂದ" ಸಿಟ್ಟುಗೊಂಡ ನೆಹರೂ ನುಡಿದರು.

ಪಾಲಂ ನಿಲ್ದಾಣ ತುಂಬಿತು. ದೇಶವಿದೇಶದಿಂದ ಜನರು ಅಲ್ಲಿ ಬಂದಿಳಿದರು. ದಿಲ್ಲಿ ತುಂಬ ಕಾಷಾಯಾಂಬರಧಾರಿಗಳ ಸಂತೆಯೇ ನೆರೆಯಿತು. ತ್ರಿಪಿಟಕಾಚಾರ್ಯ ರಾಹುಲ ಸಾಂಕೃತ್ಯಾಯನ, ಕವಿನಾಗಾರ್ಜುನ, ಮಾರ್ಕ್ಸವಾದೀ ರಾಮವಿಲಾಸ ಶರ್ಮಾ, ಪಂಡಿತ ಬನಾರಸೀದಾಸ ಚತುರ್ವೇದಿ ಎಲ್ಲರೂ ಬಂದರು. ಗಾಂಧೀಜಿಯವರ ಚಿತ್ರದಂತೆಯೇ ಬುದ್ಧನ ಚಿತ್ರವನ್ನು ತೆಗೆಯಲು ಜೈನೇಂದ್ರರು ಸಿದ್ಧರಾದರು. ಇಡೀ ದೇಶದ ಸಾಹಿತ್ಯಲೋಕದಲ್ಲಿಯೇ ಹೊಸ ಬಿರುಗಾಳಿಯೆದ್ದಿತು.

"ಯಶೋಧರಾ" ಬರೆದ ರಾಷ್ಟ್ರಕವಿ "ಯಶೋಧರಾ–ಸರ್ವಸ್ವ" ಮಹಾಕಾವ್ಯ ಬರೆಯಲು ಕುಳಿತ.

ಪತ್ರಿಕಾಪರಿಷತ್ತು ಸೇರಿಸಲ್ಪಟ್ಟಿತು. ಬುದ್ಧದೇವನಿಗೆ ಹಲವಾರು ಪ್ರಶ್ನೆಗಳನ್ನು ಕೇಳಲಾಯಿತು. 'ಸ್ಟಾಲಿನ್ನರನ್ನು ರಶಿಯದವರು ಖಂಡಿಸಿದ್ದನ್ನು ತಾವು ಯಾವ ದೃಷ್ಟಿಯಿಂದ ನೋಡುತ್ತೀರಿ? ಶಾಂತಿಗಾಗಿ ವಿನಂತಿಸಲು ಐಸೆನಹಾವರರನ್ನು ಭೆಟ್ಟಿಯಾಗಲು ಅಮೇರಿಕೆಗೆ ತಾವು ತೆರಳ

ಬಯಸುವಿರಾ? ತಮ್ಮ ಮತ್ತು ನೆಹರೂರವರ ಪಂಚಶೀಲಗಳನ್ನು ತುಲನೆ ಮಾಡಿರಿ. ಸಾರಿಪುತ್ತ ಮತ್ತು ಮಹಾಮೊಗ್ಗಲಾಯನರ ಪವಿತ್ರ ಅಸ್ಥಿಗಳ ಬಗ್ಗೆ ತಮ್ಮ ವಿಚಾರವೇನು? ಮುಂಬಯಿ ಮಹಾರಾಷ್ಟ್ರಕ್ಕೆ ದೊರೆಯಬೇಕೆ? ಬೇಡವೇ? ಉತ್ತರ ಪ್ರದೇಶದ ಸೇಲ್ಸಟ್ಯಾಕ್ಸ ಕಾಯಿದೆ ಬಗ್ಗೆ ಏನು ಹೇಳುತ್ತೀರಿ?'' ಅನಂತ ಪ್ರಶ್ನೆಗಳು ಆತನ ಮುಂದೆ ಇದ್ದವು.

ಹಲವು ವಿಶ್ವವಿದ್ಯಾಲಯಗಳು ಬುದ್ಧದೇವನಿಗೆ ಡಾಕ್ಟರೇಟ್ ಕೊಡಬಯಸಿದವು. ನೋಬೆಲ್ ಶಾಂತಿ ಬಹುಮಾನ ಹಾಗೂ ಸ್ಟಾಲಿನ ಶಾಂತಿ ಬಹುಮಾನ ಕೊಡುವ ಮಾತುಕತೆಗಳೂ ನಡೆದುವು. ಸ್ಟಾಲಿನರ ಹೆಸರೀಗ ಕೆಟ್ಟಿರುವುದರಿಂದ ಅವರ ಹೆಸರಿನ ಪ್ರಶಸ್ತಿ ಕೊಡಬೇಕಾಗಿಲ್ಲವೆಂದು ಕೆಲ ಪ್ರಭಾವಶಾಲಿಗಳು ಸೂಚಿಸಿದರು.

ಸರಕಾರೀ ಕಾರ್ಯಕ್ರಮಗಳು ತಯಾರಾದವು. ಬೆಳಗ್ಗೆ ರಾಜಘಾಟಿಗೆ ನಡೆದು ಗಾಂಧೀ ಸಮಾಧಿಯ ಮೇಲೆ ಬುದ್ಧ ಹೂಮಾಲೆಯನ್ನಿರಿಸುವನು. ಸಂಜೆ ನಗರ ಸಭೆಯ ವತಿಯಿಂದ ಬುದ್ಧನಿಗೆ ಮಾನಪತ್ರ ಸಮರ್ಪಣೆ. ಇದೇ ಹೊತ್ತಿಗೆ ರಾಷ್ಟ್ರಪತಿ ಭವನದಿಂದ ಬುದ್ಧನ ಮೆರವಣಿಗೆ. ಹಿಂದೀ ಉರ್ದು ಮುಶೈರಾ, ರೇಡಿಯೋ ಕವಿಸಮ್ಮೇಳನ, ಉದಯ ಶಂಕರರ ನೃತ್ಯ, ಸುಬ್ಬುಲಕ್ಷ್ಮಿಯ ಸಂಗೀತ, ಪ್ರಾದೇಶಿಕ ನೃತ್ಯಪ್ರದರ್ಶನ. ಇದಾದನಂತರ ನೀಲೋಖೇಡಾ, ಭಾಕ್ರಾ ನಂಗಲ, ಚುರ್ಕ, ಚಿತ್ತರಂಜನ ಮೊದಲಾದ ಕಡೆಗಳಿಗೆ ಭಗವಂತನ ಭೆಟ್ಟಿ ಮತ್ತು ಕೊನೆಗೆ ಪ್ರಧಾನಮಂತ್ರಿಯೊಡನೆ ಪಂಚಶೀಲದ ಸಂಯುಕ್ತ ಒಪ್ಪಂದ ಪತ್ರಕ್ಕೆ ಸಹಿ ಹಾಕುವುದು. ಆ ಮೇಲೆ ರೇಡಿಯೋ ಮೂಲಕ ಬೀಳ್ಕೊಡುವ ಸಂದೇಶ.

ಮತ್ತು ಬುದ್ಧ ಭಗವಂತನಿಂದ ದಿಲ್ಲಿಯಲ್ಲಿ ದೊಡ್ಡ 'ಕಲ್ಚರ' (ಸಂಸ್ಕೃತಿ) ಹಬ್ಬಿತು. ಅಜಂತದ ಸಂಸ್ಕೃತಿಯ ವೇಷವನ್ನು ಲಿಪ್‌ಸ್ಟಿಕ್ ಸಂಸ್ಕೃತಿಯೊಡನೆ ಬೆರಸಿದ, ಶ್ರೀಮತಿ ಸಾಹೇಬರುಗಳು ಖೀರಿನ ಪಾತ್ರೆಗಳೊಡನೆ ಬುದ್ಧನೆಡೆಗೆ ಬರತೊಡಗಿದರು. ಕಲ್ಚರಿನ ಕಾರಣದಿಂದ ಭಗವಂತನಿಗೆ ಅವಕಾಶವೇ ದೊರೆಯುತ್ತಿರಲಿಲ್ಲ. ಬಹುಜನಹಿತ ಮತ್ತು ಬಹುಜನ ಸುಖಕ್ಕಾಗಿ ಲೋಕಕ್ಕೆ ಉಪದೇಶವೀಯಲು ಆತ ಬಯಸುತ್ತಿದ್ದ. ಆದರೆ ಜನರು ಆತನ ಫೋಟೊ, ಕೈಬರಹ ಪಡೆಯಲು, ಆತನಿಗೆ ಜಯಕಾರ ಹಾಕಲು ಮತ್ತು ಚಹಾ, ಉಪಹಾರ, ಊಟಗಳಿಗಾಗಿ ತಮ್ಮಲ್ಲಿಗೆ ಕರೆಯಲು ಬಯಸುತ್ತಿದ್ದರು. ಇದರಿಂದ ಬುದ್ಧದೇವನು ತೀರಾ ಸುಸ್ತಾಗಿಹೋದ.

ಆತ ಒಮ್ಮೆಲೇ ಮಹಾ ಜನಸಂದಣಿಯಿಂದ ಮಾಯವಾಗಿ ರಾಜಘಾಟಿನ ಸಮಾಧಿಯಲ್ಲಿ ಲೀನನಾದನು.

ಇತ್ತ ಕುಶೀನಗರದಲ್ಲಿ ಆನಂದ ರೇಡಿಯೋ ರನಿಂಗ ಕಾಮೆಂಟರಿ ಕೇಳಲೆಂದು ಆತುರನಾಗಿ ಎಷ್ಟೋ ದಿನ ಕಿವಿತೆರೆದು ಕುಳಿತೇ ಇದ್ದ!

**ವೈರದಿಂದ ವೈರಿಯನ್ನು ಶಾಂತಗೊಳಿಸುವುದು ಎಂದಿಗೂ ಸಾಧ್ಯವಲ್ಲ; ವೈರಿಯನ್ನು ಪ್ರೇಮದಿಂದ ಗೆಲ್ಲಬಹುದೆಂದು ಸನಾತನರ ಮತ.**

—ಧಮ್ಮಪದ

ಸಹರಾ ಮರುಭೂಮಿಯ ಒಂದು
ಮುಸ್ಲಿಂ ಜನಾಂಗದ ಜೀವನ

# ಈ ನಾಡಿನಲ್ಲಿ ಗಂಡಸರಿಗೇ ಘೋಷಾ !

ಬುರಖಾ ಧರಿಸುವ ಗಂಡಸರಿದ್ದಾರೆ ಎಂದರೆ ನಿಮಗೆ ಆಶ್ಚರ್ಯವೆನಿಸೀತು. ಹುಡುಗಾಟಿಕೆಯೆನಿಸೀತು. ಕೆಲವು ಜನಾಂಗಗಳಲ್ಲಿ ಹೆಂಗಸು ಬುರಖಾ ಧರಿಸುವ ಪದ್ಧತಿಯಿದೆಯೆಂಬುದನ್ನು ಬಲ್ಲ ನಿಮಗೆ ಹಾಗೆನಿಸುವದು ಸಹಜ. ಆದರೆ ಟ್ಯುರೆಗ್ ಜನಾಂಗದವರಲ್ಲಿ ಗಂಡಸರು ಬುರಖಾ ಧರಿಸುತ್ತಾರೆ. ಅವರು ಧರಿಸುವ ಬುರಖಾ



ನೀಲಿ ಬಣ್ಣದ್ದು ಇಲ್ಲವೆ ಬಿಳಿಯ ಬಣ್ಣದ್ದಿರುತ್ತದೆ.

ಸಹರಾ ಮರುಭೂಮಿ ಪ್ರದೇಶದಲ್ಲಿ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಅಡ್ಡಾಡುತ್ತ ಜೀವಿಸುವ ಟ್ಯುರೆಗ್ ಜನಾಂಗದಲ್ಲಿ ಹುಡುಗನಿಗೆ ಹದಿನೆಂಟು ವರ್ಷವಾದೊಡನೆ ಬುರಖಾ ಧರಿಸುವ ಪಾಳಿ ಬರುತ್ತದೆ. ಬುರಖಾ ಧರಿಸಿದ ನಂತರವೆ ಅವನು ಗಂಡಸು ಎನಿಸಿಕೊಳ್ಳುತ್ತಾನೆ. ಒಮ್ಮೆ ಬುರಖಾ ಧರಿಸಿದ ನಂತರದಲ್ಲಿ ಅವನು ತಿರುಗಿ ಸಾಯುವವರೆಗೂ ಅದನ್ನು ತೆಗೆದಿರಿಸಲಾರ. ಹಗಲಿನ ಮಾತಂತಿರಲಿ, ರಾತ್ರಿ ಕಾಲದಲ್ಲಿಯೂ ಅವನು ಅದನ್ನು ತೆಗೆದಿರಿಸಲಾರ. ಬುರಖಾ ಬದಲಿಸುವ ಅಥವಾ ಸರಿಮಾಡಿಕೊಳ್ಳುವ ಪ್ರಸಂಗ ಬಂದರೆ ಅವನು [illegible] ಕತ್ತಲು ಮೂಲೆಗೆ ಹೋಗಿ ತನ್ನ ಮುಖ ಯಾರ

ಪೀಟರ ಫ್ರುಶ್ ಇವರ ಜರ್ಮನ ಪುಸ್ತಕದ ಆಧಾರದಿಂದ

ಕಣ್ಣಿಗೂ ಬೀಳದಂತೆ ಜಾಗ್ರತೆ ವಹಿಸಿ ಬುರಖಾ ಬದಲಾಯಿಸಿಕೊಳ್ಳುವದನ್ನೂ ಸರಿಪಡಿಸಿಕೊಳ್ಳುವದನ್ನೂ ಮಾಡುತ್ತಾನೆ.

ಇವರು ಧರಿಸುವ ಉದ್ದನ್ನ ನಿಲುವಂಗಿಯಂತೆ ಬುರಖಾ ಕೂಡಾ ಇವರ ಉಡುಪಿನ ವಸ್ತುವಾಗಿದೆ. ಗಂಡಸು ತನ್ನ ಮೂಗು ಮತ್ತು ಬಾಯಿ ಇತರರ ಕಣ್ಣಿಗೆ ಬೀಳುವಂತೆ ತೆರೆದಿಡುವದು ಮಹಾಪರಾಧವೆಂದು ಟ್ಯುರೆಗ್ ಜನ ತಿಳಿಯುತ್ತಾರೆ.

ಟ್ಯುರೆಗ್ ಗಂಡಸರ ಈ ಪದ್ಧತಿಯನ್ನು ಇನ್ನಷ್ಟು ವಿಚಿತ್ರವಾಗಿ ಮಾಡುವುದೆಂದರೆ ಅಲ್ಲಿ ಸ್ತ್ರೀಯರಿಗೆ ಘೋಷಾ ಇಲ್ಲ. ಟ್ಯುರೆಗರು ಹೆಸರಿಗೆ ಮುಸ್ಲಿಮರಾದರೂ ಅವರಲ್ಲಿ ಹೆಂಗಸರಿಗೆ ಅಸಾಧಾರಣ ಸ್ವಾತಂತ್ರ್ಯವಿದೆ.

ಟ್ಯುರೆಗ್ ಸ್ತ್ರೀ ತನ್ನ ಗಂಡ ಸುಂದರನೊ, ಕುರೂಪಿಯೋ ಎಂಬುದನ್ನು ತಿಳಿಯುವದು ಸಾಧ್ಯವಿರುವದಿಲ್ಲ. ಅವಳು ತನ್ನ ಗಂಡನ ಮುಖವನ್ನು ಏಕಾಂತದಲ್ಲಿ ಕೂಡ ನೋಡುವದಿಲ್ಲ. ಟ್ಯುರೆಗ್ ಸ್ತ್ರೀ ತನ್ನ ಗಂಡನ ಯೋಗ್ಯತೆಯನ್ನು ಅವನ ಸೌಂದರ್ಯದ ಮೇಲೆ ಅಳೆಯದೆ ಅವನ ಶೌರ್ಯ ಸಾಹಸಕೃತಿಗಳ ಮೇಲೆ ಅಳೆಯುತ್ತಾಳೆ. ಅವಳು ಅವನ ದೇಹಸೌಷ್ಠವದ ಮೇಲೆ ಅವನ ರೂಪದ ಕಲ್ಪನೆ ಮಾಡಿಕೊಳ್ಳುತ್ತಾಳೆ. ಅವನು ಮಾತಾಡುವ ರೀತಿಯ ಮೇಲೆ ಅವನ ಬೆಲೆ ಕಟ್ಟುತ್ತಾಳೆ. ಅವನ ಹತ್ತಿರ ಇರುವ ಹಣಕ್ಕೂ ಮಹತ್ವವೀಯುತ್ತಾಳೆ.

ಟ್ಯುರೆಗ್ ಗಂಡಸರು ಬಹು ಪ್ರಾಚೀನ ಕಾಲದಿಂದ ಬುರಖಾ ಧರಿಸುತ್ತ ಬಂದಿದ್ದಾರೆ. ಕ್ರಿ. ಶ. ೩೦೦ ರ ಸುಮಾರಿನ ಅರಬ ಇತಿಹಾಸಕಾರರು ಈ ವಿಷಯವನ್ನು ಉಲ್ಲೇಖಿಸಿದ್ದಾರೆ. ಇವರದು ಮಾತೃಪ್ರಧಾನ ಪದ್ಧತಿಯ ಸಮಾಜ. ಗಂಡಸರು ಬುರಖಾ ಧರಿಸುವ ಪದ್ಧತಿ ಬರಲು ಬಹುಶಃ ಇದೂ ಒಂದು ಕಾರಣವಾಗಿರಬೇಕು.

ಇವಲ್ಲದೆ ಇದಕ್ಕೆ ಇನ್ನೊಂದು ಮಹತ್ವದ ಕಾರಣವಿದೆ ಎನ್ನಬಹುದು. ಮರುಭೂಮಿಯಲ್ಲಿ ಬಹುದೂರ ಪ್ರಯಾಣ ಮಾಡುವಾಗ ಮುಖಕ್ಕೆ ಬುರಖಾ ಅಗತ್ಯವಾಗುತ್ತದೆ. ಈ ಅರಿವೆಯು ಮೂಗಿನ ಸೊಳ್ಳೆಗಳು ಮತ್ತು ಬಾಯಿ ಒಣಗದಂತೆ ನೋಡಿಕೊಳ್ಳುತ್ತದೆ. ಬಹಳ ಗಾಳಿಯಿರುವಾಗ ಕಣ್ಣುಗಳನ್ನಷ್ಟು ಬಿಟ್ಟು ಉಳಿದ ಮುಖ ಮುಚ್ಚಿಕೊಂಡರೆ ಎಷ್ಟೋ ತೊಂದರೆ ತಪ್ಪುವದು.

ಇವರಲ್ಲಿ "ಅಹಾಲ" ಎಂಬ ಮಹತ್ವದ ಸಮಾರಂಭವೊಂದು ನಡೆಯುತ್ತದೆ. ಈ ಸಮಾರಂಭದಲ್ಲಿ ತರುಣ-ತರುಣಿಯರು ಒಂದೆಡೆ ಸೇರಿ ತಮ್ಮ ತಮ್ಮ ಜೀವನ ಸಂಗಾತಿಗಳನ್ನಾರಿಸಿಕೊಳ್ಳುತ್ತಾರೆ.

ಈ ಸಮಾರಂಭಗಳು ಹೆಚ್ಚಾಗಿ ಅರಸನು ಶಿಬಿರದಲ್ಲಿರದ ಸಮಯಗಳಲ್ಲಿ ನಡೆಯುತ್ತವೆ.

ಪಿಟೀಲಿನಂಥ "ಇಮರ್ಝಾದ" ಎಂಬ ವಾದ್ಯದ ಸ್ವರದೊಂದಿಗೆ ತರುಣಿಯರು ಹಾಡುತ್ತಾರೆ. ಚಹಾಪಾನವು ಅಳತೆಯಿಲ್ಲದೆ ನಡೆಯುತ್ತದೆ.

ಗಂಡಸರು ಮತ್ತು ಹೆಂಗಸರಿಬ್ಬರೂ ಈ ಸಮಯದಲ್ಲಿ ತಮ್ಮ ಕಣ್ಣಿನ ಸುತ್ತ ಕಪ್ಪುಬಣ್ಣದ ದಪ್ಪಗೆರೆಗಳನ್ನು ಹಾಕಿಕೊಂಡಿರುತ್ತಾರೆ. ಇದರಿಂದ ಸೌಂದರ್ಯ ಹೆಚ್ಚುವದೆಂದು ಇವರ ಭಾವನೆ.

ತರುಣ—ತರುಣಿಯರು ಪರಸ್ಪರರನ್ನುದ್ದೇಶಿಸಿ ಪ್ರೇಮಗೀತೆಗಳನ್ನು ಹಾಡುತ್ತಾರೆ.

ಟ್ಯುರೆಗ್‌ರಲ್ಲಿ ಪ್ರತಿ ಗಂಡಸು ಪ್ರತಿ ಹೆಂಗಸು ಕವಿಯಾಗಿದ್ದಾರೆ. ಸ್ತ್ರೀಯ ಸೌಂದರ್ಯವನ್ನು ಕುರಿತು ಅಥವಾ ಗಂಡಸಿನ ಶೌರ್ಯ ಸಾಹಸಗಳನ್ನು ಕುರಿತು ಕವನ ಕಟ್ಟಿ ಹಾಡುವದೊಂದು ಮಹಾಸಾಧನೆ, ಅದು ಸಂಸ್ಕೃತಿವಿಶೇಷದ ದ್ಯೋತಕ ಎಂದು ಈ ಜನ ನಂಬುತ್ತಾರೆ.

"ಅಹಾಲ" ದಲ್ಲಿ ಕೇವಲ ಅವಿವಾಹಿತ ತರುಣಿಯರು ಭಾಗವಹಿಸುತ್ತಾರೆ. ವಿವಾಹಿತೆಯರಿಗೆ ಅಲ್ಲಿ ಸ್ಥಳವಿಲ್ಲ. ಬಹುದೂರದ ಶಿಬಿರಗಳಿಂದ ಬಂದವರಾದರೆ ಮಾತ್ರ ವಿವಾಹಿತ ಪುರುಷರು ಈ ಸಮಾರಂಭದಲ್ಲಿ ಭಾಗವಹಿಸ

ಬಹುದು. ಸಮಾರಂಭಕ್ಕೆ ಓರ್ವ ಸ್ತ್ರೀಯನ್ನು ಅಧ್ಯಕ್ಷಳಾಗಿ ಆರಿಸುತ್ತಾರೆ. ಅವಳು ಪ್ರತಿಯೋರ್ವನೂ ಸರಿಯಾಗಿ ವರ್ತಿಸುವನೋ ಇಲ್ಲವೊ ಎಂದೂ ಸ್ಪರ್ಧೆಯಿಂದ ಜಗಳಗಳೇಳದಂತೆಯೂ ನೋಡಿಕೊಳ್ಳುತ್ತಾಳೆ.

"ಅಹಾಲ" ಪ್ರೇಮಿಗಳ ಭೆಟ್ಟಿಯ ಸ್ಥಳ, ಪರಸ್ಪರರ ಮೇಲಿನ ಪ್ರೇಮವನ್ನು ವ್ಯಕ್ತ ಪಡಿಸುವ ಅನುಕೂಲ ಸ್ಥಳ. ಸಮಾರಂಭ ಮುಗಿಯುವದರೊಳಗಾಗಿ ಈ ಪ್ರೇಮಿಗಳು ತಮ್ಮ ಮುಂದಿನ ಭೆಟ್ಟಿಯ ದಿನ, ಸ್ಥಳಗಳನ್ನೂ ನಿಶ್ಚಿತ ಪಡಿಸಿಕೊಳ್ಳುತ್ತಾರೆ.

"ಅಹಾಲ"ಎಲ್ಲಿಬೇಕಾದಲ್ಲಿ ಜರುಗಬಹುದು. ಯಾವಳಾದರೂ ಅವಿವಾಹಿತೆಯ ಡೇರೆಯಲ್ಲಿ ಇಲ್ಲವೆ ಕೇವಲ ಅದಕ್ಕಾಗಿಯೇ ಎಂದು ಹಾಕಿದ ಡೇರೆಯಲ್ಲಿ ನಡೆಯುತ್ತದೆ. ಗಾಳಿಯಿಲ್ಲದ ದಿನವಾದರೆ ಬಯಲಿನಲ್ಲಿಯೂ ಜರಗುತ್ತದೆ.



## ಪಂಚಶೀಲ

೧. ಜ್ಞಾನವೆಂದರೆ ಮುಂದೇನು ಮಾಡಬೇಕೆಂಬ ತಿಳಿವಳಿಕೆ; ಶೀಲವೆಂದರೆ ಹಾಗೆ ಮಾಡುವಿಕೆ. —ಡೆವಿಡ್ ಸ್ಟಾರ್ ಜಾರ್ಡನ್

೨. ಶೀಲವು ದುರ್ವ್ಯಸನದಿಂದ ದೂರ ಉಳಿಯುವುದರಲ್ಲಿಲ್ಲ; ಅದನ್ನು ಮನಸಾ ಬಯಸದಿರುವುದರಲ್ಲಿದೆ. —ಬರ್ನಾರ್ಡ್ ಶಾ.

೩. ಶೀಲ ಮತ್ತು ಶಮ ಇವುಗಳಿಂದ ಜಗತ್ತನ್ನೇ ಗೆಲ್ಲಬಹುದು. —ಲಾವೊ-ತ್ಸೆ

೪. ಯಾವಾಗಲೂ ಕಾವಲು ಮಾಡಬೇಕಾದ ಶೀಲಕ್ಕೆ ಕಾವಲಿಡುವದು ವ್ಯರ್ಥ ಶ್ರಮ. —ಅಲಿವರ ಗೋಲ್ಡ್ ಸ್ಮಿತ್

೫. ಮಕ್ಕಳಿಗೆ ತಂದೆಯ ಪಾಪಗಳ ಫಲಭೋಗಿಸುವ ಪಾಳಿ ಬರುವಂತೆ ತಾಯಿಯ ಶೀಲಗಳ ಫಲದ ದಾಯವೂ ಬರುವುದುಂಟು. —ಚಾರ್ಲ್ಸ್ ಡಿಕನ್ಸ್

## ಬಹುಪತ್ನೀಕರರಿಗೆ ಗಂಡಾಂತರ

ನೀವು ಮದುವೆಯಾಗಿದ್ದೀರಾ? ಹಾಗಿದ್ದರೆ ನಿಮಗೆ ಎಷ್ಟು ಹೆಂಡಂದಿರಿದ್ದಾರೆ? ಒಂದೋ, ಎರಡೋ, ಹೆಚ್ಚೋ? ಪಶ್ಚಿಮ ಬಂಗಾಲದ ೧೪೭ ಡೆಪ್ಯುಟಿ ಮೆಜಿಸ್ಟ್ರೇಟರಿಗೆ ಈ ಪ್ರಶ್ನೆ ಹಾಕಿರುವ ಪರಿಪತ್ರ ಹೊರಟಿದೆ.

ಡೆಪ್ಯುಟಿ ಮೆಜಿಸ್ಟ್ರೇಟರನ್ನು ಐ. ಎ. ಎಸ್. ತರಗತಿಗೆ ಬಡತಿ ಮಾಡುವ ಸಂಬಂಧದಲ್ಲಿ ಈ ಪರಿಪತ್ರ ಹೊರಟಿದೆ. ಐ. ಎ. ಎಸ್. ತರಗತಿಗೆ ಏರಿಸಲ್ಪಡುವವರು ಕೇಂದ್ರ ಸರಕಾರದ ನಿಯಮಗಳಿಗೆ ಒಳಪಡುವರು. ಕೇಂದ್ರ ಸರಕಾರವು ಹಿಂದೂ ವಿವಾಹ ಕಾಯದೆ ಜಾರಿಗೆ ಬರುವ ಮೊದಲೇ, ತನ್ನ ನೌಕರರು ಒಬ್ಬ ಹೆಂಡತಿಯಿರುವಾಗ ಇನ್ನೊಬ್ಬಳನ್ನು ಮದುವೆಯಾಗತಕ್ಕದ್ದಲ್ಲೆಂದು ವಿಧಿಸಿತ್ತು.

ಈ ನಿಯಮವಾದ ಮೇಲೆ ಬಂಗಾಲದ ಡೆ. ಮೆಜ್ಜಿಸ್ಟ್ರೇಟರಾರಾದರೂ ಎರಡನೇ ಮದುವೆ ಮಾಡಿಕೊಂಡಿದ್ದರೆ ಅವರು ಐ. ಎ. ಎಸ್. ಗೆ ಬಡತಿಯಾಗುವ ಅವಕಾಶ ಕಳಕೊಳ್ಳಬೇಕಾಗುವದು. — ಸ್ಟೇಟ್ಸಮನ್.



# ನಾನು ಓದಿ ಮೆಚ್ಚಿದ್ದು

ಶ್ರೀ ಶಿವರಾಮ ಕಾರಂತರ “ ಬೆಟ್ಟದ ಜೀವ ” ದಿಂದ

. . . . . . ಮನೆ ಮುಂಗಡೆಯ ಬೆಟ್ಟದ ಬೆಂಗಡೆಯಿಂದ ಸೂರ್ಯ ಉದಯಿಸುವಾಗ, ಆ ಬೆಟ್ಟದ ಆಚೀಚೆ ಬಾನು ಹೊನ್ನಾಗಿ ಹೊಳೆದು, ಎದುರಿನ ಗುಡ್ಡದ ಶಿಖರವನ್ನು ಕಂಚಿನ ಕಡೆಗೋಲಂತೆ ನಿಲ್ಲಿಸಿತ್ತು. ಹಿಂದಿನ ದಿನ ಅದೇ ಬೆಟ್ಟ ನನಗೆ ಮೊಸರುಗಡ್ಡೆಯಲ್ಲಿ ನಿಂತ ನೀಲ ಕಡೆಗೋಲಂತೆ ಕಂಡಿತ್ತು. ಇಂದು ಆ ಹಿಮದ ಮೊಸರಿರಲಿಲ್ಲ. ನನ್ನೆದುರಿನ ಬೆಟ್ಟ ತನ್ನ ದಿಟ್ಟತನದಿಂದ, ಔನ್ನತ್ಯದಿಂದ ನನ್ನಂತಹ ಎಷ್ಟೆಲ್ಲ ವ್ಯಕ್ತಿಗಳ ಎದೆಯನ್ನು ಭೀತಿಗೊಳಿಸಿ ತಲ್ಲಣಿಸಿರಬೇಕೋ ಏನೋ !

ಬಾನಿನಲ್ಲಿ ಸೂರ್ಯ ತುಸುವಾಗಿ ಮೇಲಕ್ಕೇರುತ್ತಾನೆ ಎಂದಂತೆ, ಒಮ್ಮೆಗೆ ಅವನ ರಶ್ಮಿಗಳು ಬೆಟ್ಟದ ತೆಂಕು ಮಗ್ಗುಲಿನ ಹಸುರನ್ನೆಲ್ಲ ಬೆಳಕಿನಿಂದ ತೊಯ್ಯಿಸಿಬಿಟ್ಟವು! ಆತನಕ ಕಠಿಣವೂ ನಿರ್ದಾಕ್ಷಿಣ್ಯವೂ ಆಗಿ ನಿಂತ ಬೆಟ್ಟಕ್ಕೆ, ಒಂದು ಬದಿಯಲ್ಲಿ ಮೃದುವಾದ ಹೃದಯವಿದ್ದಂತೆ ಕಂಡಿತು. ನೋಡುತ್ತಾ ನಿಂತಂತೆ, ಕೆಂಪಡರಿದ ಬಾನಿನ ಕಣ್ಣು, ತಾನೇ ಕ್ರೂರಿಯಾಗಿ, ಆ ಬೆಂದ ಕಬ್ಬಿಣವನ್ನು ಕರಗಿಸಲು ನಿಂತಂತೆ ಕಾಣಿಸಿತು. ಆ ಬಾನಿನ ಮುಂದೆ, ಬೆಟ್ಟವು ಗಂಡುಗಲಿಯಂತೆ ಕಂಡುದು ನಮ್ರತೆಯ ಮುದ್ದೆಯಾದ ಹೆಣ್ಣಾಯಿತು. ಹಸುರು ಕವಚದ ಮೇಲೆ, ನೀಲ ಸೀರೆ ತೊಟ್ಟು, ಧ್ಯಾನಕ್ಕೆ ನಿಂತ ಅಂಗನೆಯಾಯಿತು. ಆದರೆ ದಿಗಂಗನೆಯ ಧಿಮಾಕಿನ ಮುಂದೆ ಬೆಟ್ಟದಂಗನೆಯು, ಅತ್ತೆಯ ಮುಂದೆ ಮಂಕಿಯಾಗಿ ನಿಂತ ಸೊಸೆಯಾದಳು.

ಆಯ್ದವರು: ಶ್ರೀ ಎಂ. ಅನಂತರಾಮು, ಮಂಗಳೂರು.

ಶ್ರೀರಂಗರ “ ವಿಶ್ವಾಮಿತ್ರ ಸೃಷ್ಟಿ ” ಯಿಂದ

ಮಧ್ಯಾಹ್ನ. ಗಿಡಗಳು ಬೀಸಿದರೆ ಉಸಿರಾಡುವ ಭೂದೇವಿಗೆ ಜ್ವರ ಬಂದಂತೆ ಭಾಸವಾಗುವದು; ಗಿಡಗಳು ಬೀಸದಿದ್ದರೆ ಬಂದ ಜ್ವರ ಇಳಿಯುವಂತೆ ಮೈಗೆ ಬೆವರೊಡೆಯುವದು. ಹಕ್ಕಿಗಳು ಕೂಡ ಸದ್ದಿಲ್ಲದೆ ಗಿಡಗಳ ಹೊದರಿನಲ್ಲಿ ತಮ್ಮ ಗೂಡುಗಳಲ್ಲಿ ಸೇರಿಕೊಂಡಿವೆ. ಗಿಡದ ನೆರಳಿನ ಕೆಳಗಿನಿಂದ ಶಕ್ಯವಾದಾಗ ಮೇಲೆ ನೋಡಿದಲ್ಲಿ ಬಿಸಿಲಿನಂತೆ ಕ್ರೂರವಾದ ಒಂದು ಗಿಡುಗ, ಒಂದು ಹದ್ದು, ಒಂದು ರಣಹದ್ದು ಅಲ್ಲಲ್ಲಿ ಆಕಾಶದಲ್ಲಿ ರೆಕ್ಕೆ ಬಡೆಯದೆ ತೂಗುತ್ತ ತೇಲುತ್ತ ಸಾಗುತ್ತಿರುವುದು ಕಂಡುಬರುವದು.

ಆಯ್ದವರು: ಶ್ರೀ ಕಟಗೇರಿ ಎಸ್. ಎಚ್., ಮುಂಬಯಿ.

ಜಡಭರತರ "ಧರ್ಮಸೆರೆ" ಯಿಂದ

ಇಷ್ಟೊತ್ತಿಗೆ ಹೊರಗೆ ಹೋಗಿದ್ದ ಹಕ್ಕಿಗಳೆಲ್ಲ ತಿರುಗಿ ಆ ಗಿಡಕ್ಕೆ ಬಂದು ಗಲಿಬಿಲಿಯನ್ನು ಮಾಡಹತ್ತಿದ್ದರಿಂದ ಬಿಂದುಮಾಧವನ ಲಕ್ಷ್ಯವು ಅತ್ತ ಕಡೆಗೆ ಹೊರಳಿತು. ಎರಡೂ ಕಾಲುಗಳನ್ನು ಚಾಚಿ, ಕೈಗಳನ್ನು ಹಿಂದಕ್ಕಿಟ್ಟು ಬೆನ್ನಿನ ಭಾರ ವನ್ನೆಲ್ಲ ಅವುಗಳ ಮೇಲೆ ಹಾಕಿ, ಮುಖ ಮೇಲಕ್ಕೆ ಮಾಡಿ, ವಿಚಾರಪರ ದೃಷ್ಟಿ ಯಿಂದ ಗಿಡದಲ್ಲಿ ನೋಡಹತ್ತಿದನು. ಪಕ್ಷಿಗಳು ಬಡಿದಾಡುವದು—ಕಡಿದಾಡು ವದು—ಚೀರಾಡುವದು—ಅಳುವದು—ನಗುವದು—ಅಂತೂ ಏನೇನೋ ಒಂದು ದೊಡ್ಡ ಪ್ರಪಂಚವೇ ನಡೆದಿತ್ತು. ತಾನಿರುವ ಜಗತ್ತಿನಂತೆಯೆ ಅಲ್ಲಿಯೂ ನಡೆದದ್ದ ರಿಂದ ಬಿಂದುಮಾಧವನಿಗೆ ಮೊದಲುಮೊದಲು ಬೇಸರವಾಯಿತು. ಒಂದು ಕ್ಷಣ ಹಾಗೇ ಸುಮ್ಮನೆ ಮೇಲಕ್ಕೆ ನೋಡುತ್ತ ಕುಳಿತುಕೊಂಡನು. ಆಗ "ಈ ಆಲದ ಗಿಡವು ಅದೆಷ್ಟೋ ಹಕ್ಕಿಗಳ ಜೀವಗಳನ್ನು ನೋಡಿರಬಹುದಲ್ಲವೆ! ಅದಕ್ಕೆ ಜೀವ ನದ ಅರ್ಥ ಗೊತ್ತಿರಬಹುದೆ ? ಜಾರಿದ ಜೀವಗಳೆಷ್ಟು ? ಏರಿದ ಜೀವಗಳೆಷ್ಟು ? ಎಂಬುದು ಈ ಗಿಡದ ಸ್ಮೃತಿಯಲ್ಲಿರಬಹುದಲ್ಲವೆ! ಜೀವನಕಲಹದ ಗುಟ್ಟನ್ನು ಇದು ಅರಿತಿರಬಹುದು ! ಅದನ್ನು ನನಗೆ ಯಾರು ತಿಳುಹಬಹುದು ? " ಎಂದು ಬಿಂದುಮಾಧವನು ಆಶೆ, ಆತುರ ತುಂಬಿದ ಕಣ್ಣುಗಳಿಂದ ಗಿಡವನ್ನೆಲ್ಲ ಸುತ್ತಾಡಿ ಹುಡುಕಹತ್ತಿದನು. ಎಲೆಗಳ ಸಂದಿಯೊಳಗಿಂದ ಚಂದ್ರಕಿರಣವೊಂದು ಹಾಯ್ದು ಅವನ ಮುಖದ ಮೇಲೆ ಬಿದ್ದಿತು. ಬಿಂದುಮಾಧವನು ಅತ್ತ ಕಡೆ ನೋಡುವದ ರೊಳಗಾಗಿ ಆ ಕಿರಣವು ಮಾಯವಾಗಿತ್ತು; ಪೆಚ್ಚಾಗಿ ಅತ್ತಿತ್ತ ನೋಡಹತ್ತಿದನು. ಗಾಳಿಯು ಬೀಸಿತು. ಗಿಡಕ್ಕೆ ಗಿಡವೇ ಅವನ ಪೆಚ್ಚುತನಕ್ಕಾಗಿ ಹೊಟ್ಟೆ ತುಂಬಿ ನಗುತ್ತಿರುವಂತೆ ಅವನಿಗೆನಿಸಿತು. ಒಳಗೊಳಗೇ ನಾಚಿದನು. ಮತ್ತೊಮ್ಮೆ ಗಿಡದ ತುಂಬೆಲ್ಲ ನೋಡಿದನು. ಆಗ ಅದರಲ್ಲಿ ಅವನಿಗೊಂದು ಹೊಸತನವೇ ಕಂಡಂತಾ ಯಿತು. ಎಲೆ-ಎಲೆಗಳಲ್ಲಿಯೂ ವಿಶಾಲ ವಿಶ್ವಜೀವನದ ಸಮಭಾವವು ತುಂಬಿರು- ವಂತೆ ಅವನಿಗೆ ಹೊಳೆಯಿತು. "ನಾವಿರುವ ಈ ಭೂಮಿಯೂ ಒಂದು ಗಿಡ ವಿದ್ದಂತೆ! ನಮ್ಮ ಅಳುವು ಅದನ್ನು ಅಳಿಸಲಾರದು; ನಮ್ಮ ನಗುವು ಅದನ್ನು ನಗಿಸಲಾರದು. ನನಗೆ ಇಂತಹ ವಿಶಾಲ ಜೀವನದ ಸಮಭಾವವು ಬರಬಹುದೆ?.... ಬರಬಹುದು....." ಎಂದು ಒಂದು ನಿಶ್ಚಯದ ಬಿಗುವಿನಿಂದ ಒಮ್ಮೆಲೆ ಎದ್ದು ನಿಂತು ಅತ್ತಿತ್ತ ನೋಡಿ, ಸಾವಕಾಶವಾಗಿ ದಿಬ್ಬದಿಂದಿಳಿದು, ನೀರಿನಲ್ಲಿಯ ಒಂದು ಬಂಡೆಯ ಮೇಲೆ, ಚಂದ್ರನಿಗೆ ಬೆನ್ನುಮಾಡಿ, ನೀರಲ್ಲಿ ಕಾಲಿಳಿಬಿಟ್ಟು ಕುಳಿತು ಕೊಂಡನು.

ಆಯ್ದವರು: ಶ್ರೀಮತಿ ಕೆ. ಸರಸ್ವತಿ, ಗದಗ.

ಶ್ರೀನಿವಾಸರ "ಕಾಕಲೋಕ" ದಿಂದ ( ಜೀವನ )

ಹೊಸ ವಸಂತದ ಒಂದು ಉದಯ ಅಂದವೆಂದರೆ ಅಂದವಾಗಿತ್ತು. ರಾತ್ರಿ ಸ್ವಲ್ಪ ಬಲವಾಗಿಯೇ ಮಳೆ ಆಗಿದ್ದರಿಂದ ಬೆಳಗು ತಂಪಾಗಿತ್ತು. ಗಾಳಿಯಲ್ಲಿ

ಜೇನು ತುಂಬಿತ್ತು. ಬೆಳಕೋ ಗಿಣ್ಣಿನ ಹಾಲು. ನಾನು ನನ್ನ ಕೋಣೆಯಲ್ಲಿ ಕಿಟಕಿಯ ಬಳಿ ಕುಳಿತು ಒಂದು ಪುಸ್ತಕವನ್ನು ತೆರೆದಿಟ್ಟುಕೊಂಡು ಒಂದು ಕ್ಷಣ ಓದುವುದು, ಎರಡು ಕ್ಷಣ ಹೊರಗಡೆ ದೃಷ್ಟಿ ಹಾಯಿಸುವುದು, ಇದರಲ್ಲಿ ಹೊತ್ತನ್ನು ಸವೆಯುತ್ತಿದ್ದೆನು.

ನನ್ನ ಮನೆಯ ಬದಿಯ ಸ್ವಲ್ಪ ನೆಲದಲ್ಲಿ ನಾಲ್ಕು ಮರ ಇವೆ. ಅವುಗಳಲ್ಲಿ ಒಂದು ಅಶೋಕ. ತುಂಬ ತಳಿತು ಹೂತಿದ್ದ ಅದರ ಒಂದು ಕೊಂಬೆಯ ಮೇಲೆ ಒಂದು ಅಳಿಲು ಕುಳಿತು ಸೀಳು ಧ್ವನಿಯಲ್ಲಿ ಕರೆ ಕೊಡುತ್ತಿತ್ತು. ಅಳಿಲಿನ ಈ ಸ್ವರ ನನಗೆ ತೀರ ಪರಿಚಿತ. ಆದರೂ ಬೆಳಗು ಅಷ್ಟು ಚೆನ್ನಾಗಿದ್ದರಿಂದ ಈ ಸ್ವರ ಕೂಡ ಕಿವಿಗೆ ಇಂಪಾಗಿ ತೋರುತ್ತಿತ್ತು. ಆ ಪ್ರಾಣಿ ತನ್ನ ಆತುರದ ಆಹ್ವಾನಕ್ಕೆ ಶಕ್ತಿ ಕೊಡುವ ಸಲುವಾಗಿ ಆಳ್ಳೆಯನ್ನು ತುಂಬುವುದೂ ಹೊದರುಬಾಲವನ್ನು ಮಿಡಿಯುವುದೂ ನಾನು ಕುಳಿತಲ್ಲಿಗೆ ಸ್ಪಷ್ಟವಾಗಿ ಕಾಣುತ್ತಿತ್ತು.

ಕ್ಷಣ ಹೊತ್ತು ಅಳಿಲನ್ನು ನೋಡಿ ನಾನು ಮರಳಿ ನನ್ನ ಪುಸ್ತಕದ ಕಡೆಗೆ ಕಣ್ಣು ತಿರುಹಿದೆನು. ಅದಕ್ಕೆ ಸರಿಯಾಗಿ ಅಶೋಕಮರದ ಬೇರೆ ಒಂದು ಕಡೆಯಿಂದ ಒಂದು ತೆಳುವಾದ ಇಂಪಾದ ಹಕ್ಕಿಯ ಸ್ವರ ಕೇಳಿಸಿತು. ಅದು ನಾನು ಮೊದಲು ಕೇಳಿದ್ದಲ್ಲ. ಯಾವುದೋ ಹೊಸ ಸ್ವರ ಎಂದು ತೋರಿತು. ಗಾನ ನವಿರಾಗುವಷ್ಟು ತೆಳು. ಇಂಪೆಂದರೆ ಇಂಪು. ಅದರಲ್ಲಿ ಐದಾರು ಮುರಿವು ಇದ್ದವು. ತುಣುಕುಗಳು ಒಂದಕ್ಕೊಂದು ಅಂಟಿದ್ದ ರೀತಿ ಬಹು ಚತುರವಾಗಿತ್ತು. ನನಗೆ ಆಶ್ಚರ್ಯವಾಯಿತು. ನನಗೆ ಐವತ್ತು ವರುಷಕ್ಕೆ ಮೇಲೆ ಆಗಿದೆ. ಆದರೂ ನನ್ನ ಮನೆಯ ಮರಕ್ಕೆ ಬರುವ ಈ ಹಕ್ಕಿಯ ದನಿ ಇದುವರೆಗೆ ಕಿವಿಗೆ ಬೀಳದೇ ಇದ್ದಿತಲ್ಲ! ಇದಕ್ಕೆ ಏನು ಹೇಳುವುದು ?

ಆಯ್ದವರು: ಶ್ರೀ ಮಲ್ಲಪ್ಪ ಕುಂದಗೋಳ, ಗುಡಗೇರಿ

ಸೂಚನೆ :

ಓದುಗರು ತಾವು ಮೆಚ್ಚಿದ ಸುಂದರ ಪ್ಯಾರಾಗಳನ್ನು ಬರೆದು ಕಳಿಸಿದರೆ ಆಯ್ದು ಪ್ರಕಟಿಸಲಾಗುವದು.



ಗುಲಾಬಿ ಹೂವಿನ ಪರಿಮಳ ಕೊಡುವ ಸಾಬೂನಿನ ಸುಗಂಧವನ್ನು ಒಂದು ಹುಲ್ಲಿನಿಂದ ತೆಗೆಯುವರು ಗೊತ್ತೆ ?

# ಹುಲ್ಲಿನಿಂದ ಪರಿಮಳ

ಮೂಲ : ಡಾ. ಎನ್. ಆರ್. ಶ್ರೀನಿವಾಸನ್ ★ ಅನುವಾದ : ಎಂ. ವಿ. ನಾಗರಾಜ

ಸುಗಂಧಗಳು ಆಧುನಿಕ ನಾಗರಿಕತೆಯ ಜೀವ-ಜೀವಾಳ. ಸುಗಂಧಜಗತ್ತಿನ ಖ್ಯಾತಿಗೆ ಸಸ್ಯಜಗತ್ತು ಮುಖ್ಯ ಕಣಜವೆನ್ನ ಬಹುದು. ಗುಲಾಬಿ, ಮಲ್ಲಿಗೆ ಮತ್ತು ತನಿ ಗಂಪನ್ನು ಬೀರುವ ಅನೇಕ ಹೂಗಳೂ ಎಲೆಗಳೂ ಬೇರುಗಳೂ ನಿಸರ್ಗ ಭಾಂಡಾರದಲ್ಲಿವೆ.

ಇಂತಹ ನಿಸರ್ಗ ಸೃಷ್ಟಿಯ ಬಳುವಳಿಗಳು ಮಾನವನನ್ನು ಪರಿಮಳಗಳ ಮೂಲಕ ಮೋಹಿಸುತ್ತವೆ. ಪರಿಮಳತಜ್ಞನು ಸೂಕ್ಷ್ಮ-ಸಂವೇದನಾ ಜೀವಿಯಾಗಿರಬೇಕು. ಆತ ಸುಮಾರು ಒಂದು ಸಾವಿರ ಬಗೆಯ ಸುಗಂಧಗಳನ್ನು ವಿಶ್ಲೇಷಿಸುವ ಪ್ರತಿಭೆಯನ್ನು ಹೊಂದಿರಬೇಕು.

ನಾವು ಉಪಯೋಗಿಸುವ ಎಲ್ಲ ಸುಗಂಧಗಳ ಮೂಲವೂ "ಸುಗಂಧದೆಣ್ಣೆ" (Essential Oils)ಗಳ ಗುಂಪಿಗೆ ಸೇರಿದುದು. ಕಣ್ಣಿಗೆ ಕಾಣದ ಸುವಾಸನೆಯು, ಹೂವಿನ ದಳ, ಎಲೆ, ತೊಟ್ಟು, ಬೇರು, ಬೀಜ, ಹಣ್ಣು, ತೊಗಟೆ, ಕಾಂಡ-ಮುಂತಾದುವುಗಳಲ್ಲಿ ರಾಸಾಯನಿಕ ತೈಲಗಳ ಸಣ್ಣ ಸಣ್ಣ ಹನಿಗಳಿಂದ ಉದ್ಭವಿಸುತ್ತದೆ.

ಅನೇಕ ಉತ್ತಮ ಪರಿಮಳದ್ರವ್ಯಗಳು ಹುಲ್ಲಿನಿಂದ ತಯಾರಾಗುವುದು ವಿಸ್ಮಯಕಾರಿಯಾದರೂ ವಾಸ್ತವ ಅಂಶವಾಗಿದೆ. ವಿಶ್ವದಾದ್ಯಂತ ವಿವಿಧ ವಾಯುಗುಣಗಳಲ್ಲಿ ಬೆಳೆಯುವ ಹತ್ತಕ್ಕಿಂತಲೂ ಹೆಚ್ಚು ಸಂಖ್ಯೆಯ ವಿವಿಧ ಜಾತಿಯ

"ಹಿಂದೂ" ಪತ್ರಿಕೆಯಿಂದ

ಹುಲ್ಲುಗಳಿಂದ ಅತ್ಯುತ್ತಮ ಸುಗಂಧದೆಣ್ಣೆಗಳನ್ನು ಲಾಭದಾಯಕವಾಗಿ ತಯಾರಿಸಲಾಗುತ್ತಿದೆ. ಹುಲ್ಲಿನಿಂದ ಎಣ್ಣೆ ತೆಗೆಯುವುದು, ಪರಂಪರಾಗತವಾಗಿ ಬಂದಿರುವ ಉಜ್ವಲ ಕಲೆಯಾಗಿದೆ. ಈ ಪರಿಮಳ ತಯಾರಿಕೆಯ ವಿಧಾನವನ್ನು "ಆವಿ ಭಟ್ಟಿಯಿಳಿಸುವಿಕೆ"(Steam Distillation) ಎಂದು ಕರೆಯಲಾಗಿದೆ.

ಈ ಕ್ರಿಯೆಗೆ ಮೂಲವಸ್ತುವಾದ ಹುಲ್ಲನ್ನು ಭಟ್ಟಿಯಿಳಿಸುವ ಉಪಕರಣದಲ್ಲಿ ದಟ್ಟವಾಗಿ ತುಂಬಿ ಅದರ ಮೇಲೆ ಆವಿಯನ್ನು ಹಾಯಿಸಲಾಗುತ್ತದೆ. ಹುಲ್ಲಿನ ಮೇಲೆ ಹಾದುಹೋಗುವ ಆವಿ, ಸುಗಂಧದೆಣ್ಣೆಯನ್ನು ಹೀರಿಕೊಂಡು ಹೆಪ್ಪುಗಟ್ಟುವಾಗ (Condensing) ಎಣ್ಣೆಯ ಮತ್ತು ನೀರಿನ ಬೇರೆ ಪದರಗಳಾಗಿ ಪ್ರತ್ಯೇಕಗೊಳ್ಳುತ್ತದೆ. ನಂತರ ಎಣ್ಣೆಯನ್ನು ಸಂಗ್ರಹಿಸಿ ಶೋಧಿಸಿ, ಉಪಯುಕ್ತ ಸೀಸೆಗಳಲ್ಲಿ ತುಂಬಿ ಮಾರಾಟ ಮಾಡಲಾಗುತ್ತದೆ.

ಇವುಗಳನ್ನು ಹೆಚ್ಚುಕಡಿಮೆ ಎಲ್ಲ ಕೈಗಾರಿಕೆಗಳಲ್ಲೂ ಉಪಯೋಗಿಸುತ್ತಾರೆ. ಉದಾಹರಣೆಗೆ: ಆಟಗಾರರು ಉಪಯೋಗಿಸುವ ರುಚಿಕರವಾದ ''ಚೂಯಿಂಗ್ ಗಮ್'' ತಯಾರಿಕೆಯಲ್ಲಿ ಮತ್ತು ವೈದ್ಯಕೀಯದಲ್ಲಿ ಗಾಯ-ಹುಣ್ಣು ತೊಳೆಯುವ ಔಷಧಿಯ ಕೆಟ್ಟವಾಸನೆಯನ್ನು ಹೋಗಲಾಡಿಸಲು ಇವನ್ನು ಉಪಯೋಗಿಸುತ್ತಾರೆ.

ನೀವು ಉಪಯೋಗಿಸುವ ಸಾಬೂನು ಗುಲಾಬಿ ವಾಸನೆ ಹೊಂದಿದ್ದರೆ, ಆ ಪರಿಮಳವು ವರ್‍ಹಾಡ ಮತ್ತು ಮಧ್ಯಪ್ರದೇಶದಲ್ಲಿ ದಟ್ಟವಾಗಿ ಬೆಳೆಯುವ "ರೋಷಾ ಗ್ರಾಸ್" ಎಂಬ ಹುಲ್ಲಿನ ಸುಗಂಧದೆಣ್ಣೆಯಾಗಿರುತ್ತದೆ. ಭಾರತವು ಈ ಎಣ್ಣೆಯನ್ನು ಬುಲ್ಗೇರಿಯಾ ಮುಂತಾದ ಐರೋಪ್ಯ ರಾಷ್ಟ್ರಗಳಿಗೆ ರಫ್ತುಮಾಡುತ್ತಿತ್ತೆಂದು ವಾಣಿಜ್ಯದ ಇತಿಹಾಸ ಹೇಳುತ್ತದೆ. ಈ "ರೋಷಿ" ಸುಗಂಧದೆಣ್ಣೆ ಎಷ್ಟು ಉನ್ನತಮಟ್ಟದ್ದೆಂದರೆ, ಅಧಿಕ ಬೆಲೆಯ ಗುಲಾಬಿ ಹೂವಿನ ಎಣ್ಣೆಯೊಂದಿಗೆ ಬೆರಕೆ ಮಾಡಲು ಇದನ್ನು ಉಪಯೋಗಿಸಲಾಗುತ್ತಿತ್ತು. ಈಗಲೂ ಈ ಎಣ್ಣೆಯನ್ನು ಅಧಿಕ ಪ್ರಮಾಣದಲ್ಲಿ ಅಮೇರಿಕಾ, ಜಪಾನ್ ಮತ್ತು ಯುರೋಪಿಗೆ ರಫ್ತುಮಾಡಲಾಗುತ್ತದೆ.

"ಶುಂಠಿ" ಹುಲ್ಲಿನ (Ginger Grass) ಎಣ್ಣೆಯನ್ನು ಗಂಧದೆಣ್ಣೆಯೊಂದಿಗೆ ಉಪಯೋಗಿಸಿದರೆ ಸೊಳ್ಳೆಕಾಟ ನಿವಾರಿಸಬಹುದು. ಶುಂಠಿ ಹುಲ್ಲಿನ ಎಣ್ಣೆಯನ್ನು ಉಪಯೋಗಿಸಿ ಸಂಧಿವಾತದ ನೋವನ್ನು ಗುಣಪಡಿಸಬಹುದು.

ಯಾವುದೊಂದು ಪರಿಮಳದ್ರವ್ಯ ನಿಂಬೆಹಣ್ಣಿನ ವಾಸನೆಯನ್ನು ಸೂಸುತ್ತಿದ್ದರೆ, ಅಥವಾ ಕರವಸ್ತ್ರದ ಪರಿಮಳವು ಚೇತೋಹಾರಿಯಾದ "ವಯೊಲೆಟ್" ಪುಷ್ಪದ ಕಂಪನ್ನು ಬೀರುತ್ತಿದ್ದರೆ ಅದರ ಮೂಲವನ್ನು ''ನಿಂಬೆ ಹುಲ್ಲು" (Lemon Grass) ಎಂದು ನಿರ್ಧರಿಸಬಹುದು. ಈ ಹುಲ್ಲನ್ನು ಮಲಬಾರ್ ತೀರದಲ್ಲಿ ಸಮೃದ್ಧವಾಗಿ ಬೆಳೆಯುತ್ತಾರೆ. ಮೃದುವಾದ ಮರಳು ಮಣ್ಣು, ಉತ್ತಮ ಮಳೆ, ಒಳ್ಳೆಯ ಬಿಸಿಲು— ಈ ಜಾತಿಯ ಹುಲ್ಲಿನ ಬೆಳೆಗೆ ಅಗತ್ಯವಾದ ಹವಾಗುಣ. ಈ ಹುಲ್ಲಿನ ಬೆಳೆಯ ಅಧಿಕಾಂಶ ಅಮೇರಿಕೆಗೆ ರಫ್ತಾಗುತ್ತದೆ; ಇದರಿಂದ ಭಾರತಕ್ಕೆ ಒಳ್ಳೆಯ ವರಮಾನವಿದೆ.

ನಿಂಬೆ ಹುಲ್ಲನ್ನು ಆಧುನಿಕ ಪರಿಮಳ ತಯಾರಕರು ''ಅಯೋನೋನ್ಸ್" ತಯಾರಿಕೆಯಲ್ಲಿ ಉಪಯೋಗಿಸುತ್ತಾರೆ. ಅದರ ಎಣ್ಣೆಯನ್ನು ಸಾಬೂನು ಮತ್ತು ಅಂಗರಾಗ (Cosmetics) ಗಳ ತಯಾರಿಕೆಯಲ್ಲಿ ಸುವಾಸಿಕ ರಾಸಾಯನಿಕ ವಸ್ತುವಾಗಿ ಉಪಯೋಗಿಸುತ್ತಾರೆ. ೧೯೫೪ರಲ್ಲಿ ೭೩೬ ಟನ್ ನಿಂಬೆ ಹುಲ್ಲನ್ನು ರಫ್ತುಮಾಡಿದುದರಿಂದ ಒಂದು ಕೋಟಿ ರೂಪಾಯಿ ವರಮಾನ ಬಂದಿತು.

ಈ ಎಣ್ಣೆಯ ಅಧಿಕ ವ್ಯಾಪಾರಕ್ಕೆ ಕಾರಣವೇನೆಂದರೆ, (ಯುದ್ಧಕಾಲದಲ್ಲಿ ಅಮೇರಿಕದ ವಿಜ್ಞಾನಿಗಳ ಪರಿಶೋಧನೆಯ ಪ್ರಕಾರ) ಇದರಿಂದ ಕೃತಕವಾಗಿ "ಎ" ಅನ್ನಾಂಗ ತಯಾರಿಸಬಹುದು. "ಎ" ಅನ್ನಾಂಗಕ್ಕೆ (ವಿಟಾಮಿನ್) ಮೂಲವಾದ "ಕಾಡ್" ಮೀನಗಳು ಹೇರಳವಾಗಿ ಸಿಗುವಾಗಲೂ, ಕೃತಕವಾಗಿ ''ಎ''

ಅನ್ನಾಂಗ ತಯಾರಿಸುವುದು ವಿಚಿತ್ರವೆನಿಸ ಬಹುದು. ಅದರೆ "ಕಾಡ್" ಮೀನಿನ ಎಣ್ಣೆ ಯನ್ನು ಅದರ ಅಸಹ್ಯ ವಾಸನೆ ಮತ್ತು ರುಚಿಗಾಗಿ ಬಹುಸಂಖ್ಯಾಕರು ಸೇವಿಸುವುದಿಲ್ಲ. ಆದ್ದರಿಂದ ನಿಂಬೆ ಹುಲ್ಲಿನಿಂದ ಕೃತಕ ಎಣ್ಣೆಯ "ಶಕ್ತಿ ವರ್ಧಕ" ವನ್ನು ತಯಾರಿಸಲಾಗುತ್ತದೆ,

ಈ ಹುಲ್ಲನ್ನು ಪರದೇಶಕ್ಕೆ ರವಾನಿಸುವುದಕ್ಕೆ ಮುಂಚೆ, ಭಾರತದ ವೈದ್ಯಕೀಯ ಜಗತ್ತಿನಲ್ಲಿ ಗಾಯಕ್ಕೆ ಹಚ್ಚುವ ತೈಲ ಮತ್ತು ಮುಲಾಮಾಗಿ ಉಪಯೋಗಿಸಲಾಗುತ್ತಿತ್ತು. ಈಗಲೂ ಅದನ್ನು ಕ್ರಿಮಿನಾಶಿಯಾಗಿ ಉಪಯೋಗಿಸುತ್ತಾರೆ. ಗಾಯಕ್ಕೆ ಈ ಎಣ್ಣೆ ಹಚ್ಚಿದರೆ ನೊಣಗಳು ದಾಳಿಯಿಡುವದಿಲ್ಲ.

ಉತ್ತರ ತಿರುವಾಂಕೂರಿನ ೩೫,೦೦೦ ಎಕರೆ ಪ್ರದೇಶದಲ್ಲಿ ನಿಂಬೆ ಹುಲ್ಲನ್ನು ಅಧಿಕ ಪ್ರಮಾಣ ದಲ್ಲಿ ಬೆಳೆಯಲಾಗುತ್ತದೆ.

ಬೇಸಿಗೆಯ ದಿನಗಳಲ್ಲಿ ಸಾಮಾನ್ಯವಾಗಿ ಲಾಮಂಚ (ಬಾಳದ ಬೇರು)ದ ಬೀಸಣಿಗೆ ಗಳನ್ನು ಉಪಯೋಗಿಸುತ್ತೇವೆ. ಈ ಬೀಸಣಿಗೆ ಗಳಿಗೆ ನೀರನ್ನು ಚಿಮುಕಿಸಿದರೆ ತಂಪಾದ ಕಂಪಿನ ಗಾಳಿಯನ್ನು ನೀಡುತ್ತವೆ. ಲಾಮಂಚದ ಹುಲ್ಲು 'ಖಸ್‌ಖಸ್' ಎಂಬ ಹೆಸರಿನಿಂದಲೂ ಪ್ರಸಿದ್ಧ ವಾಗಿದೆ; ಈ ಹುಲ್ಲು ಸುಗಂಧದೆಣ್ಣೆಗೂ ಮೂಲ ವಸ್ತುವಾಗಿದೆ. ಈ ಹುಲ್ಲಿನ ಎಣ್ಣೆಯನ್ನು ಭಾರತದಲ್ಲಿ ಅನೇಕ ಶತಮಾನಗಳಿಂದ ತಯಾರಿ ಸುತ್ತಿದ್ದಾರೆ. ಪ್ರಾಚೀನ ಉಲ್ಲೇಖಗಳಿಂದ ತಿಳಿದುಬರುವಂತೆ ೧೨ನೇ ಶತಮಾನದಲ್ಲಿ ಈ ಎಣ್ಣೆಗೆ ತೆರಿಗೆ ವಿಧಿಸುತ್ತಿದ್ದರು. ಈ ಹುಲ್ಲನ್ನು ಅಧಿಕ ಪ್ರಮಾಣದಲ್ಲಿ ಭರತಪುರ, ಅಜಮೀರ, ಮಾರವಾಡ, ಜಾವಾ ಮತ್ತು ರಿಯೂನಿಯನ್ ದ್ವೀಪಗಳಲ್ಲಿ ಬೆಳೆಯಲಾಗುತ್ತದೆ. 'ಖಸ್' ಎಣ್ಣೆ ದೀರ್ಘ ಕಾಲ ತೀವ್ರ ಪರಿಮಳ ಬೀರುತ್ತದೆ. "ಘೆದರ ಹುಲ್ಲು" ಮುಂತಾದ ಅನೇಕ ಸುಗಂಧ ದೆಣ್ಣೆ ನೀಡುವ ಹುಲ್ಲುಗಳಿವೆ. ಆದರೆ ಅವು ಗಳಿನ್ನೂ ವಾಣಿಜ್ಯದ ಮಟ್ಟವನ್ನು ಏರಬೇಕಾ ಗಿದೆ.

ಕೃತಕ ಪರಿಮಳ (Synthetic Perfumes) ಗಳನ್ನು "ಸಿಟ್ರೊನೆಲ" ಎಣ್ಣೆಯಿಂದ ತಯಾರಿಸಿ, ಅತ್ಯುತ್ತಮ ನೈಜ ಪುಷ್ಪಗಳ ಎಣ್ಣೆಯ ಸುವಾಸನೆಯನ್ನು (ಉದಾ: ಗುಲಾಬಿ) ಕೃತಕ ವಾಗಿ ತಯಾರಿಸುತ್ತಾರೆ. ಇವು ಪರಿಮಳ ರಸಾ ಯನ ತಜ್ಞರ ಅದ್ಭುತ ಸಾಧನೆಗಳು! ಈ ಎಣ್ಣೆ ಯನ್ನು ತಯಾರಿಸುವುದರಲ್ಲಿ ಒಮ್ಮೆ ಅಗ್ರಸ್ಥಾನ ಪಡೆದಿದ್ದ ಸಿಲೋನ್, ಇಂದು ಆ ಸ್ಥಾನವನ್ನು ಜಾವಾ ಮತ್ತು ಮಧ್ಯಅಮೇರಿಕಗಳಿಗೆ ಬಿಟ್ಟು ಕೊಟ್ಟಿದೆ. ಭಾರತದಲ್ಲಿ "ಸೈಂಟೊಪ್ಪೋಗನ್" ಮತ್ತು "ಸಿಟ್ರೊನೆಲ" ಎಣ್ಣೆಗೆ ಮೂಲ ಸಾಮಗ್ರಿಯಾದ ಹುಲ್ಲನ್ನು ಬೆಳೆಯಬೇಕಾಗಿದೆ.

ಸುಗಂಧದೆಣ್ಣೆಗಳಿಗೆ ವಿಶೇಷ ಸುವಾಸನೆಯಿ ದ್ದರೂ ಸಸ್ಯಗಳಲ್ಲಿ ಅವುಗಳ ಪ್ರಮಾಣ ಅತ್ಯಲ್ಪ! ಗುಲಾಬಿಯ ದಳಗಳಲ್ಲಿ ಸುಗಂಧದೆಣ್ಣೆ ಶೇಕಡ ೦·೨ ರಷ್ಟು ಕಡಿಮೆ ಅಂಶದಲ್ಲಿದೆ. ಆದರೆ ಆ ಸುಗಂಧವನ್ನು ಹೊಂದಿರದಿದ್ದಲ್ಲಿ ಗುಲಾಬಿ ಹೂ ತನ್ನೆಲ್ಲ ಬೆಡಗು, ಮೋಹಕತೆ, ರಮಣೀಯತೆ ಗಳನ್ನು ಕಳೆದುಕೊಳ್ಳುತ್ತಿತ್ತು. ಮಲ್ಲಿಗೆ ಹೂವಿ ನಲ್ಲಿ ಸುಗಂಧದೆಣ್ಣೆಯ ಅಂಶ ಗುಲಾಬಿ ಹೂವಿ ನಲ್ಲಿರುವಷ್ಟೂ ಇಲ್ಲ. ಲವಂಗದಂತಹ ವಿಶೇಷ ಮತ್ತು ಅಪೂರ್ವ ವಸ್ತುಗಳಲ್ಲಿ, ಎಣ್ಣೆಯ ಅಂಶ ಶೇಕಡ ೧೬-೧೮ ಇದೆ.

ಬೇರೆ ಬೇರೆ ಸಸ್ಯಗಳಲ್ಲಿ ಎಲೆಗಳು, ಹೂವು ಗಳು, ಬೇರುಗಳು ಮತ್ತು ತೊಗಟೆಗಳಲ್ಲಿರುವ ವಿಶೇಷ ಜೀವಕಣಗಳಲ್ಲಿ ಸುಗಂಧದೆಣ್ಣೆಯಿರು ತ್ತದೆ. 'ಯುಕ್ಲಿಪ್ಟಸ್' (ನೀಲಗಿರಿ ತೈಲದ ಮರ), ತುಳಸಿ ಮತ್ತು ನಿಂಬೆಹುಲ್ಲು—ಇವುಗಳ ಎಲೆಗಳಲ್ಲಿ ಸುಗಂಧ ಬೀರುವ 'ಬಾಷ್ಪತೈಲ' ವಿರುತ್ತದೆ. ಪರಿಮಳಯುಕ್ತ ಹೂಗಳ ಅಖಂಡ ಸಮುದಾಯವೇ ಇದೆ. ಬೇರುಗಳಲ್ಲಿ 'ವೆಟ್ರಿ ವರ್ಟ್' ಬೇರನ್ನು ಸುವಾಸನಾಯುಕ್ತ ಸಸ್ಯದ ಉದಾಹರಣೆಯಾಗಿ ನೀಡಬಹುದು. ಶ್ರೀಗಂಧದ ಮರ ಮೈಸೂರಿನ ಮತ್ತು ದಕ್ಷಿಣ ಭಾರತದ ಹೆಮ್ಮೆಯೂ ವೈಶಿಷ್ಟ್ಯವೂ ಆಗಿದೆ. ಇದರ ಕಾಂಡವು ಪರಿಮಳದ ನಿಧಿ.

ಮುಖ್ಯವಾಗಿ ಸುಗಂಧದೆಣ್ಣೆಗಳ ಉದ್ದೇಶ-ಆಕರ್ಷಣೆ. ಸಸ್ಯಗಳು ಫಲ ಧರಿಸುವುದಕ್ಕೆ ಮುಂಚೆ ಅವುಗಳಲ್ಲಿ ಸುಗಂಧದೆಣ್ಣೆಗಳ ಅಂಶ ಅತ್ಯಧಿಕವಾಗಿದ್ದು ಕ್ರಮೇಣ ಕ್ಷೀಣಿಸುತ್ತದೆ. ಹವಾಗುಣ ಮತ್ತು ಮಣ್ಣಿನ ರಚನೆ ಇವೂ ಹೂಗಳ ಪರಿಮಳಶಕ್ತಿಯ ಮೇಲೆ ಪ್ರಭಾವ ಬೀರುತ್ತವೆ. ಚಳಿಪ್ರದೇಶದಲ್ಲಿ ಕಂಪು ಸೂಕ್ಷ್ಮವಾಗಿದ್ದು, ಉಷ್ಣವಾಯು ಗುಣದಲ್ಲಿ ತೀವ್ರವಾಗುತ್ತದೆ. ಇದಕ್ಕೆ ಮುಖ್ಯ ಕಾರಣವೆಂದರೆ ಬಿಸಿ ಹವಾಮಾನದಲ್ಲಿ, ಕಂಪು ವಾಯು ರೂಪದಲ್ಲಿ ಪ್ರಸಾರವಾಗುವುದು. ಹೂವು ಮತ್ತು ಎಲೆಗಳಿಂದ ಸುಗಂಧದೆಣ್ಣೆ ತೆಗೆಯಲು 'ಆವಿ ಭಟ್ಟಿಯಿಳಿಸುವಿಕೆ' ಕ್ರಿಯೆಯನ್ನು ಅನುಸರಿಸುತ್ತಾರೆ. ಇದನ್ನು ನೀಲಗಿರಿ ತೈಲ ತಯಾರಿಕೆಯಲ್ಲಿ ಗೃಹ ಕೈಗಾರಿಕೆಯ ರೂಪಕ್ಕೆ ಪರಿವರ್ತಿಸಿಕೊಂಡಿದ್ದಾರೆ.

ಬೆಂಗಳೂರಿನ ಭಾರತ ವಿಜ್ಞಾನ ಸಂಶೋಧನಾಲಯದಲ್ಲಿ ಎರಡು ದಶಕಗಳ ಹಿಂದೆ ಮೈಸೂರಿನ ಕಾಡುಗಳಲ್ಲಿ ಬೆಳೆಯುವ ಗಂಧದೆಣ್ಣೆಯ ರಾಸಾಯನಿಕ ರೂಪ ಮತ್ತು ಅಂಶವನ್ನು ಕುರಿತು ಪರಿಶೋಧನೆ ನಡೆಯಿತು. ಇದರ ಫಲಿತಾಂಶವಾಗಿ ಸುಗಂಧದೆಣ್ಣೆಯನ್ನು ಕುರಿತು ಇತರ ಕೇಂದ್ರಗಳಲ್ಲೂ ಸಂಶೋಧನೆ ನಡೆಸಲು ಪ್ರೇರಿಕೆಯಾಯಿತು. "ಕೇಂದ್ರ ಅರಣ್ಯ ಸಂಶೋಧನಾಲಯ"ದಲ್ಲಿ ಸುಗಂಧದೆಣ್ಣೆಯ ಬಗ್ಗೆ ಶೋಧನೆ ನಡೆಯುತ್ತಿದೆ. ನೀಲಗಿರಿ ಕಲ್ಲಾರ್ ಮತ್ತು ಬರ್ಲಿಯರ್ ಸಂಶೋಧನಾ ಕೇಂದ್ರದಲ್ಲಿ ಜಾಜಕಾಯಿ (Nutmeg) ಎಲೆಯಿಂದ ಹೊಸ ಸುಗಂಧದೆಣ್ಣೆ ಶೋಧಿಸಿದ್ದಾರೆ. ಬಿಲ್ವದ ಎಲೆ, ಬಳ್ಳಾರಿ ಎಲೆ ಮತ್ತು ನಿಂಬೆಹುಲ್ಲಿನ ಎಣ್ಣೆಗಳನ್ನು ಕುರಿತು ರಾಸಾಯನಿಕ ಪರಿಶೋಧನೆ ಮಾಡುತ್ತಿದ್ದಾರೆ. ಆಧುನಿಕ ರಸಾಯನತಜ್ಞ ತನ್ನ ಪರಿಶೋಧನಾ ಪ್ರಣಾಳಿಕೆಯಿಂದ ವಿಸ್ಮಯಕಾರಿ ಪರಿಮಳಗಳನ್ನು ತಯಾರಿಸುತ್ತಾನೆ. ಆದ್ದರಿಂದ ಭವಿತವ್ಯದಲ್ಲಿ ಸೂಕ್ಷ್ಮಜೀವಿ ಸಸ್ಯಗಳ ಮೇಲೆ ಅವನು ಪರಾವಲಂಬಿಯಾಗಬೇಕಾಗಿಲ್ಲ.

"ಪರಿಮಳಗಳ ಇತಿಹಾಸ ಅತ್ಯುಜ್ವಲವೂ ಅತ್ಯಂತ ಪುರಾತನವೂ ಆದುದು. ಅದರ ಉಪಯೋಗವನ್ನು ಮೊದಲು ಕಂಡುಹಿಡಿದ ಕೀರ್ತಿ ಈಜಿಪ್ಟಿನವರದು. ಅವರಲ್ಲಿ ಸುಗಂಧಜಲ ಸ್ನಾನ ಪದ್ಧತಿಯಿತ್ತು. ಪಿರಮಿಡ್ಡುಗಳಲ್ಲಿ ಸುಗಂಧ ದ್ರವ್ಯವನ್ನು ಅಪರಿಮಿತವಾಗಿ ಉಪಯೋಗಿಸುತ್ತಿದ್ದರು. ೧೮೯೭ ರಲ್ಲಿ ಮೆನಸ್ ರಾಜನ ಗೋರಿಯನ್ನು ತೆಗೆದಾಗ, ಸಾವಿರಾರು ವರ್ಷಗಳ ಹಿಂದೆ ಸತ್ತವರಿಗಾಗಿ ಇಟ್ಟಿದ್ದ ಸುಗಂಧದ್ರವ್ಯದ ಕುರುಹು ಕಂಡು ಬಂದಿತು. ಸುಪ್ರಸಿದ್ಧ ಕವಿಯಾದ ಹೋಮರನ 'ಈಲಿಯಡ್' ಮತ್ತು 'ಒಡೆಸ್ಸಿ' ಮಹಾಕಾವ್ಯಗಳನ್ನು ಓದಿದರೆ ಅದರಲ್ಲಿ ಆ ಕವಿಶ್ರೇಷ್ಠನು ಅನೇಕ ಸುಗಂಧ ದ್ರವ್ಯಗಳ ವಿಷಯವನ್ನು ಪ್ರಾಸ್ತಾಪಿಸಿರುವುದು ಕಂಡುಬರುತ್ತದೆ."

ರಸಾಯನಶಾಸ್ತ್ರಜ್ಞರು ಅನಾನಸ್, ಸೇಬು, ಪೀಚ್ ಮತ್ತಿತರ ಹಣ್ಣುಗಳ ಸುವಾಸನೆಯನ್ನು ಹೋಲುವ ಸುಗಂಧದ್ರವ್ಯಗಳನ್ನು ಕೃತಕವಾಗಿ ತಯಾರಿಸಿದ್ದಾರೆ. ಇದೇ ರೀತಿಯಲ್ಲಿ ಗುಲಾಬಿ ಮತ್ತಿತರ ಹೂಗಳಲ್ಲಿರುವ 'ಜರೇನಿಯಮ್" ಎಂಬ ಸುಗಂಧವನ್ನು "ಸಿಟ್ರೊನಿಲ" ಎಂಬ ದುರ್ಗಂಧದೆಣ್ಣೆಯಿಂದ ತಯಾರಿಸಬಹುದು! ಇದೇ ರೀತಿಯಲ್ಲಿ ಅಸಂಖ್ಯಾತ ಕೃತಕ ಪರಿಮಳ ದ್ರವ್ಯಗಳ ತಯಾರಿಕೆ ಪ್ರಗತಿ ಪಥದಲ್ಲಿ ಬಹುದೂರ ಸಾಗಿದೆ. ವಿಜ್ಞಾನವೇ ಜೀವನಾಡಿಯಾಗಿರುವ ಇಂದಿನ ಜಗತ್ತಿನಲ್ಲಿ ಇಂತಹ ಪರಿಶೋಧನೆಗಳು ಅನೇಕ ಉದ್ಯಮಗಳ ಆರಂಭಕ್ಕೆ ಕಾರಣವಾಗಿ, ಜನತೆಗೆ ಸಂತೃಪ್ತಿಯನ್ನೂ ಅಮಿತಾನಂದವನ್ನೂ ನೀಡಿವೆ.



# ದೊಡ್ಡವರ ಬಗ್ಗೆ ಸಣ್ಣ ಕತೆಗಳು

## ಎಡಿಸನ್ನರ ಶೋಧ

ಸುಪ್ರಸಿದ್ಧ ವೈಜ್ಞಾನಿಕರಾದ ಎಡಿಸನ್ನರ ಗೌರವಾರ್ಥ ಭೋಜನಸಮಾರಂಭವೊಂದು ಏರ್ಪಡಿಸಲ್ಪಟ್ಟಿತ್ತು. ಆ ಸಮಯದಲ್ಲಿ ಮುಖ್ಯ ಭಾಷಣಕಾರರು ಸುದೀರ್ಘವಾಗಿ ಮಾತಾಡಿ ಎಡಿಸನ್ನರ ಹೊಸ ಹೊಸ ಶೋಧಗಳ ವಿಚಾರ ವನ್ನು ಪ್ರಸ್ತಾಪಿಸಿ ಅವರನ್ನು ಹೊಗಳಿ ಅದ್ಭುತ ವಾದ ಮಾತಾಡುವ ಯಂತ್ರವನ್ನು ಅವರು ಶೋಧಿಸಿದ್ದಾರೆ ಎಂದರು.

ಎಡಿಸನ್ನರು ತಟಕ್ಕನೆ ಎದ್ದುನಿಂತು ಹೇಳಿ ದರು: "ನನ್ನ ಬಗ್ಗೆ ಹೇಳಿದ ಗೌರವದ ಮಾತು ಗಳಿಗಾಗಿ ನಾನು ತುಂಬ ಆಭಾರಿಯಾಗಿದ್ದೇನೆ. ಆದರೆ ಒಂದು ವಿಚಾರದಲ್ಲಿ ಮಾತ್ರ ತಪ್ಪು ಕಲ್ಪನೆಯಾಗುವ ಸಂಭವವಿದೆ. ಮಾತಾಡುವ ಯಂತ್ರವನ್ನು ದೇವರು ತಯಾರಿಸಿದ್ದಾನೆ. ಆದರೆ ಬೇಡದಿದ್ದಾಗ ನಿಲ್ಲಿಸಲು ಬರುವ ಮಾತಾಡುವ ಯಂತ್ರವನ್ನು ಮಾತ್ರ ನಾನು ಮೊಟ್ಟಮೊದಲಾಗಿ ಶೋಧಿಸಿದ್ದೇನೆ.''

## ತಂತಿಯ ಚಮತ್ಕಾರ

ಅದ್ಭುತ ರೋಮಾಂಚಕಾರಿ ಪತ್ತೇದಾರಿ ಕಾದಂಬರಿಗಳ ಲೇಖಕರಾದ ಸರ್ ಆರ್ಥರ ಕಾನನ್ ಡಾಯಲ್ ಒಮ್ಮೆ ತಮ್ಮ ಹನ್ನೆರಡು ಜನ ಸ್ನೇಹಿತರಿಗೆ ಒಂದು ತಂತಿ ಕಳುಹಿದರು. ಈ ಹನ್ನೆರಡು ಜನರೂ ತಮ್ಮ ಊರಿನಲ್ಲಿ ಪ್ರಾಮಾಣಿಕತೆ ಮತ್ತು ಘನತೆಗಳಿಗಾಗಿ ಹೆಸ ರಾಂತವರಾಗಿದ್ದರು. ಸರ್ ಆರ್ಥರರು ಅವರಿಗೆ ಕಳಿಸಿದ ತಂತಿಯಲ್ಲಿ " ರಹಸ್ಯ ಸ್ಫೋಟವಾಗಿದೆ. ಕೂಡಲೆ ಕಣ್ಮರೆಯಾಗಿರಿ," ಎಂದು ಬರೆದಿದ್ದರು. ತಂತಿ ಮುಟ್ಟಿದ ೨೪ ತಾಸುಗಳಲ್ಲಿ ಈ ಹನ್ನೆರಡು ಜನರಲ್ಲಿ ಪ್ರತಿ ಯೊಬ್ಬರೂ ಊರಿನಿಂದ ಮಾಯವಾಗಿದ್ದರು ಎಂದು ಹೇಳುತ್ತಾರೆ.

## ಹೆಸರೇನು ?

ವಿಖ್ಯಾತ ಕಾದಂಬರಿಕಾರ ಅಲೆಗ್ಝಾಂಡರ ಡ್ಯೂಮಾ ತನ್ನ ಸಲುವಾಗಿ ಒಂದು ಮನೆ ಕಟ್ಟಿಸಲು ತೊಡಗಿದ್ದನು. ಗೋಡೆಗಳಿನ್ನೂ ಪೂರ್ತಿಯಾಗದಿರುವಾಗಲೇ ಮನೆಯನ್ನು ಇತರರಿಗೆ ತೋರಿಸಬೇಕೆನ್ನುವ ಆತುರದಲ್ಲಿ ಅವನು ತನ್ನ ಮಿತ್ರರನ್ನು ಭೋಜನಕ್ಕೆ ಆಮಂತ್ರಿಸಿದನು.

ಊಟವಾದ ಬಳಿಕ ಸಕಲರೂ ಮನೆ ನೋಡಲು ಹೊರಟರು. ಆದರೆ ಅಲ್ಲಿ ಇನ್ನೂ ಪೂರ್ತಿ ಏಳದಿರುವ ಗೋಡೆಗಳು, ಸುಣ್ಣ, ಇಟ್ಟಂಗಿ, ಮಣ್ಣುಗಳ ರಾಶಿಯಲ್ಲದೆ ಇನ್ನೇನೂ ಇರಲಿಲ್ಲ.

ಆದರೆ ಡ್ಯೂಮಾ ಕಾದಂಬರಿಕಾರನಲ್ಲವೆ? ತನ್ನ ಕಲ್ಪನೆಯ ಮನೆಯ ವರ್ಣನೆಯನ್ನು ಅವನು ಮಾಡತೊಡಗಿದನು: "ಈ ಗೋಡೆಯ ಒಂದು ಮೂಲೆಯ ಮೇಲೆ ಕಾಮದೇವನ ಮೂರ್ತಿಯೊಂದನ್ನು ಇಡಲಾಗುವದು. ಇಲ್ಲಿ ರೇಶಿಮೆಯ ಪಡದೆ ತೂಗಾಡುವದು. ನೆಲದ ಮೇಲೆ ನಡುನಡುವೆ ಸಂಗಮರವರೀ ಕಲ್ಲಿನ ಹಲಗೆಗಳಿರುವವು. ಪಡದೆಯನ್ನು ಸರಿಸಿ ಕೊಂಡು ಓರ್ವ ತರುಣಿ ಪ್ರವೇಶಿಸುವಳು. ಅವಳ ನೂರಾರು ಪ್ರತಿಬಿಂಬಗಳು ಇಲ್ಲಿ ನೀರಿ ನಲ್ಲಿ ಕುಣಿದಾಡುವವು. ಮತ್ತು. . . . .''

ಅಷ್ಟರಲ್ಲಿ ಅತಿಥಿಗಳಲ್ಲಿ ಒಬ್ಬರು, "ಸರಿ. ಆದರೆ ಮೊದಲಿಗೆ ಈ ಕಾದಂಬರಿಗೆ ಏನು ಹೆಸರಿಟ್ಟಿರುವಿರಿ ಹೇಳಿರಿ'' ಎಂದರು.

## ಶರಚ್ಚಂದ್ರರ ಪ್ರೇಮಿಕೆ

ದಿವಂಗತ ಶರಚ್ಚಂದ್ರರಿಗೆ ಬಂದ ನೂರಾರು ಪತ್ರಗಳಲ್ಲಿ ಒಂದು ಮಹಿಳೆಯೊಬ್ಬಳಿಂದ ಬಂದುದಾಗಿತ್ತು. ಅವಳು ಅದರಲ್ಲಿ ಹೀಗೆ ಬರೆದಿದ್ದಳು. "ನಿಮ್ಮ ಪುಸ್ತಕಗಳು ನನಗೆ ಅತ್ಯಂತ ಮೆಚ್ಚುಗೆಯವಾಗಿವೆ. ಅವನ್ನು ಎಷ್ಟುಬಾರಿ ಓದಿದರೂ ನನಗೆ ತೃಪ್ತಿಯೇ ಉಂಟಾಗುವುದಿಲ್ಲ. ಅದರಲ್ಲಿಯೂ ಹೆಂಗಸರ ಮೇಲಿನ ನಿಮ್ಮ ಉದಾರ ಭಾವನೆಯನ್ನು ನೋಡಿ ನನಗೆ ನಿಮ್ಮಲ್ಲಿ ಹೆಚ್ಚಿನ ಶ್ರದ್ಧೆ ಉಂಟಾಗಿದೆ. ನಿಮ್ಮನ್ನು ಒಮ್ಮೆ ನೋಡದೆ ನನಗೆ ಸಮಾಧಾನವಾಗದು. ಎಲ್ಲಿ ಮತ್ತು ಯಾವಾಗ ನಿಮ್ಮೊಡನೆ ಸರಿಯಾಗಿ ಭೆಟ್ಟಿಯಾಗಲು ಅವಕಾಶವಿದೆಯೆಂದು ದಯವಿಟ್ಟು ಬರೆಯಿರಿ. ನಿಮ್ಮ ಉತ್ತರ ನೋಡಿದ ಬಳಿಕ ಕಲಕತ್ತೆಗೆ ಬಂದು ನಾನು ಭೆಟ್ಟಿಯಾಗುವೆನು. ನಿಮ್ಮ ಉತ್ತರವನ್ನೆ ನಿರೀಕ್ಷಿಸುತ್ತಿರುವೆನು.''

ಈ ಪತ್ರಕ್ಕೆ ಉತ್ತರ ಬರೆದು ಶರಚ್ಚಂದ್ರರು ಹೀಗೆ ತಿಳಿಸಿದರು :

"ನನ್ನ ದೇಹವು ಯಾವುದೇ ರೀತಿಯಿಂದ ನೋಡತಕ್ಕಷ್ಟು ಸುಂದರವಾಗಿಲ್ಲ. ಅಲ್ಲದೆ ನನ್ನನ್ನು ನೋಡಿದ ಬಳಿಕ ನಿಮ್ಮ ಶ್ರದ್ಧೆಯೆಲ್ಲವೂ ಕಳೆದುಹೋಗುವುದು.''

ಒಂದು ವಾರದ ಬಳಿಕ ಆಕೆ ಶರಚ್ಚಂದ್ರರಿಗೆ ಮತ್ತೆ ಉತ್ತರ ಬರೆದಳು :

"ನನ್ನ ಈ ಗಂಭೀರವಾದ ಪ್ರೇಮಕ್ಕೆ ಪ್ರತಿಯಾಗಿ ಏನೂ ದೊರೆಯಲಾರದೆ ? ನೀವು ಇಷ್ಟು ನಿಷ್ಠುರರಾಗಿರುವಿರಾ ? ಒಬ್ಬ ಹೆಂಗಸಿನ ಪ್ರೇಮಕ್ಕಾಗಿ ಬ್ರಿಟಿಶ ಸಾಮ್ರಾಜ್ಯವನ್ನೇ ಎಡ್ವರ್ಡ್ ದೊರೆ ತೊರೆದಿರುವಾಗ ಸ್ತ್ರೀಯರ ಬಗ್ಗೆ ಸಹಾನುಭೂತಿ ಇರುವ ನಿಮ್ಮಂಥವರು ಒಬ್ಬ ಮಹಿಳೆಯ ಪ್ರೇಮ ನಿವೇದನೆಯನ್ನು ತಿರಸ್ಕರಿಸುವಿರಾ ?''

ಶರತಚಂದ್ರರು ಆ ಪತ್ರಕ್ಕೆ ಉತ್ತರವನ್ನೇ ಬರೆಯಲಿಲ್ಲ. ಅವರ ಭೆಟ್ಟಿಗಾಗಿ ಕಾತರಿಸುತ್ತಿದ್ದ ಮಹಿಳೆ ಅವರ ಭೆಟ್ಟಿಗೆ ಬರುವುದು ಇದರಿಂದ ತಪ್ಪಿತು.

---

ಗೊತ್ತಿರುವ ಅಪರಿಚಿತರು—೩



# ಸಹಪ್ರಯಾಣಿಕ

ಕೆ. ಡಿ. ಕುರ್ತಕೋಟಿ

ಗಾಡಿಯ ವೇಗ ಎಂದಿನಂತೆ ಸಾವಕಾಶವಾಗಿತ್ತು. ಎಡಬಲಕ್ಕೆ ಭಣಗುಟ್ಟುವ ಬಯಲಿನಲ್ಲಿ, ಹೆಜ್ಜೆಹೆಜ್ಜೆಗೆ ನಿಲ್ಲುತ್ತ ತೇಕುತ್ತ, ಮುಂದೆ ಸಾಗದಿದ್ದರೆ ವಿಧಿಯಿಲ್ಲ ಎಂಬ ಅರಿವಿನಿಂದ ಒದ್ದಾಡುತ್ತ, ಬೇಸತ್ತ ಮುದುಕನ ಜೀವನದಂತೆ ಗಾಡಿ ಮುಂದುವರಿಯುತ್ತಿತ್ತು. ನಾನು ಇಳಿಯಬೇಕಾದ ಸ್ಟೇಶನ್ನಿಗೆ ಗಾಡಿ ಮುಟ್ಟಬೇಕಾದರೆ ಇನ್ನೂ ಮೂರು ತಾಸು ಅವಧಿಯಿತ್ತು. ಅದನ್ನು ನೆನೆದು ಮನಸ್ಸಿನಲ್ಲಿ ಸಂಕಟ ಹುಟ್ಟಿತು.

ಜೀವನದಂತೆಯೇ ಪ್ರವಾಸವೂ ಅಪರಿಹಾರ್ಯವಾದ ದುಃಖಗಳಲ್ಲಿ ಒಂದು ಎಂಬ ಸತ್ಯ ಗಾಡಿ ಹತ್ತಿದ ಕೂಡಲೆ ನನಗೆ ಹೊಳೆದು ಎಚ್ಚರಿಕೆಯನ್ನು ಕೊಡುತ್ತದೆ. ಆದರೆ ಅಂದು ಮನಸ್ಸಿನ ಈ ನಂಬಿಕೆಯನ್ನೂ ಮೀರಿ ಬೇಸರ ತುಂಬಿತ್ತು. ಓದಲಿಕ್ಕೆಂದು ಕೊಂಡ ವರ್ತಮಾನಪತ್ರ ಅವರಿವರು ಓದಲಿಕ್ಕೇ ಇಸಿದುಕೊಂಡಿದ್ದರು; ಅವರ ಕೈಯಿಂದ ಅದಿನ್ನೂ ನನ್ನ ಕೈಗೆ ಬಂದಿರಲಿಲ್ಲ. ಎಂದೂ ಊರಿಗೆ ಹೋಗಬೇಕಾದಾಗ ಪತ್ರಿಕೆಯನ್ನು ಕೊಳ್ಳಬಾರದು ಎಂದು ಸಾವಿರ ಸಾರೆ ಪ್ರತಿಜ್ಞೆ ಮಾಡಿ ಅಷ್ಟೇ ಸಲ ಅದನ್ನು ಮುರಿದಿದ್ದೇನೆ. ಇನ್ನು ಬೇಸರ ಕಳೆಯಲು ಏನು ಮಾರ್ಗ ಎಂದು ವಿಚಾರ ಮಾಡಿಯೇ ಬೇಸರ ಹುಟ್ಟಿತು.

'ದೊಂಗಲುನ್ನಾರು ಜಾಗ್ರತ' ಮೊದಲಾದ ಸಾಹಿತ್ಯವನ್ನು ಮೂರನೆಯ ಸಾರೆ ಓದಿ ಮುಗಿಸಿದೆ. ತೆಲುಗಿನ ಮಾದರಿಯ ಕನ್ನಡ ಅಕ್ಷರಗಳ

ಲಿಪಿಸೌಂದರ್ಯವನ್ನು ಕಷ್ಟಪಟ್ಟು ಮೆಚ್ಚಲು ಪ್ರಯತ್ನ ಮಾಡಿದೆ. ಗಾಡಿಯಲ್ಲಿದ್ದಾಗ ನನಗೆ ನಿದ್ದೆ ಬೇರೆ ಬರುವದಿಲ್ಲ. ಕೆಲವರು ಈ ಕಲೆಯನ್ನು ಅನಾಯಾಸವಾಗಿ ಸಾಧಿಸಿರುತ್ತಾರೆ. ನನ್ನ ಗೆಳೆಯನೊಬ್ಬ ಯಾವದೇ ಕಾರಣದಿಂದ ನಿದ್ದೆ ಬರದಿದ್ದರೆ ಗಾಡಿ ಹತ್ತುತ್ತಿದ್ದ. ಅಂಥವರ ವಿಷಯವಾಗಿ ನನಗೆ ಯಾವಾಗಲೂ ಅಸೂಯೆ ತಪ್ಪಿದ್ದಲ್ಲ.

ಆದರೆ ನನ್ನ ಬೇಸರಕ್ಕೆ ಇನ್ನೊಂದು ಮಹತ್ವದ ಕಾರಣವಿತ್ತು. ನನ್ನ ಹತ್ತಿರ ಕುಳಿತ ಇನ್ನೊಬ್ಬ ಮನುಷ್ಯ ನನ್ನ ಹೆಗಲ ಮೇಲೆ ನಿರಾತಂಕವಾಗಿ ನಿದ್ದೆ ಮಾಡುತ್ತಿದ್ದ.

ನಾನು ಆ ಮನುಷ್ಯನನ್ನು ಎಬ್ಬಿಸಬಹುದಾಗಿತ್ತು. ಹೀಗೆ ಇನ್ನೊಬ್ಬರ ಹೆಗಲ ಮೇಲೆ ನಿದ್ದೆ ಮಾಡುವದು ಸಭ್ಯತೆಯ ಲಕ್ಷಣವಲ್ಲ ಎಂದು ಒಂದು ಉಪನ್ಯಾಸವನ್ನೂ ಬಿಗಿಯಬಹುದಾಗಿತ್ತು. ಆದರೆ ಮೊದಲೇ ಹೇಳಿಬಿಡುತ್ತೇನೆ. ಆ ಮನುಷ್ಯ ಹೀಗೆ ನಿದ್ದೆಮಾಡುವದರ ಹಿಂದೆ ಒಂದು ಇತಿಹಾಸವೇ ಅಡಗಿತ್ತು.

ಅವನು ಯಾವುದೋ ನಡುವಿನ ಒಂದು ಸ್ಟೇಶನ್ನಿನಲ್ಲಿ ಹತ್ತಿದ್ದ. ಆಜಾನುಬಾಹುವಾದ ಆಳು; ಖಾದಿ ನೆಹರು ಶರ್ಟು, ಗಾಂಧಿ ಟೊಪ್ಪಿಗೆ, ಕೈಯಲ್ಲಿ ಕೊಡೆಯೊಡನೆ ಕಾಗದ ಪತ್ರಗಳನ್ನಿಟ್ಟಿದ್ದ ಒಂದು ಚೀಲ, ಆ ದಿನದ ಸುದ್ದಿಸಮಾಚಾರಗಳನ್ನೆಲ್ಲ ತುಂಬಿಕೊಂಡಿದ್ದ ಅವನ ಮಾತುಕತೆ, ಇಂದಿನ ರಾಜಕಾರಣವೇ ಮೈವೆತ್ತು ಬಂದಂತೆ ಕಾಣುತ್ತಿದ್ದ.

ಗಾಡಿಹತ್ತಿದ ಕೂಡಲೆ ನೇರವಾಗಿ ನನ್ನ ಹತ್ತಿರವೇ ಬಂದು 'ಸ್ವಲ್ಪ ಸರೀರಿ ರಾಯರ' ಎಂದು ಸ್ವಲ್ಪ ಅಧಿಕಾರವಾಣಿಯಿಂದ ಹೇಳಿದ. ಅವನ ದನಿಯಲ್ಲಿ ನಾಲ್ಕಾರು ಗ್ರಾಮಪಂಚಾಯತಿ ಚುನಾವಣೆಗಳ ವಿಜಯ ಘೋಷ ಕೇಳಿಸುತ್ತಿತ್ತು. ನಾನು ಅವನನ್ನು ಒಮ್ಮೆ ಮಾತ್ರ ಕಣ್ಣೆತ್ತಿ ನೋಡಿದೆ. ಅವನ ಮುಖಮುದ್ರೆಯಲ್ಲಿ ಜೇಲು, ಸತ್ಯಾಗ್ರಹ, ಉಪವಾಸ, ಲಾಠೀಪ್ರಹಾರ ಇವೆಲ್ಲವುಗಳ ಚಿತ್ರ ಒಂದಾದ ಮೇಲೊಂದು ಮೂಡಿಬಂದವು. ಅವನ ವ್ಯಕ್ತಿತ್ವಕ್ಕೇ ಸೋತು ನಾನು ಸರಿದು ಕುಳಿತೆ.

ಅವನು ಆ ಸ್ಥಳದಲ್ಲಿ, ಎಡಬಲದವರನ್ನು ಇನ್ನೂ ಸರಿಸಿ ತನ್ನ ಗಾತ್ರಕ್ಕೆ ಅನುಕೂಲವಾಗುವಂತೆ ಕೈಕಾಲು ಚಾಚಿ ಕುಳಿತ. ಆ ಮೇಲೆ ನನ್ನ ಕಡೆಗೆ ತಿರುಗಿ ನೋಡಿ, ನನ್ನ ಹೆಸರು, ಉದ್ಯೋಗ, ನನ್ನ ಪ್ರವಾಸದ ಉದ್ದೇಶ, ನನ್ನ ಮುಖದ ನಿಸ್ತೇಜತೆಗೆ ಕಾರಣ ಇವೆಲ್ಲವನ್ನೂ ವಿವರವಾಗಿ ಕೇಳಿಕೊಂಡ. ಇನ್ನೊಬ್ಬರ ಸುದ್ದಿ ಇವನಿಗೇಕೆ ಎಂದು ನಾನು ಎಷ್ಟು ಅಲಕ್ಷ್ಯ ಮಾಡಿದರೂ ಅವನು ಕೇಳಲಿಲ್ಲ. ಕೆಲವರ ಸ್ವಭಾವವೇ ಹಾಗೆ. ಬೇರೆಯವರ ಗುಟ್ಟನ್ನು ಹೊರಗೆಳೆಯುವ ಕಲೆಯನ್ನು ಅವರು ಹೇಗೋ ಸಾಧಿಸಿರುತ್ತಾರೆ. ನಿಮಗೆ ಬೇಕಾಗಲಿ ಬಿಡಲಿ, ನಿಮ್ಮ ಜೀವನರಹಸ್ಯವನ್ನು ನೀವೇ ಅವರೆದುರಿಗೆ ಹೇಳಿಬಿಡುತ್ತೀರಿ.

ನನ್ನ ಈ ಜೊತೆಗಾರನೂ ಅದೇ ವರ್ಗಕ್ಕೆ ಸೇರಿದವನಿದ್ದ. ನನ್ನ ಉತ್ತರದ ಒಂದು ಎಳೆಯನ್ನು ಬಹಳ ಕುಶಲವಾಗಿ ಎಳೆದು ನನ್ನ ಜೀವನವೃತ್ತಾಂತವನ್ನು ನನ್ನಿಂದ ಹೊರಡಿಸಿದ.

ಇಷ್ಟಾದ ಮೇಲೆ ಅವನ ದೃಷ್ಟಿ ಉಳಿದ ಪ್ರಯಾಣಿಕರ ಕಡೆಗೆ ತಿರುಗಿತು. ಅವರಲ್ಲಿ ಈ ಮಹಾನುಭಾವನ ಪರಿಚಿತನೊಬ್ಬನಿದ್ದ. ಆದರೆ ಅವನು ಸ್ವಲ್ಪ ದೂರ ಕುಳಿತಿದ್ದ. ಆದರೆ ಸ್ನೇಹಕ್ಕೆ ಅಂತರದ ಲಕ್ಷ್ಯವೆಲ್ಲಿ? ಅವರಿಬ್ಬರೂ ಮಾತನಾಡತೊಡಗಿದರು.

ಅವರ ದನಿ ಗಾಡಿಯ ಸಪ್ಪಳವನ್ನೂ ಮೀರಿ ಏರತೊಡಗಿತ್ತು. ಅವರ ಭಾಷೆಯಲ್ಲಿ ಬಯಲುನಾಡಿನ ಕಸುವು ಕೆಚ್ಚು ತುಂಬಿತ್ತು. ಒಬ್ಬರಿಂದೊಬ್ಬರಿಗೆ ಎಲೆಅಡಿಕೆಗಳು ಕುಳಿತವರ ತಲೆಯ ಸಾಲುಗಳ ಮೇಲಿಂದ ಹಾದು ಬಂದವು. ಹರಟೆಗೆ ರಂಗು ಏರಬೇಕಾದರೆ ಎಲೆ ಅಡಿಕೆ ಬೇಕೇಬೇಕು. ಹರಟೆಯಲ್ಲಿ ಮಗ್ನರಾದ ಅವರಿಬ್ಬರಿಗೂ ಉಳಿದವರ ಲಕ್ಷ್ಯ ಸ್ವಲ್ಪವೂ ಇರಲಿಲ್ಲ. ನಾನು ಕುತೂಹಲದಿಂದ ಅವರ

ಹರಟೆಯ ವಿಷಯ ವೈವಿಧ್ಯವನ್ನು ಮನಸ್ಸಿನಲ್ಲಿಯೇ ಅಳೆಯುಹತ್ತಿದೆ.

ಗ್ರಾಮಪಂಚಾಯತಿಯ ರಾ ಜ ಕಾ ರ ಣ, ಯಾವನೋ ಗೌಡನ ಕೊಲೆ, ಸುಳ್ಳು ಸಾಕ್ಷಿ, ಕಳವು, ಇಂಥ ಸ್ಥಾನಿಕ ಸುದ್ದಿಗಳಿಂದ ಹಿಡಿದು ಸುಯೇಜ್ ಕಾಲುವೆಯ ವರೆಗೆ ಅವರ ಹರಟೆ ಸಂಚರಿಸುತ್ತಿತ್ತು.

ನನ್ನ ಹತ್ತಿರ ಕುಳಿತವ ತನ್ನ ಪರಾಕ್ರಮವನ್ನೂ ಹೇಳತೊಡಗಿದ್ದ. ಒಂದು ಬಣಿವೆಯನ್ನು ಸುಡುವ ಪ್ರಸಂಗದಲ್ಲಿ ತಾನು ಹೇಗೆ ನಾಯಕನಾಗಿದ್ದೆ, ಲಂಚ ಕೇಳಿದ ಒಬ್ಬ ಶ್ಯಾನುಭೋಗನನ್ನು ಹೇಗೆ ಹೊಡೆದು ಊರಿಂದ ಓಡಿಸಿದೆ, ಎನ್ನುವದನ್ನೆಲ್ಲ ರಂಜಿಸುವಂತೆ ವರ್ಣಿಸುತ್ತಿದ್ದ.

ಮಾತುಮಾತಿಗೊಮ್ಮೆ 'ನಾ ಒಳ್ಳೆ ಮನಶ್ಯಾ ಅಲ್ಲ ಬಿಡು, ಹೇಳಿ ಮಾಡಿಸಿದ ನೀಚ' ಎಂದು ಅನ್ನುತ್ತಿದ್ದ. ನೀಚಕೃತಿಗಳನ್ನು ಮಾಡುವದರಲ್ಲಿ, ಅವನ್ನು ಇನ್ನೊಬ್ಬರಿಗೆ ಹೇಳುವದರಲ್ಲಿ ಅವನಿಗಿರುವ ಅಭಿಮಾನ ವಿಲಕ್ಷಣವಾಗಿತ್ತು. 'ಸ್ವಂತ ನನ್ನ ಹೇಣ್ತಿನ್ನ, ಈಗ ಹತ್ತು ವರ್ಷದ ಮ್ಯಾಲೆ ಆಯ್ತು, ಇದ್ದಾಳೋ ಸತ್ತಾಳೋ ತಿರುಗಿ ನೋಡಿಲ್ಲ. ಅಂದಮ್ಯಾಲೆ ಉಳಿದವರ್ನ ಕೇಳ್ತೇನೇ ನಾನು? ಒಳ್ಳೇದಕ್ಕ ಒಳ್ಳೆವನೇ ನಾನು, ಕೆಟ್ಟದು ಬಂತಂದರ ಜಗತ್ತಿನ್ಯಾಗಿಲ್ಲದ ಕಟುಕ ನಾನು.' ಇಂಥ ಶಕ್ತಿಯನ್ನೇ ಆಧಾರವಾಗಿಟ್ಟುಕೊಂಡು ಅವನು ಬದುಕಿದ್ದ. ಅವನ ಆತ್ಮಚರಿತ್ರೆಯ ಈ ತುಣುಕಿನಲ್ಲಿ ಹಿಂದಿನ ಕಾಲದ ಪಾಳೆಯಗಾರರ ದರ್ಪ ಕಾಣುತ್ತಿತ್ತು. ಒಳ್ಳೆಯತನ ಅವನ ಕಣ್ಣಿನಲ್ಲಿ ಬದುಕಲನರ್ಹವಾದ ವಸ್ತುವಾಗಿತ್ತು. 'ಒಳ್ಳೇತನಕ್ಕ ಇದು ಕಾಲ ಅಲ್ಲೇನಪಾ. ಒಳ್ಳೇತನದಿಂದ ನಡದರ ಮನೀಹೇಣ್ತಿ ಹೊತ್ತಿಗೆ ಊಟಕ್ಕ ಹಾಕೂದುಲ್ಲ, ಇನ್ನ ಮಂದಿ ಯಾಕ ಕೇಳತಾರು?' ನನ್ನ ಎದೆ ಧಸಕ್ಕೆಂದಿತು. ಅಭ್ಯಾಸ, ಸಂಸ್ಕೃತಿ ಇವುಗಳಿಂದ ರೂಪಿತವಾಗಿ ನಾನು ಬಹಳ ಪ್ರೀತಿಯಿಂದ ಜೋಕೆ ಮಾಡಿಕೊಂಡು ಬಂದಿದ್ದ ನನ್ನ ಜೀವನತತ್ವವನ್ನೇ ಈ ಪ್ರಾಣಿ ಬೇರು ಹಿಡಿದು ಅಲುಗಾಡಿಸಿದ್ದ. ಆ ಕ್ಷಣದಲ್ಲಿ ನನ್ನನ್ನು ನಾನೇ ಹಳಿದುಕೊಂಡೆ. ಅವನು ಕೆಟ್ಟವನೇ ಇರಲಿ, ಒಳ್ಳೆಯ ಮನುಷ್ಯನೇ ಆಗಿರಲಿ ಅವನು ಬದುಕಲು ಯೋಗ್ಯವಾದ ವ್ಯಕ್ತಿ ಎಂದು ನನಗನಿಸಿತು.

ಅವನೆಬ್ಬಿಸಿದ ಕೋಲಾಹಲಕ್ಕೆ ಇಡೀ ಡಬ್ಬಿಯೇ ಜಾಗೃತವಾಗಿತ್ತು. ಪ್ರವಾಸದಲ್ಲಿ ಇದು ಹೊಸದೇನೂ ಅಲ್ಲ. ಆಕಸ್ಮಿಕಗಳು ಕೇವಲ ಅಪಘಾತದಲ್ಲಿ ಮಾತ್ರವೇ ಅಲ್ಲ, ಗಾಡಿ ಸುಸೂತ್ರವಾಗಿ ನಡೆದಾಗಲೂ ಸಂಭವಿಸುತ್ತವೆ. ಅವರಿಬ್ಬರ ಹರಟೆಯ ಬಿರುಗಾಳಿಗೆ ಉಳಿದವರೆಲ್ಲ ಬೆರಗುಗೊಂಡು ಸುಮ್ಮನೆ ಕುಳಿತಿದ್ದರು. ಪಂಡಿತರ ವಾದವನ್ನಾಗಲಿ, ಪಾರ್ಲಿಮೆಂಟಿನ ಚರ್ಚೆಯನ್ನಾಗಲಿ, ಉತ್ತಮ ವಾಗ್ಮಿಯೊಬ್ಬನ ಭಾಷಣವನ್ನಾಗಲಿ ಯಾರೂ ಇಷ್ಟು ಆಸ್ಥೆಯಿಂದ ಕೇಳುವದಿಲ್ಲ.

ನನಗೆ ಕೂಡಲೆ ಒಂದು ವಿಚಾರ ಹೊಳೆಯಿತು. ಭಾಷಣ ಮಾಡುವ ಚಟವಿದ್ದವರೆಲ್ಲ ಹೀಗೆ ಗಾಡಿಯಲ್ಲಿ ಏಕೆ ಭಾಷಣ ಮಾಡಬಾರದು? ಉಪನ್ಯಾಸದ ಕಾರ್ಯಕ್ರಮವನ್ನಿಟ್ಟರೆ, ಶ್ರೋತೃಗಳಿಗೆ ಕೂಡಲಿಕ್ಕೆ ಒಳ್ಳೆಯ ವ್ಯವಸ್ಥೆ ಮಾಡಿದರೂ ಯಾರೂ ಬರುವದಿಲ್ಲ. ಇಲ್ಲಿ ಮಾತ್ರ ಎಷ್ಟು ಆಸ್ಥೆಯಿಂದ ಕೇಳುತ್ತಾರೆ! ಲಂಡನ್ನಿನ ಹೈಡ್ ಪಾರ್ಕಿನಲ್ಲಿ Soap-box orators ಎಂಬ ಭಾಷಣಕಾರರ ಪರಂಪರೆಯೇ ಇದೆಯಂತೆ. ಪಾರ್ಕಿಗೆ ಹೇಗೂ ಜನರು ಬರುತ್ತಾರೆ. ಬಂದವರೆದುರಿಗೇ ಒಂದು ಸಾಬಾಣದ ಡಬ್ಬಿಯನ್ನಿಟ್ಟು ಅದರ ಮೇಲೆ ನಿಂತುಕೊಂಡು ಈ ಭಾಷಣಕಾರರು ಮಾತನಾಡುತ್ತಾರಂತೆ. ಭಾಷಣ ನಡೆದಲ್ಲಿಗೇ ಜನರು ಹೋಗುವದಕ್ಕಿಂತ ಜನರ ಕಡೆಗೆ ಭಾಷಣ ಹೋಗುವದು ಒಳ್ಳೆಯದು ನಮ್ಮಲ್ಲಿಯೂ 'ಗಾಡಿಯಭಾಷಣಕಾರ'ರ ಪರಂಪರೆ ಏಕೆ ಬೆಳೆಯಬಾರದು?

ಅಂತೂ ಕೊನೆಗೊಮ್ಮೆ ಅವರ ಹರಟೆ ಮುಕ್ತಾಯವಾಯಿತು. ನನ್ನ ಸಹಪ್ರಯಾಣಿಕನಿಗೆ ಬೇಸರ ಬಂದಿತ್ತು. ಮೆಲ್ಲಗೆ ನನ್ನ ಕಡೆಗೆ ತಿರುಗಿದ 'ರಾಯರ, ಹತ್ತು ಮೈಲು ನಡದು

ಬಂದೀಸಿ. ಕೈಕಾಲು ಮಾತಾಡಲಿಕ್ಕೆ ಹತ್ಯಾವ (ಅಕ್ಷರಶಃ ನಿಜ) ಸ್ವಲ್ಪ ಮಲಕೋತೀನ್ರಿ' ಎಂದು ಉತ್ತರಕ್ಕೂ ಹಾದಿಕಾಯದೆ, ಕಣ್ಣು ಮುಚ್ಚಿ ತೆರೆಯುವಷ್ಟರಲ್ಲಿ ನನ್ನ ಹೆಗಲ ಮೇಲೆ ಒರಗಿಯೇಬಿಟ್ಟ.

ನನಗೆ ಸಿಟ್ಟು ಬಂದಿತು; ಆದರೆ ಯಾರ ಮೇಲೆ ತೀರಿಸಿಕೊಳ್ಳಬೇಕು? ಅವನು ತನ್ನ ಜೀವನ ಸಿದ್ಧಾಂತವನ್ನು ನನ್ನ ಮೇಲೆಯೇ ಪ್ರಯೋಗಿಸಬಹುದೆಂದು ನನಗೇನು ಕನಸು ಬೀಳಬೇಕೇ? ಇನ್ನು ಅವನನ್ನು ಎಬ್ಬಿಸಿ ಜಗಳ ತೆಗೆಯುವಷ್ಟು ಧೈರ್ಯ ನನ್ನಲ್ಲಿರಲಿಲ್ಲ. ಅದರಿಂದ ಪ್ರಯೋಜನವೂ ಕಾಣಲಿಲ್ಲ. ಇದೂ ಒಂದು ಒತ್ತಾಯದ ಗುಡ್‌ಟರ್ನ್ ಎಂದು ಮನಸ್ಸಿಗೆ ಹೇಳಿಕೊಂಡು ಸಮಾಧಾನ ಹಚ್ಚಿಕೊಂಡೆ. ನನಗೆ ನಿದ್ದೆ ಬರದಿದ್ದರೆ ಉಳಿದವರಿಗೂ ಬರಬಾರದೇ ಎಂದು ನನಗೆ ನಾನೇ ಬುದ್ಧಿ ಹೇಳಿಕೊಂಡೆ. ಏನಾದರೂ ಏನು, ಅವನ ಭಾರ ನನ್ನ ಮೇಲಿತ್ತು. ಪರಶುರಾಮನ ಭಾರವನ್ನು ಹೊತ್ತ ಕರ್ಣನಂತೆ ನಾನೂ ಸಹಿಸಿಕೊಂಡೆ. (ಪುಣ್ಯಕ್ಕೆ ಭ್ರಮರವೊಂದು ಬಂದಿರಲಿಲ್ಲ.)

ಹೀಗೆಯೇ ಎಷ್ಟೋ ಹೊತ್ತು ಸಾಗಿತು. ಮನಸ್ಸಿನಲ್ಲಿ ಸವಿಯಾದ ವಿಚಾರಗಳನ್ನು ತಂದುಕೊಂಡು ಬೇಸರವನ್ನು ಕಳೆದುಕೊಳ್ಳಲು ಪ್ರಯತ್ನಿಸಿದೆ. ಆದರೆ ವಿಚಾರಗಳು ಬರಬೇಕಲ್ಲ? ಸ್ಟೇಶನ್ನಿನ ಮೇಲೆ ಸ್ಟೇಶನ್ನು ಕಳೆದುಹೋದವು. ಈ ಮಹಾರಾಯನ ನಿದ್ದೆ ಕದಲಲಿಲ್ಲ. ಜನರು ಬಂದರು, ಹೋದರು, ಗದ್ದಲ ಹಾಕಿದರು; ಕೂಗಾಡಿದರು; ಏನು ಮಾಡಿದರೂ ನನ್ನ ಹೆಗಲ ಮೇಲಿನ ಭಾರ ಅಚಲವಾಗಿತ್ತು. ಅವನ ನಿದ್ದೆ ಯಾವಾಗ ಮುಗಿಯುವದೋ ಎಂಬುದನ್ನು ನಿರೀಕ್ಷಿಸುವದೇ ಈಗ ನನ್ನ ಕೆಲಸವಾಯಿತು.

ಕೊನೆಗೊಮ್ಮೆ ಅವನು ಏಳುವ ಲಕ್ಷಣ ಕಾಣಹತ್ತಿತು. ಅವನು ನುರಿತ ಪ್ರಯಾಣಿಕ. ತನ್ನ ಜೀವನದ ಬಹುಭಾಗವನ್ನು ಪ್ರವಾಸದಲ್ಲಿಯೇ ಕಳೆದವನಿರಬೇಕು. ಈ ಅನುಭವಿಕ ಪ್ರವಾಸಿಕರಲ್ಲಿ ಒಂದು ಸೂಕ್ಷ್ಮ ಪ್ರಜ್ಞೆ ಬೆಳೆದು ಬಂದಿರುತ್ತದೆ. ಅವರು ಎಷ್ಟು ಗಾಢವಾಗಿ ನಿದ್ದೆ ಮಾಡಿದರೂ, ತಾವು ಇಳಿಯುವ, ಸ್ಟೇಶನ್ ಬಂದ ಕೂಡಲೇ ಅವರಿಗೆ ಎಚ್ಚರವಾಗುತ್ತದೆ. ಇವನೂ ಹಾಗೆಯೇ ಎದ್ದ, ಮೈಮುರಿದು ಆಕಳಿಸಿದ. ನನ್ನ ಹೆಗಲು ಹಗುರವಾಯಿತು.

ಅಷ್ಟೊತ್ತಿಗೆ ಡಬ್ಬಿಯಲ್ಲೆಲ್ಲ ಪ್ರವಾಸ ಹೊರಟಿದ್ದ ನನ್ನ ಪತ್ರಿಕೆ ತಿರುಗಿ ನನ್ನ ಕೈಗೆ ಬಂತು. ನನಗೆ ಮಹದಾನಂದವಾಯಿತು. ಇನ್ನು ಆರಾಮಾಗಿ ಕುಳಿತು ಓದಬಹುದೆಂದುಕೊಂಡೆ. ಆದರೆ ಪ್ರತಿಕೂಲ ದೈವ ನನ್ನ ಜೊತೆಗಾರನ ರೂಪದಲ್ಲಿ ಬಂದು ನನ್ನ ಪತ್ರಿಕೆಯ ಮೇಲೆ ಕಣ್ಣು ಹಾಕಿತು. 'ಇವೊತ್ತಿನದೇನ್ರಿ ರಾಯರ?' ನನಗೆ ತಿಳಿಯಿತು. ಮರುಮಾತಾಡದೆ ಪತ್ರಿಕೆ ಅವನ ಕೈಯಲ್ಲಿಟ್ಟೆ. 'ನಮ್ಮೂರು ಬರೋಮಟಾ ಓದಿ ಕೊಡತೇನ್ರಿ' ನಾನು ಉತ್ತರವನ್ನೇ ಕೊಡಲಿಲ್ಲ, ಅವನಿಗೂ ಬೇಕಾಗಿರಲಿಲ್ಲ. ನಾನು ಮತ್ತೆ ನನ್ನ ಬೇಸರದೊಡನೆ ಆಟವಾಡುತ್ತ ಕುಳಿತುಕೊಂಡೆ. ಹೇಗೋ ಮಾಡಿ ಹದಿನೈದು ನಿಮಿಷಗಳನ್ನು ಕಳೆದೆ.

ಅವನಿಳಿಯಬೇಕಾದ ಸ್ಟೇಶನ್ ಬಂತು. ಇನ್ನು ನನಗೆ ಬಿಡುಗಡೆ ಎಂದುಕೊಂಡೆ. ಈ ಮನುಷ್ಯನ ಅಧಿಕಾರವನ್ನು ನಾನು ಹೇಗೆ ಒಪ್ಪಿಕೊಂಡೆ ಎಂದು ನನ್ನ ಮನಸ್ಸು ಚಿಂತಿಸಹತ್ತಿತು. ಹೀಗೇಕೆ ವ್ಯಕ್ತಿತ್ವವಿಲ್ಲದವರಂತೆ ನಾನು ಆಚರಿಸುತ್ತೇನೆ? ಅವನು ಮಲಗಲು ಕೇಳಿದಾಗ ಬೇಡವೆನ್ನಬಹುದಾಗಿತ್ತು. ಪತ್ರಿಕೆ ಕೇಳಿದಾಗ ಇಲ್ಲವೆನ್ನಬಹುದಾಗಿತ್ತು. ಆದರೂ ಮುಗ್ಧನಂತೆ ಒಪ್ಪಿದ್ದೇಕೆ?

ನಾನು ವಿಚಾರದಲ್ಲಿ ತೊಡಗಿರುವಾಗಲೇ ಅವನು ಹೊರಟುಹೋಗಿದ್ದ. ಅವನ ಜೊತೆಗೆ ನನ್ನ ಪತ್ರಿಕೆಯೂ ಹೋಗಿತ್ತು. ನಾನು ನಿಟ್ಟುಸಿರು ಬಿಟ್ಟೆ. ಈ ಮನುಷ್ಯ ನನಗೇನು ಸಂಬಂಧ? ನಡುವೆಯೇ ಬಂದ, ನಡುವೆಯೇ ಹೊರಟುಹೋದ. ಆದರೆ ಆ ಅವಧಿಯಲ್ಲಿ ನಾನು ಅವನ ಅಧಿಕಾರಕ್ಕೆ ಹೇಗೆ ಒಳಗಾದೆ? ಗಾಡಿಹತ್ತಿದಾಗ ಅವನು ನನ್ನ ಹತ್ತಿರವೇ ಏಕೆ ಬರಬೇಕಾಗಿತ್ತು?

ಇದಕ್ಕೆಲ್ಲ ಉತ್ತರ ಯಾರು ಹೇಳಬೇಕು? ಜೀವನದಲ್ಲಾಗಲಿ ಪ್ರಯಾಣದಲ್ಲಾಗಲಿ ಜೊತೆಗಾರರನ್ನು ಆರಿಸಿಕೊಳ್ಳುವ ಅಧಿಕಾರವೇ ನಮಗಿಲ್ಲವೇನೋ! ಈ ಮನುಷ್ಯ ಇನ್ನೊಮ್ಮೆ ನೋಡಲಿಕ್ಕೆ ಕೂಡ ದೊರೆಯಲಾರ. ಅವನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದರೂ ನನಗೆ ಅವಕಾಶ ಸಿಗಲಾರದು.

ಗಾಡಿಯಲ್ಲಿ ನನಗೆ ಎಷ್ಟೋ ಸಲ ಸ್ನೇಹಿತರು ದೊರೆತಿದ್ದಾರೆ. ಅವರು ನಡುವೆ ಇಳಿಯುವಾಗ ನಾನು ಕಣ್ಣೀರು ಕೂಡ ಹಾಕಿದ್ದೇನೆ. ಎಷ್ಟೋ ಜನರು ಸ್ಥಳಕೊಟ್ಟು ಉಪಕಾರ ಮಾಡಿದ್ದಾರೆ, ಸಹಾನುಭೂತಿ ತೋರಿಸಿದ್ದಾರೆ. ಅಂಥವರನ್ನು ಕೂಡ ನಾನು ಮರೆತುಬಿಟ್ಟಿದ್ದೇನೆ. ಅಂದ ಮೇಲೆ ಇವನನ್ನೂ ಏಕೆ ಮರೆಯಬಾರದು? ಪೂರ್ವಜನ್ಮದ ಸ್ನೇಹಿತರೋ, ವೈರಿಗಳೋ ಬಂದು ನಮ್ಮನ್ನು ಕಾಣುತ್ತಿರಬೇಕು ಎಂದು ನನಗನಿಸಿದೆ. ಇಲ್ಲದಿದ್ದರೆ ಹೀಗೆ ಕಂಡು ಮರೆಯಾಗುವ ರಹಸ್ಯವಾದರೂ ಏನು? ಅಥವಾ ಜೀವನವೆಂದರೇ ಇದೇ ಏನೋ! ಯಾರೋ ಬರುತ್ತಾರೆ, ಗದ್ದಲವೆಬ್ಬಿಸುತ್ತಾರೆ, ಸಂಬಂಧ ಬೆಳೆಸುತ್ತಾರೆ, ಸ್ನೇಹ ತೋರಿಸುತ್ತಾರೆ ಇಲ್ಲವೆ ಕಲಹವಾಡುತ್ತಾರೆ. ಕೊನೆಗೆ ಒಂದು ಕ್ಷಣದ ಸ್ಮೃತಿಯನ್ನು ಇಲ್ಲಿ ಇಟ್ಟು ಹೊರಟುಹೋಗುತ್ತಾರೆ.

---

ಅಮೇರಿಕದ
ಒಂದು
ರೋಮಾಂಚಕ
ಕ್ರಿಮಿನಲ್
ಪ್ರಕರಣ



# ಅವಳು ತಂದೆ-ತಾಯಿಗಳನ್ನು ಕೊಂದಳೆ ?

ಅಗಸ್ಟ ೪, ೧೮೯೨, ಅಮೇರಿಕೆಯ ಕೊಲೆಪಾತಕಿಗಳ ಇತಿಹಾಸದಲ್ಲಿ ಒಂದು ಮರೆಯಲಸಾಧ್ಯವಾದ ದಿನ.

ಲಿಝಿ ಬಾರ್ಡನ್ನಳ ಮೇಲೆ ಹೊರಿಸಲ್ಪಟ್ಟ ಅಪವಾದ ಕಲ್ಪನಾತೀತವಾದದ್ದು. ಅದೇ ಅವಳನ್ನು ಪಾರು ಮಾಡಿದ ಮಹತ್ವದ ಅಂಶ. ಪುರಾವೆಗಳು ಎಷ್ಟೇ ಸಮರ್ಪಕವಾಗಿ ಕಂಡು ಬರಲಿ, ಸಾಕ್ಷಿಗಳು ಎಷ್ಟೇ ಪ್ರಾಮಾಣಿಕರಿರಲಿ, ಲಿಝಿ ಅಪರಾಧಿಯೆಂಬುದನ್ನು ಯಾರಾದರೂ ಹೇಗೆ ಒಪ್ಪಬೇಕು ?

ಸುಸಂಸ್ಕೃತ ರೀತಿಯಲ್ಲಿ ಬೆಳೆದ, ಪ್ರೀತಿ ಯಿಂದ ಬೆಳೆಸಲ್ಪಟ್ಟ ಹೆಂಗಸೊಬ್ಬಳು ತನ್ನ ಮಲತಾಯಿಯ ಕೊಲೆಯ ಹಂಚಿಕೆ ಹೂಡಿದ್ದು; ಅದನ್ನುಕೃತಿಗಿಳಿಸಿ, ಮನೆಯಲ್ಲೇ ಮಲತಾಯಿಯ ತಲೆ ಮಾಂಸದ ಮುದ್ದೆಯಾಗುವ ಮಟ್ಟಿಗೆ ಕ್ರೂರ ರೀತಿಯಲ್ಲಿ ಜಜ್ಜಿ ಹಾಕಿದ್ದು; ಆ ಮೇಲೆ ತನ್ನ ತಂದೆಯ ಬರವಿಗಾಗಿ ತಾಸಿಗಿಂತಲೂ ಹೆಚ್ಚು ವೇಳೆ ಶಾಂತ ರೀತಿಯಲ್ಲಿ ಕಾಯ್ದು ಕುಳಿತದ್ದು ; ತಂದೆ ಬಂದ ಬಳಿಕ, ರಕ್ತವೆಂದರೆ ನೀರೆಂದು ಭಾವಿಸುವ ಡಾಕ್ಟರರ ಮೈ ಕೂಡ ಕಂಪಿಸುವ ರೀತಿಯಲ್ಲಿ, ಅವನನ್ನೂ ಕೊಂದದ್ದು ; ಈ ಜೋಡು ಕಗ್ಗೊಲೆಯ ನಂತರವೂ ಅವಳಲ್ಲಿ ಪಶ್ಚಾತ್ತಾಪದ ಲವಲೇಶವಾಗಲಿ ಅಥವಾ ಮನಸ್ಸಿನ ಅಶಾಂತಿಯಾಗಲಿ ಕಂಡುಬಾರದ್ದು—ಈ ಕಥೆ ನಂಬಿಗೆಗೆ ಹೊರತಾದದ್ದಾಗಿತ್ತು.

ಫಾಲ್ ರಿವರ್ ಊರಿನಲ್ಲಿ ಈ ಕೃತ್ಯ ನಡೆಯಿತು. ನಗರದ ಪ್ರತಿಷ್ಠಿತರಲ್ಲಿ ಬಾರ್ಡನ್ ಕುಟುಂಬವೂ ಒಂದು. ಈ ಘಟನೆಯ ಕಾಲಕ್ಕೆ ಆಂಡ್ರ್ಯೂ ಜಾಕಸನ್ ಬಾರ್ಡನ್ ಮನೆಯ ಯಜಮಾನ. ಆತ ದೊಡ್ಡ ವ್ಯಾಪಾರಿ ಮತ್ತು ಬ್ಯಾಂಕರ. ಆತ ತನ್ನ ಕೌಶಲ್ಯ, ಧನಪಿಪಾಸೆಗಳ ಮೂಲಕ ತನ್ನ ಸಂಪತ್ತನ್ನು ದಿನೇದಿನೇ ಹೆಚ್ಚಿಸಿಕೊಂಡವ. ಆದರೆ ಅವನ ಜೀವನ ಮಾತ್ರ

**ಎಡ್ಗಾರ ಲಸ್ಟಗಾರ್ಟನ್ನರ “ ವರ್ಡಿಕ್ಟ ಇನ್ ಡಿಸ್ಪ್ಯೂಟ ”ನಿಂದ.**

ಅಪ್ಪನ ಸಂಪತ್ತಿನ ಮಾನದಲ್ಲಿ ಸರಳವೇ ಆಗಿದ್ದಿತು.

ಈತನ ೪೦ ನೆಯ ವಯಸ್ಸಿನಲ್ಲಿ ಎಮಾ ಮತ್ತು ಲಿಝಿ ಎಂಬಿಬ್ಬರು ಹುಡುಗಿಯರನ್ನು ಬಿಟ್ಟು ಈತನ ಪತ್ನಿ ತೀರಿಕೊಂಡಳು. ಮುಂದೆ ತುಸು ಸಮಯದಲ್ಲೇ ಆಂಡ್ರ್ಯೂ ಬಾರ್ಡನ್ ಆ್ಯಬಿ ಗ್ರೇ ಎಂಬಾಕೆಯನ್ನು ಲಗ್ನವಾದ.

೧೮೯೨ ರಲ್ಲಿ ಸೆಕೆಂಡ್ ಸ್ಟ್ರೀಟಿನಲ್ಲಿಯ ಸದ್ಯದ ಮನೆಯಲ್ಲಿ ಇವರು ವಾಸಿಸತೊಡಗಿ ಸುಮಾರು ೨೦ ವರ್ಷಗಳಾಗಿದ್ದವು. ಆಂಡ್ರ್ಯೂಗೆ ಆಗ್ಗೆ ೭೦ ವರ್ಷಗಳಾಗಿದ್ದವು. ಅವರ ಎರಡನೆಯ ಹೆಂಡತಿಗೆ ೬೪ ವರ್ಷ, ಮಗಳು ಎಮಾಗೆ ೪೧ ಮತ್ತು ಲಿಝಿಗೆ ೩೨ ವರ್ಷಗಳಾಗಿದ್ದವು. ಹುಡುಗಿಯರಿಬ್ಬರೂ ಇನ್ನೂ ಅವಿವಾಹಿತೆಯರಾಗಿದ್ದರು.

ಹೊರಗಿನಿಂದ ನೋಡುವವರಿಗೆ ಬಾರ್ಡನ್ ಕುಟುಂಬ ತೃಪ್ತ ಮತ್ತು ಸುಖ-ಶಾಂತಿಯ ಕುಟುಂಬವಾಗಿತ್ತು. ಆದರೆ ಇದು ಕೃತಕ ಮುಖವಾಡವಾಗಿದ್ದಿತು. ಎಮಾ ಮತ್ತು ಲಿಝಿಯರಲ್ಲಿ ಲಿಝಿ ಸ್ವಲ್ಪ ಕಟುಮಾತಿನವಳು, ಸ್ಪಷ್ಟೋಕ್ತಿಯವಳು. ಅವಳು ಮಲತಾಯಿಯನ್ನು "ಅಮ್ಮಾ" ಎಂದು ಕರೆಯುವ ಬದಲು "ಶ್ರೀಮತಿ ಬಾರ್ಡನ್" ಎಂದು ಕರೆಯಲು ತೊಡಗಿದ ದಿನವೂ ಬಂದಿತು.

ಮನೆಯಲ್ಲಿಯ ಮತಭೇದ ಬೆಳೆಯಿತು. ದಿನಗಳೆದಂತೆ ಎಮಾ ಮತ್ತು ಲಿಝಿ ತಂದೆ-ತಾಯಿಗಳ ಸಮ್ಮುಖಕ್ಕೆ ಬರುವದನ್ನು ಕಡಿಮೆ ಮಾಡಿದರು. ಕೆಳಗಿನ ಕೋಣೆಯಲ್ಲಿ ಎಲ್ಲರೂ ಒಂದೆಡೆ ಬರುವದು ಅನಿವಾರ್ಯವಾಗಿದ್ದರೂ ಅವರು ಇಂಥ ಸಂದರ್ಭಗಳನ್ನೂ ಆದಷ್ಟು ಕಡಿಮೆ ಮಾಡಿಕೊಂಡರು. ಮೇಲೆ, ಅಟ್ಟದ ಮೇಲೆ ನಡುವಿನ ಬಾಗಿಲನ್ನು ಮುಚ್ಚಿಕೊಂಡುಬಿಟ್ಟರೆ ಎರಡು ಪ್ರತ್ಯೇಕ ಕೋಣೆಗಳಾಗುತ್ತಿದ್ದವು. ಒಂದು ಭಾಗಕ್ಕೆ ಕೆಳಗಿಳಿಯಲು ಹಿಂದಿನಿಂದ ಮೆಟ್ಟಲುಗಳೂ ಇನ್ನೊಂದಕ್ಕೆ ಮುಂದಿನಿಂದ ಮೆಟ್ಟಲುಗಳೂ ಇದ್ದವು. ನಡುವಿನ ಬಾಗಿಲಿಗೆ ಎರಡೂ ಕಡೆ ಅಗಳಿ ಹಾಕುತ್ತಿದ್ದುದರಿಂದ ತಂದೆ-ತಾಯಿ ಒಂದು ಮನೆಯಲ್ಲಿ,ಅಕ್ಕತಂಗಿಯರು ಇನ್ನೊಂದು ಮನೆಯಲ್ಲಿ ಇದ್ದಂತಾಗುತ್ತಿತ್ತು.

ಫಾಲ್ ರಿವರ್ ಪ್ರದೇಶದ ಹವೆ ಬೇಸಿಗೆಯಲ್ಲಿ ಬಹು ಉಷ್ಣವಾಗಿರುತ್ತಿತ್ತು. ೧೮೯೨ರ ಬೇಸಿಗೆಯಲ್ಲಿ ಎಮಾ ತನ್ನ ಸ್ನೇಹಿತರೊಂದಿಗೆ ಫೇರ್ ಹೇವನಕ್ಕೆ ವಿಶ್ರಾಂತಿಗಾಗಿ ತೆರಳಿದಳು. ಅದೇ ಸಮಯದಲ್ಲಿ ನ್ಯೂ ಬೆಡ್‌ಫೋರ್ಡಕ್ಕೆ ಹೋದ



ಲಿಝಿ ಒಂದು ವಾರದಲ್ಲೇ ತಿರುಗಿ ಮನೆಗೆ ಬಂದಳು.

ಅಗಸ್ಟ ೪, ೧೮೯೨. ಬಾರ್ಡನ್ ಕುಟುಂಬಕ್ಕೆ ಮಹಾ ಕರಾಳದಿನ. ಎಂದಿನಂತೆ ಅಂದೂ ಅವರ ಮನೆಯಲ್ಲಿ ವಿಶೇಷವೇನೂ ಇಲ್ಲದೆ ಬೆಳಗಾಯಿತು. ಮುದುಕರಿಬ್ಬರೂ ಬೇಗ ಏಳುವವರು. ಮುಂಜಾನೆ ಏಳು ಗಂಟೆಗೇ ಅವರು ಉಪಾಹಾರಕ್ಕೆ ಕುಳಿತರು. ಮನೆಯಲ್ಲಿ ಕೆಲಸಕ್ಕಿದ್ದ ಬ್ರಿಜೆಟ್ ಎಂಬ ಆಯರಿಶ್ ಹೆಂಗಸೊಬ್ಬಳು ಅವರಿಗೆ ಬಡಿಸಿದಳು.

೯ ಗಂಟೆಗೆ ಲಿಝಿ ಕೆಳಗೆ ಬಂದಳು. ಕೆಲಸದಾಕೆ ಅಡಿಗೆ ಮನೆಯಲ್ಲಿ ಪಾತ್ರೆಗಳನ್ನು ತೊಳೆಯುತ್ತಿದ್ದಾಗ ಅಲ್ಲಿಗೆ ಲಿಝಿ ಬಂದಳು. ಬ್ರಿಜೆಟ್ ಅವಳಿಗೆ "ಉಪಾಹಾರಕ್ಕೇನು ತರಲಿ?" ಎಂದು ಕೇಳಿದಳು. ಲಿಝಿ ನಿರಾಸಕ್ತಿಯಿಂದ "ಏನಾದರೂ ಸರಿ" ಎಂದಳು.

ಕೆಲಸದಾಕೆ ಬ್ರಿಜೆಟ್, ತೊಳೆದ ಪಾತ್ರೆಗಳನ್ನು ಊಟದ ಕೋಣೆಗೆ ಒಯ್ದಾಗ ಅಲ್ಲಿ ಶ್ರೀಮತಿ ಬಾರ್ಡನ್ ಕಿಟಿಕಿಗಳನ್ನು ಉಜ್ಜುತ್ತಿದ್ದಳು. ಕಿಟಕಿಗಳು ತುಂಬ ಹೊಲಸಾಗಿವೆ, ಅವನ್ನು ಸ್ವಚ್ಛಮಾಡು ಎಂದಾಕೆ ಬ್ರಿಜೆಟಳಿಗೆ ಹೇಳಿದಳು.

ಮೊದಲು ಕಿಟಿಕಿಗಳ ಹೊರಭಾಗವನ್ನು ತೊಳೆಯಲು ಬ್ರಿಜೆಟ್ ನಿಶ್ಚಯಿಸಿದಳು. ಶ್ರೀಮತಿ ಬಾರ್ಡನ್ ಮತ್ತು ಲಿಝಿ ಒಳಗಡೆಯೆ ಉಳಿದರು.

ಹೊರಗೆ ಮನೆಯ ಕಂಪೌಂಡಿನ ಬೇಲಿಯ ಹತ್ತಿರ ಬ್ರಿಜೆಟ್ ನೆರೆಮನೆಯ ಕೆಲಸದಾಕೆಯೊಂದಿಗೆ ತುಸು ಹೊತ್ತು ಹರಟೆಕೊಚ್ಚಿ ಬಳಿಕ ಕೆಲಸಕ್ಕೆ ಪ್ರಾರಂಭಿಸಿದಳು. ಕಿಟಿಕಿಗಳ ಹೊರಭಾಗವನ್ನು ತೊಳೆಯಲು ಸುಮಾರು ಒಂದು ತಾಸು ಹಿಡಿದಿರಬೇಕು. ಬಳಿಕ ಬ್ರಿಜೆಟ್ ಬಾಗಿಲನ್ನು ಸರಿಯಾಗಿ ಹಾಕಿಕೊಂಡು ಮನೆಯೊಳಗೆ ಬಂದಳು.

ಮನೆಯಲ್ಲಿ ಎಲ್ಲ ಶಾಂತವಿತ್ತು. ಯಾರೂ ಕಣ್ಣಿಗೆ ಕಾಣಲಿಲ್ಲ. ಹತ್ತೂಮುಕ್ಕಾಲು ಗಂಟೆಗೆ ಹೊರಗಿನ ಬಾಗಿಲಿನ ಬಳಿ ಸದ್ದಾಯಿತು. ಬಾರ್ಡನ್ ಬಂದಿರಬೇಕು. ಬ್ರಿಜೆಟ್ ಕೈಲಿದ್ದ ಕೆಲಸ ಬಿಟ್ಟು ಬಾಗಿಲು ತೆರೆಯಲು ಓಡಿದಳು.

ಆದರೆ ಬಾಗಿಲಿಗೆ ಬೀಗ ಹಾಕಿತ್ತು. ಅದನ್ನು ತೆರೆಯಲು ಅವಳು ಧಡಪಡಿಸುತ್ತಿದ್ದಾಗ ಅವಳ ಹಿಂದುಗಡೆ ಯಾರೋ ಹ್ಹ-ಹ್ಹ-ಹ್ಹ ಎಂದು ಗಟ್ಟಿಯಾಗಿ ನಕ್ಕರು.

ಬ್ರಿಜೆಟ್ ಕತ್ತು ತಿರುಗಿಸಿ ನೋಡಿದಳು. ಅಟ್ಟದ ಮೇಲಿನ ಪಾವಟಿಗೆಯ ಮೇಲೆ ನಿಂತು ಲಿಝಿ ನಕ್ಕಿದ್ದಳು. ಆ ನಿಮಿಷದಲ್ಲಿ ಅವಳು ನಗಲು ಕಾರಣವೇನಾಯಿತು ಎಂಬುದು ಊಹೆಯ ಮಾತೇ ಆಗಿ ಉಳಿಯುವಂಥದು. ಬ್ರಿಜೆಟಳ ಧಾಂದಲೆಯನ್ನು ಕಂಡು ನಗು ಬಂದಿತ್ತೊ ಅಥವಾ ಅವಳ ಹೃದಯದ ಯಾವುದೋ ರಹಸ್ಯದ ಮೂಲಕವೊ..... ಯಾರು ಬಲ್ಲರು?

ಬಾರ್ಡನ್ನರು ಒಳಗೆ ಬಂದ ಬಳಿಕ ಲಿಝಿ ಕೆಳಗಿಳಿದು ಬಂದಳು.

"ಶ್ರೀಮತಿ ಬಾರ್ಡನ್ ಹೊರಗೆ ಹೋಗಿದ್ದಾಳೆ. ಯಾರೋ ಬೇನೆ ಬಿದ್ದಿರುವವರು ಬಾ ಎಂದು ಚೀಟಿ ಕಳಿಸಿದ್ದರು."

ಮಗಳ ಮಾತಿಗೆ ಪ್ರತಿಯಾಗಿ ತಂದೆ ಏನೂ ಹೇಳಲಿಲ್ಲ. ಆತ ಕೂಡ್ರುವ ಕೋಣೆಗೆ ವಿಶ್ರಾಂತಿಗಾಗಿ ತೆರಳಿದ. ಆಗ ಬ್ರಿಜೆಟ್ ಅಡಿಗೆ ಮನೆಯ ಕಿಟಿಕಿಗಳನ್ನು ಸ್ವಚ್ಛ ಮಾಡುತ್ತಿದ್ದಳು. ಲಿಝಿ ಅಲ್ಲಿಗೆ ಹೋದಳು.

ಕಿಟಿಕಿಗಳ ಕೆಲಸ ಮುಗಿದಬಳಿಕ ಬ್ರಿಜೆಟ್ ಅಡಿಗೆ ಮನೆಗೆ ಹೋಗಿ ಅರಿವೆಗಳನ್ನು ತೊಳೆದಳು. ಲಿಝಿ ಅಲ್ಲಿಯೂ ಅವಳನ್ನು ಹಿಂಬಾಲಿಸಿ, "ಊರಲ್ಲಿಂದು ಅಗ್ಗದಲ್ಲಿ ಒಳ್ಳೆ ಅರಿವೆಗಳನ್ನು ಮಾರುತ್ತಾರೆ. ಎಂಟು ಸೆಂಟಿಗೆ ಒಂದು ವಾರಿನಂತೆ ಒಳ್ಳೆ ಅರಿವೆ ಮಾರುತ್ತಾರಂತೆ," ಎಂದಳು.

"ಹಾ! ನಾನೂ ಒಂದಿಷ್ಟು ಕೊಳ್ಳಬೇಕು" ಬ್ರಿಜೆಟ್ ಅಂದಳು.

ಆದರೆ ಆಗ ಬ್ರಿಜೆಟಳಿಗೆ ಹೊರಗೆ ಹೋಗುವ ಉತ್ಸಾಹವಿರಲಿಲ್ಲ. ಮುಂಜಾನೆ ಆರಕ್ಕೆ ಎದ್ದವಳು ಇದುವರೆಗೂ ದುಡಿದಿದ್ದಳು. ಒಂದರ್ಧ ತಾಸು ಮಲಗಿದರೆ ಹಾಯೆನಿಸೀತು ಎಂದು ಕೊಂಡಳವಳು.

ಬ್ರಿಜೆಟ್ ತನ್ನ ಹಾಸಿಗೆಯಲ್ಲಿ ಮಲಗಿಕೊಂಡು ಆಕಳಿಸಿದಳು. ಕೂಡ್ರುವ ಕೋಣೆಯಲ್ಲಿ ಸೋಫಾದ ಮೇಲೆ ಅಡ್ಡಾಗಿದ್ದ ಮುದುಕ ಬಾರ್ಡನ್ನನಿಗೆ ನಿದ್ದೆ ಹತ್ತಿತ್ತು. ಮತ್ತೆ ಮನೆಯಲ್ಲಿ ಶಾಂತತೆ ನೆಲೆಸಿತ್ತು.

ಹದಿನೈದು ಮಿನಿಟುಗಳ ನಂತರ ಆ ಗದ್ದಲವಾಯಿತು.

" ಬೇಗ ಬಾ. ಬೇಗ ಬಾ. ಅಪ್ಪ ಸತ್ತಿದ್ದಾನೆ. ಯಾರೋ ಬಂದು ಅವನ ಕೊಲೆ ಮಾಡಿದ್ದಾರೆ," ಲಿಝಿ ಗಟ್ಟಿಯಾಗಿ ಕೂಗಿಕೊಂಡಳು.

ಬಾಗಿಲ ಬಳಿಯಲ್ಲೇ ಅವಳು ನಿಂತಿದ್ದಳು. ಓಡಿ ಬಂದ ಬ್ರಿಜೆಟ್ ಒಳಗೆ ಹೋಗಲು ಯತ್ನಿಸಿದಾಗ ಅವಳನ್ನಡ್ಡಗಟ್ಟಿ ಲಿಝಿ, " ಒಳಗೆ ಹೋಗಬೇಡ. ಮೊದಲು ಡಾಕ್ಟರರು ಬರಲಿ," ಎಂದಳು.

ಡಾ. ಬೋವೆನ್ನರು ಬಂದರು. ಮುಂದೆ ಅವರು ಕೋರ್ಟಿನಲ್ಲಿ ಹೇಳಿದ್ದು ಇದು:

'' ಬಾರ್ಡನ್ ಸೋಫಾದ ಮೇಲೆ ಮಲಗಿದ್ದರು. ಹರಿತವಾದ ಆಯುಧದಿಂದ ಇರಿದಿರಬೇಕು, ಅವರ ಮುಖ ಕತ್ತರಿಸಿಹೋಗಿತ್ತು. ಮುಖದ ತುಂಬ ರಕ್ತ. ಅವರ ನಾಡಿ ನೋಡಿ ಅವರು ಸತ್ತಿದ್ದಾರೆಂಬುದನ್ನು ಖಾತ್ರಿ ಮಾಡಿಕೊಂಡೆ. ಕೋಣೆಯಲ್ಲಿ ಕಣ್ಣಾಡಿಸಿದಾಗ ಅಲ್ಲಿ ಯಾವ ವಸ್ತುವೂ ಚಲ್ಲಾಪಿಲ್ಲಿಯಾದದ್ದು ಕಾಣಿಸಲಿಲ್ಲ. ಬಾರ್ಡನ್ ನಿದ್ದೆಹೋದವರಂತೆ ಬಲ ಮಗ್ಗುಲಾಗಿ ಮಲಗಿದ್ದರು. ಅವರ ಮುಖ ಮಾತ್ರ ಯಾರಿಗೂ ಗುರುತು ಹತ್ತದ ರೀತಿಯಲ್ಲಿ ವಿಕಾರವಾಗಿಹೋಗಿತ್ತು. ''

ಡಾ. ಬೋವೆನ್ನರು ಹೊರಗೆ ಹೋಗುವಾಗ ನೆರೆದ ಜನರ ಗದ್ದಲದಲ್ಲಿ ಹಾದಿ ಮಾಡಿಕೊಂಡು ಹೋಗಬೇಕಾಯಿತು. ಅವರು ಎಮ್ಮಾಳಿಗೆ ಒಂದು ತಂತಿ ಬಿಟ್ಟು ಮತ್ತೆ ಮರಳಿದರು. ಅವರು ಬಾರ್ಡನ್ನರ ಮನೆ ಪ್ರವೇಶಿಸುತ್ತಿದ್ದಾಗ ನೆರೆಮನೆಯವಳೊಬ್ಬಳು ಅವರನ್ನು ತಡೆದು, " ಶ್ರೀಮತಿ ಬಾರ್ಡನ್ನರನ್ನು ಪತ್ತೆ ಹಚ್ಚಿದ್ದಾರೆ," ಎಂದು ನಡುಗುವ ಧ್ವನಿಯಲ್ಲಿ ಹೇಳಿದಳು.

'' ಎಲ್ಲಿ? '' ಡಾಕ್ಟರರು ಕೇಳಿದರು.

'' ಅಟ್ಟದ ಮೇಲೆ."

ಲಿಝಿಯ ಹೇಳಿಕೆಯಂತೆ ಶ್ರೀಮತಿ ಬಾರ್ಡನ್ನಳನ್ನು ಹುಡುಕಲಾಗಿತ್ತು. ಹೆಜ್ಜೆಯ ಸಪ್ಪಳದಿಂದ ಅವಳು ಒಳಗೆ ಬಂದಿದ್ದಾಳೆಂದು ನಾನು ಹೆಚ್ಚು ಕಡಿಮೆ ಖಂಡಿತವಾಗಿ ಹೇಳಬಲ್ಲೆ ಎಂದು ಅವಳು ಹೇಳಿದ್ದಳು.

ಮೇಲೆ ಅತಿಥಿ ಕೋಣೆಯಲ್ಲಿ ನೆಲದ ಮೇಲೆ ಸತ್ತುಬಿದ್ದಿದ್ದ ಶ್ರೀಮತಿ ಬಾರ್ಡನ್ನಳನ್ನು ಕಂಡವಳು ಬ್ರಿಜೆಟ್ ಮತ್ತು ಡಾಕ್ಟರರಿಗೆ ಸುದ್ದಿ ಹೇಳಿದ ನೆರೆಯಾಕೆ. ತಲೆ ಜಜ್ಜಿ ಹೋಗಿತ್ತು. ದೇಹ ತಣ್ಣಗಾಗಿತ್ತು. ತಲೆಯಿಂದ ಚಿಮ್ಮಿದ ರಕ್ತ ಹೆಪ್ಪುಗಟ್ಟಲು ಆರಂಭಿಸಿತ್ತು. ಬಾರ್ಡನ್ ಸಾಯುವದಕ್ಕೆ ಒಂದು ತಾಸು ಮೊದಲೇ ಶ್ರೀಮತಿ ಬಾರ್ಡನ್ ಸತ್ತಿರಬೇಕು ಎಂದು ಡಾಕ್ಟರರು ಅಭಿಪ್ರಾಯಪಟ್ಟರು.

ಈ ಜೋಡು ಕೊಲೆ ನಡೆದದ್ದು ಗುರುವಾರ. ಆದರೆ ಲಿಝಿ ಬಟ್ಟೆಯನ್ನು ಸುಟ್ಟುಹಾಕಿದ್ದು ಆದಿತ್ಯವಾರ.

ಗುರುವಾರ ಔಪಚಾರಿಕವಾಗಿ ಲಿಝಿಯ ಬಟ್ಟೆಯನ್ನು ಕಳಚಿ ಅವಳಿಗೆ ಗಾಳಿಹಾಕಿ ಮೈಮೇಲೆ ಕೈಯಾಡಿಸಿದ ಯಾರಿಗೂ ಅವಳ ಬಟ್ಟೆ ಅಥವಾ ದೇಹದ ಮೇಲೆ ರಕ್ತದ ಕಲೆಯೇನೂ ಕಾಣಿಸಿರಲಿಲ್ಲ.

ಆದಿತ್ಯವಾರ ದಿನ ಬಚ್ಚಲಲ್ಲಿ ಅಕ್ಕತಂಗಿಯರು ಬಟ್ಟೆ ಒಗೆಯುತ್ತಿದ್ದರು. ಆಗ ಎಲಿಸ್ ರಸೆಲ್ ಒಳಗೆ ಬಂದಳು. ಆಗ ಲಿಝಿ ಅಕ್ಕನಿಗೆ '' ಈ ಬಟ್ಟೆ ಸುಟ್ಟುಹಾಕುತ್ತೇನೆ. ಬಣ್ಣ ಬಿದ್ದು ಹಾಳಾಗಿ ಹೋಗಿದೆ'' ಎನ್ನುತ್ತಿದ್ದಳು. ಇದನ್ನು ಕೇಳಿ ರಸೆಲ್ಲಳಿಗೆ ಆಶ್ಚರ್ಯವಾಯಿತು.

ಅನಂತರ ಲಿಝಿಯನ್ನು ಬಂಧಿಸಲಾಯಿತು.

ಕಾಯದೆಯ ನಾನಾ ವಿಧಿಗಳ ಮೂಲಕ ಲಿಝಿಯ ವಿಚಾರಣೆ ನ್ಯೂ ಬೆಡ್‌ಫೋರ್ಡ ಕೋರ್ಟಿನಲ್ಲಿ ವಿಲಂಬವಾಗಿ ೧೮೯೩ರ ಜೂನ್ ತಿಂಗಳಲ್ಲಿ ಪ್ರಾರಂಭವಾಯಿತು. ವಿಚಾರಣೆ ೧೩ ದಿನಗಳವರೆಗೆ ನಡೆಯಿತು.

ಸರಕಾರದ ಪರವಾಗಿ ಮೊದಲು ವಾದಿಸಿದವರು ವಿಲಿಯಂ ಮೂಡಿ ಎಂಬ ವಕೀಲರು. ಕೊಲೆಗೆ ಹೇತು ಮಲತಾಯಿಯ ಮೇಲಿನ ದ್ವೇಷ. ಆರೋಪಿಗೆ ಕೊಲೆ ಮಾಡಲು ಅವಕಾಶ ಸಿಕ್ಕಿದ್ದು, ಕೊಲೆಮಾಡಿದ್ದು ಸಾಕ್ಷಿಗಳ ಮೇಲಿಂದ ಸ್ಪಷ್ಟವಾಗುತ್ತದೆ ಎಂದವರು ಹೇಳಿದರು.

" ಮನೆಯಲ್ಲಿ ಮತ್ತಾರ ಮೇಲೂ ಸಂದೇಹ

ಪಡುವಂತೆಯೇ ಇರಲಿಲ್ಲ. ಲಿಝಿ ಕೊಲೆ ಮಾಡಿರದಿದ್ದರೆ ಹೊರಗಿನವರಾರಾದರೂ ಮಾಡಿರಬೇಕು. ಹಾಗಿದ್ದರೆ ಒಂದಿನಿತೂ ಗುದ್ದಾಟದ ಚಿಹ್ನಗಳೇಕೆ ಕಾಣಿಸಲಿಲ್ಲ? ಆಂಡ್ರ್ಯೂ ಒಂದು ವೇಳೆ ನಿದ್ದೆಯಲ್ಲಿದ್ದಿರಬಹುದಾದರೂ ಅವರ ಪತ್ನಿ ಅತಿಥಿ ಕೋಣೆಯ ನೆಲದ ಮೇಲೆ ಎಂದಾದರೂ ನಿದ್ದೆ ಹೋದಾಳೆ?

"ಹಾಗಿದ್ದರೂ ಕೊಲೆಗಡಕ ಯಾರೇ ಇರಲಿ, ಹಗಲಿನಲ್ಲಿ ಇಬ್ಬರ ಸಮೀಪಕ್ಕೂ ಸಾರಿ ಒಂದಿನಿತೂ ಗುದ್ದಾಟ ಒದರಾಟವಿಲ್ಲದೆ ಅವರನ್ನು ಕೊಲ್ಲಲು ಸಮರ್ಥನಾದನು.

"ಚೀಟಿಯ ವಿಚಾರ ಆರೋಪಿಯ ಅಪರಾಧ ರುಜುವಾತಿಗೆ ಸಬಲ ಆಧಾರವಾಗಿದೆ. ಶ್ರೀಮತಿ ಬಾರ್ಡನ್ ಹೊರಗೆ ಹೋಗಿದ್ದಾಳೆ, ಬೇನೆ ಬಿದ್ದವರಾರೋ ಅವಳಿಗೆ ಚೀಟಿ ಕಳಿಸಿದ್ದರು ಎಂಬುದು ಸುಳ್ಳು ಮಾತು. ಮನೆಗೆ ಬಂದ ಬಾರ್ಡನ್ನರು ಹೆಂಡತಿಯ ಬಗ್ಗೆ ವಿಚಾರ ಮಾಡದಿರಲಿ ಎಂಬುದಕ್ಕಾಗಿ ಲಿಝಿ ಹೂಡಿದ ಆಟ ಇದು" ಮೂಡಿ ಹೇಳಿದರು.

ಆರೋಪಿಯ ವಕೀಲ ರಾಬಿನ್‌ಸನ್ನರು ತಮ್ಮ ಪಕ್ಷಕಾರಳ ಪರವಾಗಿ ಬಲವಾದ ಮುದ್ದೆಯೊಂದನ್ನು ಕೋರ್ಟಿನೆದುರು ಇಟ್ಟರು. "ರಕ್ತಕ್ಕೆ ಮಾತು ಬರದಿದ್ದರೂ ಅದು ಮಾತಾಡುತ್ತದೆ. ಅದು ಅಪರಾಧಿಯ ವಿರುದ್ಧ ಸಾಕ್ಷಿ ಹೇಳುತ್ತದೆ. ಆರೋಪಿಯ ಮೈಮೇಲೆ, ತಲೆಯಿಂದ ಪಾದದವರೆಗೆ, ಮತ್ತು ಅವಳ ಉಡುಪಿನ ಮೇಲೆ ಒಂದೇ ಒಂದು ಹನಿ ರಕ್ತದ ಕಲೆಯಿರಲಿಲ್ಲ. ವಿಚಾರ ಮಾಡಿ ನೋಡಿರಿ" ರಾಬಿನ್‌ಸನ್ನರ ವಾದಕ್ಕೆ ಈ ಮಾತು ನೆಲಗಟ್ಟು.

ಮುಂದುವರಿದು ಅವರು "ಲಿಝಿ ಕೊಲೆ ಮಾಡಿದಳು ಎಂದೇಕೆ ಹೇಳುತ್ತಾರೆ? ಅವಳು ಮನೆಯಲ್ಲಿದ್ದಳೆಂದು ಅಲ್ಲವೆ? ಹೌದು. ಅವಳು ಮನೆಯಲ್ಲಿದ್ದಳು. ನಿಮಗೇನೋ ಅಂದು ಅವಳು ಮನೆಯೊಳಗಿದ್ದದ್ದು ಬಹಳ ತಪ್ಪು ಎನಿಸಬಹುದು. ಆದರೆ ಅದು ಅವಳ ಮನೆ. ನನ್ನ ಮಗಳು ಮನೆಯ ಕೆಲಸ ಬೊಗಸೆಗಳನ್ನು ಮಾಡುತ್ತ ಮನೆಯಲ್ಲಿರಬಾರದು ಎಂದರೆ ಅವಳು ಇರಬೇಕಾದ ಸ್ಥಾನ ಯಾವದು ಎಂಬುದನ್ನು ನಾನಂತೂ ಹೇಳಲಾರೆ," ಎಂದರು.

ಜ್ಯೂರಿಗಳ ಮುಖದ ಮೇಲೆ ಹದಿನಾರಾಣೆ ಸತ್ಯದ ಮಾತಿದು ಎಂಬ ಭಾವ ತೇಲಿತು.

"ಇನ್ನು ಚೀಟಿಯ ವಿಚಾರ. ಎಲ್ಲಿದೆ ಅದು? ಅದು ಕಣ್ಣಿಗೆ ಬಿದ್ದರೆ ನಮಗೆಲ್ಲ ಆನಂದವಾದೀತು. ಅದು ಸಿಕ್ಕಿದ್ದರೆ ಅದರಿಂದ ನಿರ್ಣಾಯಕ ವಿಷಯ ಹೊರಬೀಳುತ್ತಿತ್ತು. ಬಹುಶಃ ಶ್ರೀಮತಿ ಬಾರ್ಡನ್ ಅದನ್ನು ಸುಟ್ಟಿರಬೇಕು. ಆದರೆ ಅದನ್ನು ಕಳಿಸಿದವರು ತಾವು ಎಂದು ಹೇಳಲು ಯಾರೂ ಮುಂದೆ ಬಂದಿಲ್ಲವೆಂದು ಹೇಳುತ್ತಾರೆ. ಅದು ನಿಜ. ಕೆಲ ವೇಳೆ ಒಂದು ಜೀವ ಗಂಡಾಂತರದಲ್ಲಿದೆಯೆಂದು ತಿಳಿದರೂ ಜನರು ಕೋರ್ಟಿಗೆ ಬರಲು ಅಪೇಕ್ಷಿಸುವದಿಲ್ಲ.

"ಇನ್ನು ಕೊಲೆ ಜರುಗಿದ ಮನೆಯ ವಿಚಾರ ಮಾಡೋಣ. ಕೊಲೆಗಡಕ ಅಲ್ಲಿ ಬಂದು ಹೋದನೆನ್ನೋಣ. ಆತ ಮಲಗುವ ಕೋಣೆ ಸೇರಿ ಅಲ್ಲಿ ಶ್ರೀಮತಿ ಬಾರ್ಡನ್ ಬರುವ ವರೆಗೂ ಅಡಗಿ ಕೂಡ್ರಬಹುದಿತ್ತು. ಕೊಲೆ ಮಾಡಲೆಂದೇ ಅವನು ಅಲ್ಲಿಗೆ ಬಂದಿದ್ದ; ಶ್ರೀಮತಿ ಬಾರ್ಡನ್ನಳನ್ನಲ್ಲ, ಆದರೆ ಬಾರ್ಡನ್ನರ ಕೊಲೆ ಮಾಡಲು. ಶ್ರೀಮತಿ ಬಾರ್ಡನ್ನಳು ತನ್ನನ್ನು ಗುರುತಿಸಬಹುದೆಂದು ಅವನಿಗೆ ಗೊತ್ತಿತ್ತು. ಆದ್ದರಿಂದ ಅವಳನ್ನು ಮುಗಿಸಿಬಿಡಬೇಕು. ಈ ಕೆಲಸವಾದ ಬಳಿಕ, ಬಾರ್ಡನ್ ಮನೆಗೆ ಬಂದಿದ್ದು ಗೊತ್ತಾದ ಮೇಲೆ ತಾನು ಕೆಳಗಿಳಿದು ಬರಬಹುದು. ಬ್ರಿಜೆಟ್ ಅಟ್ಟದ ಮೇಲಿದ್ದಳು, ಲಿಝಿ ಕೆಳಗಿದ್ದಳು. ತಾನು ತನ್ನ ಕಾರ್ಯ ಮುಗಿಸಿಕೊಂಡು ಬಂದ ಬಾಗಿಲಿನಲ್ಲಿಯೆ ತಿರುಗಿ ಹೋಗಬಲ್ಲೆ, ಎಂದು ಅವನು ಯೋಚಿಸಿರಬೇಕು"

ಇಷ್ಟೆಂದು ರಾಬಿನ್‌ಸನ್ನರು ಜ್ಯೂರಿಗಳ ಮುಖವನ್ನು ದಿಟ್ಟಿಸಿ ನೋಡಿದರು. ಮತ್ತೆ ನಿರ್ಧಾರದ ದನಿಯಲ್ಲಿ, "ಲಿಝಿ ಅಪರಾಧಿಯೆಂದು ಹೇಳಬೇಕಾದರೆ ಅವಳು ರಾಕ್ಷಸಿ ಎಂದು ನೀವು ನಂಬಬೇಕಾಗುತ್ತದೆ. ಸದ್ಗೃಹಸ್ಥರೇ, ಅವಳು ಹಾಗೆ

ಕಾಣಿಸುತ್ತಾಳೆಯೇ?'' ಎಂದು ಕೇಳಿದರು.

ಜ್ಯೂರಿಗಳು ನೋಡಿದರು. ಇಲ್ಲ, ಅವಳ ಮುಖ ರಕ್ಕಸಿಯ ಮುಖವಲ್ಲವೇ ಅಲ್ಲ. ರಾಬಿನ್ ಸನ್ನರ ಬಾಣ ಗುರಿ ಸಾಧಿಸಿತು.

ಸರಕಾರಿ ವಕೀಲ ನೌಲ್ಟನ್ನರು ಬಳಿಕ ತಮ್ಮ ಪಕ್ಷವನ್ನು ಸಮರ್ಥಿಸಿಕೊಳ್ಳುತ್ತಿದ್ದಾಗ "ಲಿಝಿ ತಂದೆಯ ಕೊಲೆಯ ಯೋಜನೆಯನ್ನು ಮೊದಲೇ ಮಾಡಿಟ್ಟುಕೊಂಡಿರಲಿಕ್ಕಿಲ್ಲ. ಆದರೆ ಅಟ್ಟದ ಮೇಲಿಂದ ಇಳಿದು ಬಂದವಳು ಲಿಝಿಯಲ್ಲ. ಅವಳು ಆಗ ಮಗಳಾಗಿರದೆ ಕೊಲೆಪಾತಕಿ ಯಾಗಿ, ಮಾರಿಯಾಗಿ ಕೆಳಗಿಳಿದು ಬಂದಳು. ತನ್ನ ಹೆಂಡತಿಯನ್ನು ಕೊಂದವಳು ಲಿಝಿ ಎಂಬುದನ್ನು ತಂದೆಯೊಬ್ಬನೆ ಅರಿಯಬಲ್ಲವನಾ ಗಿದ್ದ. ತನ್ನ ಹೆಂಡತಿಯನ್ನು ದ್ವೇಷಿಸುವವಳಾರು ಎಂಬುದು ಅವನಿಗೆ ಗೊತ್ತಿತ್ತು," ಎಂದು ಮುಂತಾಗಿ ಹೇಳಿ ಲಿಝಿಯ ಕೊಲೆ ಪಾತಕಿ ಎಂದು ಹೇಳಿದರು.

ನೌಲ್ಟನ್ನರು ತಮ್ಮ ಭಾಷಣದ ಕೊನೆಯಲ್ಲಿ ಈ ಪ್ರಕರಣವನ್ನು ನ್ಯಾಯ ವಿಚಾರಣೆಯ ಮಟ್ಟ ದಿಂದ ಮೇಲಕ್ಕೆತ್ತಿ ನೈತಿಕ ಆಧ್ಯಾತ್ಮಿಕ ಸ್ತರಕ್ಕೇರಿ ಸಲು ಯತ್ನಿಸಿದರು. ಆದರೆ ನ್ಯಾಯಾಧೀಶ ಹಾಗು ಜೂರಿಗಳ ಮನಸಿನಲ್ಲಿ ಯಾವ ವಿಚಾರ ಗಳು ಸುಳಿದು ಹೋದವೋ ಯಾರು ಬಲ್ಲರು?

ಅಂದು, ವಿಚಾರಣೆ ಪ್ರಾರಂಭವಾಗಿ ಹದಿ ಮೂರನೆಯ ದಿನ ಸಂಜೆ ಐದು ಗಂಟೆಗೆ ನಿರ್ಣಯ ಹೊರಬಿತ್ತು. ಲಿಝಿ ನಿರ್ದೋಷಿ ಯಾಗಿ ಬಿಡುಗಡೆ ಹೊಂದಿದಳು. ನ್ಯಾಯಾ ಲಯವು ಹರ್ಷೋದ್ಗಾರಗಳಿಂದ ತುಂಬಿ ಹೋಯಿತು.

ಅಕ್ಕ ಎಮ್ಮಾಳೊಡನೆ ಆರೋಪಮುಕ್ತ ಲಿಝಿ ಮನೆಗೆ ಹೋದಳು. ಅವಳ ವಕೀಲ ರಾಬಿನ್‌ಸನ್ನನು ಕೋರ್ಟಿನಿಂದ ಹೊರಬೀಳು ತ್ತಿದ್ದಂತೆ ಜನಜಂಗುಳಿ ಅವರನ್ನು ಅಭಿನಂದಿ ಸುತ್ತ ತುಮುಲ ಎಬ್ಬಿಸಿತು.



## ಇದನ್ನು ಚಿಂತಿಸಿರಿ!

ಕೆಲವು ವೇಳೆ ಸರಿ ಮತ್ತು ತಪ್ಪುಗಳಲ್ಲಿ ವ್ಯತ್ಯಾಸ ಕಾಣುವುದೇ ಕಷ್ಟವಾಗುತ್ತದೆ. ಯಾವುದನ್ನು ಮಾಡಬೇಕು ಯಾವುದನ್ನು ಮಾಡಬಾರದು ಎಂದು ನಮಗೆ ಆಗ ಸಂದೇಹವಾಗುತ್ತದೆ. ಇಂಥ ಸಂದರ್ಭದಲ್ಲಿ ಗುಟ್ಟಾಗಿ ಮಾಡಬೇಕೆಂದೆನಿಸಿದುದನ್ನು ಯಾವಾಗಲೂ ಗುಟ್ಟಾಗಿ ಮಾಡಬೇಡ ಎಂದು ನಾನು ಹೇಳುತ್ತೇನೆ. —ನೆಹರೂ

ದುಷ್ಕರ್ಮವನ್ನು ಮುಚ್ಚುವುದಕ್ಕೆ ದಾನಧರ್ಮದಂಥ ಮುಸುಕು ಬೇರೊಂದಿಲ್ಲ. —ಶರಚ್ಚಂದ್ರ

ಪ್ರತಿಯೊಬ್ಬನೂ ತನ್ನ ಹಿಂದಿನ ತಪ್ಪುಗಳಿಗೇ ಅನುಭವವೆಂಬ ದೊಡ್ಡ ಹೆಸರನ್ನು ಕೊಡುತ್ತಾನೆ. —ಆಸ್ಕರ ವಾಯಿಲ್ಡ

ಯಾರು ತನ್ನನ್ನು ಆಳಲು ಅಸಮರ್ಥನೋ ಅವನು ಯಾವಾಗಲೂ ಇನ್ನೊಬ್ಬನ ಗುಲಾಮನಾಗುವನು. —ಗಯಟೆ

ಮೂರ್ಖರು ಜ್ಞಾನಿಗಳಿಂದ ಏನನ್ನೂ ಕಲಿಯುವುದಿಲ್ಲ. ಆದರೆ ಜ್ಞಾನಿಗಳು ಮೂರ್ಖರಿಂದ ಬಹಳಷ್ಟು ಕಲಿಯುತ್ತಾರೆ. —ಒಂದು ಡಚ್ ಗಾದೆ

# ನಗೆ—ಮಲ್ಲಿಗೆ

## ಮಾತಾಡುವ ಕುದುರೆ

"ರಾತ್ರಿಯೆಲ್ಲ ರಾಧಾ ಎಂದು ಕನವರಿಸುತ್ತಿದ್ದಿರಲ್ಲ, ಯಾರ್ರೀ ಆಕೆ?'' ಮುದ್ದಿನ ಮಡದಿ ಕೇಳಿದಳು—ಮುಂಜಾನೆ ಉಪಾಹಾರಕ್ಕೆ ಕುಳಿತಾಗ.

"ರಾಧಾ....? ರಾಧಾ....?'' ಮೆಲಕು ಹಾಕಿದ ಪತಿರಾಜ. "ಓ, ಅದೊ, ನಿನ್ನೆ ಎರಡು ರೂಪಾಯಿ ಕಟ್ಟಿದ್ದೆನಲ್ಲ, ಆ ಜೂಜಿನ ಕುದುರೆಯ ಮೇಲೆ, ಅದೇ ಚಿನ್ನಾ.''

ಮಧ್ಯಾಹ್ನ ಉಟಕ್ಕೆ ಕುಳಿತಾಗ ಹೆಂಡತಿ ಅಂದಳು: "ನಿಮ್ಮ ಆ ಕುದುರೆ ನಿಮ್ಮೊಡನೆ ಫೋನಿನಲ್ಲಿ ಮಾತನಾಡಬೇಕೂಂತ ಎರಡು ಸಲ ಪ್ರಯತ್ನಿಸಿತಲ್ರಿ.''

## ಒಳ್ಳೇ ಔಷಧಿ

ಗಿರಾಕಿ: ಇಲ್ಲಿಂದ ಬಟ್ಟೆಯ ಕಲೆ ಹೋಗಲಾಡಿಸುವ ಔಷಧಿ ನಾನು ತೆಗೆದುಕೊಂಡು ಹೋಗಿದ್ದೆನಷ್ಟೆ?

ಅಂಗಡಿಯಾತ: ಹೌದು. ಇನ್ನೊಂದು ಸೀಸೆ ಕೊಡಲೇನು?

ಗಿರಾಕಿ: ಬೇಡ, ಆ ಔಷಧಿಯಿಂದ ಬಟ್ಟೆಗಾದ ಕಲೆಯನ್ನು ತೆಗೆಯಲು ಬೇರೆ ಔಷಧಿ ಕೊಡಿರಿ. —ಧರ್ಮಯುಗ

## ಮೂರ್ಖನ ವಿಷಯ

"ಪ್ರತಿಯೊಂದು ಕುಟುಂಬದಲ್ಲೂ ಒಬ್ಬ ಮೂರ್ಖ ಇದ್ದೇ ಇರುತ್ತಾನೆ ಎಂದು ನಿನ್ನೆ ಆ ಭಾಷಣಕಾರ ಹೇಳಿದ್ದನ್ನು ನಾನು ಪ್ರತಿಭಟಿಸುತ್ತೇನೆ.''

"ಯಾಕಪ್ಪಾ?''

"ನನ್ನ ಕುಟುಂಬದಲ್ಲಿ ಇರುವವ ನಾನೊಬ್ಬನೇ ಎಂದು ಆತ ಚೆನ್ನಾಗಿ ಬಲ್ಲ.''

## ದೇವರ ಕೃಪೆ

ಭಾರತದಲ್ಲಿ ಲಾರ್ಡ ಮಿಂಟೊ ವಾಯಿಸರಾಯರಾಗಿದ್ದಾಗ ಅಮೇರಿಕೆಯ ಓರ್ವ ಮಹನೀಯರು ಭಾರತ ಸಂಚಾರಕ್ಕೆಂದು ಬಂದರು.

ಲಾರ್ಡ ಮಿಂಟೋರವರು ಈ ಅತಿಥಿಗಳಿಗೆ ಬೇಟೆಯಾಡಲು ಅವಕಾಶ ಮಾಡಿಕೊಟ್ಟರು. ಭಾರತದ ಓರ್ವ ಶಿಕಾರಿಯನ್ನು ಅವರ ಜೊತೆಗೆ ಕೊಟ್ಟರು.

ಬೇಟೆಯಾಡಿ ತಿರುಗಿ ಬಂದ ಬಳಿಕ ವಾಯಿಸರಾಯರು ಭಾರತದ ಶಿಕಾರಿಯನ್ನು ಕೇಳಿದರು: "ನಮ್ಮ ಅತಿಥಿಗಳು ಬೇಟೆಯನ್ನಾಡುವದರಲ್ಲಿ ಹೇಗಿದ್ದಾರೆ?''

"ಅದ್ಭುತ ಸ್ವಾಮಿ, ಅದ್ಭುತ! ಪ್ರತಿ ಗುಂಡಿನಲ್ಲೂ ದೇವತೆಯೊಂದು ವಾಸವಾಗಿರುತ್ತದೆ. ಪಶುಗಳ ಮೇಲೆ ಆ ದೇವರ ಕೃಪೆ ಸಂಪೂರ್ಣವಾಗಿದ್ದಿತು!'' ಶಿಕಾರಿ ಉತ್ತರವಿತ್ತ. —ಜ್ಞಾನೋದಯ

## ಓ ಅಂದರೆ

ಫ್ರಾನ್ಸಿನ ಮಾರ್ಸೆಲ್ಸ್ ನಗರದಲ್ಲಿ ಸಂಚರಿಸಿಸುತ್ತಿದ್ದ ಕೆಲ ಭಾರತೀಯ ಯಾತ್ರಿಕರಿಗೆ ಒಮ್ಮೆ ತುಂಬ ನೀರಡಿಕೆಯಾಯಿತು. ಅವರು ನೀರೆಲ್ಲಿ ಸಿಗುವದೆಂದು ಹಲವರನ್ನು ವಿಚಾರಿಸಿದರು. ಆದರೆ ಅಲ್ಲಿ ಒಬ್ಬರಿಗೂ ಇಂಗ್ಲೀಷು ಬರುತ್ತಿರಲಿಲ್ಲ. ಆಗ ಭಾರತೀಯರಲ್ಲೊಬ್ಬ ನಿರಾಶೆಯಿಂದ, "ಓ! ಈ ಜನರಿಗೆ ಇಷ್ಟೂ ತಿಳಿಯುವದಿಲ್ಲವಲ್ಲ'' ಎಂದ. ಕೂಡಲೇ ಅಲ್ಲಿದ್ದ ಫ್ರೆಂಚನೊಬ್ಬ ಅವರನ್ನು ನಳವಿದ್ದಲ್ಲಿ ಕರೆದೊಯ್ದ.

ಕಾರಣವಿಷ್ಟೇ. ಫ್ರೆಂಚ ಭಾಷೆಯಲ್ಲಿ 'ಓ' ಎಂದರೆ ನೀರೆಂದು ಅರ್ಥ!

—ಡಾ. ವ್ರಜಮೋಹನ



ಅಣು ಶಸ್ತ್ರಾಸ್ತ್ರಗಳಿಂದ ಯುದ್ಧವಾದರೆ
ಮುಂದೇನಾದೀತೆಂದು ಈ ಕಥೆ ಹೇಳುತ್ತದೆ

# ಐದನೆಯ ಮಹಾಯುದ್ಧ

ಮೂರನೆಯ ಜಾಗತಿಕ ಯುದ್ಧವು ಮುಖ್ಯವಾಗಿ ಅಣು ಅಸ್ತ್ರಗಳಿಂದಲೂ ನಾಲ್ಕನೆಯ ಜಾಗತಿಕ ಯುದ್ಧವು ಗದೆ, ಇಟ್ಟಂಗಿ, ಕಲ್ಲು ಮುಂತಾದ ಆಯುಧಗಳಿಂದಲೂ ಕಾದಲ್ಪಟ್ಟಿತು ಎಂಬುದನ್ನು ಪ್ರತಿ ಶಾಲಾಬಾಲಕನೂ ಬಲ್ಲ. ಇದರ ಸಂಪೂರ್ಣ ವಿವರ ಬೇಕಾದರೆ ಪ್ರಾಚೀನ ಇತಿಹಾಸದ ಪುಸ್ತಕಗಳನ್ನು ನೋಡಬೇಕಾಗುವದು. ಐದನೆಯ ಜಾಗತಿಕ ಯುದ್ಧ ಯಾಕೆ ಸಂಭವಿಸಿತು, ಆಗ ಏನೇನೆಲ್ಲ ನಡೆಯಿತು ಎಂಬುದನ್ನು ಇತಿಹಾಸದ ಪುಟಗಳನ್ನು ತಿರುವಿಹಾಕುವ ಶ್ರಮ ತೆಗೆದುಕೊಳ್ಳದೆ ಅರಿಯಬೇಕಾಗಿದ್ದಲ್ಲಿ ನೀವು ಈ ಕೆಳಗಿನ ಬರೆಹವನ್ನು ಓದಬಹುದು. ಒಂದು ವೇಳೆ ನಿಮಗದು ಗೊತ್ತಿದ್ದರೂ ಮತ್ತೊಮ್ಮೆ ನೆನಪಿಗೆ ತಂದುಕೊಳ್ಳುವದರಲ್ಲಿ ಹಾನಿಯೇನೂ ಇಲ್ಲ. ಮತ್ತೆ, ನೀವು ಇದನ್ನು ಇತರರಿಗೆ ಹೇಳಿ ಇತಿಹಾಸದ ನೀತಿಪಾಠಗಳನ್ನು ಬಿತ್ತರಿಸಲು ಸಹಾಯಕರಾಗಬಹುದು. ಸಮಾಜ ಕಲ್ಯಾಣ ಕಾರ್ಯಗಳಲ್ಲಿ ಇದೊಂದು ಮಹತ್ವದ ಕಾರ್ಯವೆಂದರೇನೂ ಅತಿಶಯೋಕ್ತಿಯಾಗದು.

*

ಆ ಕಾಲದಲ್ಲಿ ಪ್ರಾಣಿರಾಜ್ಯದಲ್ಲಿ ಉದ್ದಬಾಲದ ಬೃಹಲ್ಲಾಂಗೂಲವೆಂಬ ಅರಸು ಮನೆತನವೊಂದಿತ್ತು. ಉದ್ದಬಾಲದವರ ಅರಸಾಗಿದ್ದವನು ವೃದ್ಧನು. ಆತನಲ್ಲಿ ಆತನ

ಪ್ರಮಥನಾಥ ಬಿಶಿ ಅವರ ಬಂಗಾಲಿ ಕಥೆಯ ಆಧಾರದಿಂದ

ಪೂರ್ವಜರಾದ ಸಿಂಹಗಳ ರಕ್ತ ಹರಿಯುತ್ತಿತ್ತು. ಈ ವೃದ್ಧ ರಾಜನಿಗೆ ಓರ್ವನೇ ಮಗನಿದ್ದನು. ಸುಖದಂಶ ಎಂದಾತನ ಹೆಸರು. ಈತನೇ ಯುವ ರಾಜ, ಮುಂದೆ ಪ್ರಾಣಿರಾಜ್ಯಕ್ಕೆ ಅರಸನಾಗ ತಕ್ಕವ. ಬಹು ಸುಂದರನಾದ ತರುಣ.

ಒಂದು ದಿನ ಈ ಅರಸುಕುಮಾರ ಕಾಡು ಸ್ಥಿತಿಯಲ್ಲಿದ್ದ ಹಿಂದುಳಿದ ಮನುಷ್ಯರ ವಸಾಹತಿನಲ್ಲಿ ಬೇಟೆಯಾಡಲು ಹೋದನು. ಆದರೆ ದುರ್ದೈವದಿಂದ ಅದು ನಿರ್ಜನ ವಸಾಹತಾಗಿತ್ತು. ಅರಸುಕುಮಾರ ಅತ್ತಿತ್ತ ಅಲೆದಾಡಿದ್ದು ವ್ಯರ್ಥವಾಯಿತು. ಆತನ ಬಾಣಕ್ಕೆ ತಕ್ಕುದಾದ ಬೇಟೆಯೊಂದೂ ಆತನ ಕಣ್ಣಿಗೆ ಬೀಳಲಿಲ್ಲ. ದಣಿದು, ನಿರಾಶನಾಗಿ, ನಾಗರಿಕ ಜೀವನದ ರೀತಿಗೆ ಬೇಸತ್ತು ಆತ ಸರೋವರವೊಂದರ ದಂಡೆಯಲ್ಲಿ ಮಲಗಿಕೊಂಡು ತನ್ನ ಭಾಗ್ಯವನ್ನು ಹಳಿದುಕೊಂಡನು. ಅಡವಿಯ ಪಶುವನ್ನು ಮನುಷ್ಯ ಮಟ್ಟಕ್ಕೇರಿಸಿ, ಮೊದಲು ಮಾನವಜಾತಿಗೆ ಮಾತ್ರ ಲಭ್ಯವಿದ್ದ ಕೆಲ ಗುಣಗಳನ್ನೂ ಆಕಾಂಕ್ಷೆಗಳನ್ನೂ ಅದರಲ್ಲಿ ರೂಢಿಸಿದ ಉತ್ಕ್ರಾಂತಿಯನ್ನೂ ಆತ ಶಪಿಸಿದನು.

ನಿಜವಾಗಿ ಹೇಳುವದಾದರೆ ಈ ಅರಸುಕುಮಾರ, ಈ ಪ್ರಾಣಿರಾಜ್ಯದ ಭಾವೀ ಚಕ್ರವರ್ತಿ,. ಧನುರ್ಬಾಣಗಳಿಂದ ಸುಸಜ್ಜಿತನಾದ ಈ ವೀರ ಈಗ ತಮ್ಮ ಉಗುರು-ಹಲ್ಲುಗಳಿಂದ ಬೇಟೆಯಾಡಬಲ್ಲ ಮನುಷ್ಯ ಜಾತಿಯವರನ್ನು ಕುರಿತು ಯೋಚಿಸಿ ಅಸೂಯೆಪಟ್ಟುಕೊಂಡ. 'ಸುಧಾರಿಸಿದ' ಪಶುವಿನ ರೀತಿನೀತಿ ಅವನಿಗೆ' ಓಕರಿಕೆ ತಂದಿತು. 'ಸುಧಾರಿಸಿದ' ಪಶುವನ್ನಾಗಿ ತನ್ನನ್ನು ಮಾಡಿದ ಉತ್ಕ್ರಾಂತಿಯನ್ನಾತ ಜರೆದು ಶಪಿಸಿದ. ಬರೇ ನಿಷ್ಪ್ರಯೋಜಕ ವಿಚಾರಗಳನ್ನು ಮಾಡುತ್ತ ಸುಮ್ಮನೆ ಬಿದ್ದಿರುವದು ಅವನಿಗೆ ಅಸಹ್ಯವಾಯಿತು.

ಆದರೆ, ಅರಸುಕುಮಾರ ತನ್ನ ಹಿಂಗಾಲುಗಳ ಮೇಲೆ ಭಾರ ಹಾಕಿ ಮೇಲಕ್ಕೆದ್ದುದೇ ತಡ, ಅವನ ಬೇಸರ-ತಾಪಗಳೆಲ್ಲ ಮಿಂಚಿನಂತೆ ಮಾಯವಾಗಿಬಿಟ್ಟವು.

ಅಲ್ಲಿ, ಅವನ ಸಮೀಪದಲ್ಲಿ, ನೀರಿಗೆ ಇಳಿಯಲೆಂದು ಕಟ್ಟಿದ್ದ ಪಾವಟಿಗೆಗಳ ಮೇಲೆ ಮನುಷ್ಯ ಪ್ರಾಣಿಯೊಂದು ನಿಂತಿತ್ತು; ಅಂದರೆ ಟೊಂಕದ ಮೇಲೆ ಕೊಡ ಹೊತ್ತುಕೊಂಡು ನೀರಿಗೆಂದು ಬಂದ ಓರ್ವ ತರುಣಿ ಅಲ್ಲಿ ನಿಂತಿದ್ದಳು. ಅಹಹಾ! ಅವಳು ಸೌಂದರ್ಯದೇವಿಯೇ ಆಗಿದ್ದಳು.

ಆ ತರುಣಿಗೂ ಅರಸುಕುಮಾರ ಸುಖದಂಶನ ಇರವಿನ ಅರಿವಾಗಿದ್ದಿರಬೇಕು. ಏಕೆಂದರೆ ಅವಳ ಕಣ್ಣುಗಳಲ್ಲಿ ಏನೋ ಒಂದು ಕಾಂತಿ ಮಿನುಗುತ್ತಿತ್ತು. ಮುಖ ಪ್ರಥಮ ಪ್ರೇಮದ ಕಾವಿನಿಂದ ಕೆಂಪೇರಿತ್ತು.

ಲಜ್ಜೆಯಿಂದ ಅವಳು ತನ್ನ ಮುಖವನ್ನು ಕೆಳಗೆ ಮಾಡಿದಳು. ತನ್ನ ಅಂಗುಷ್ಠದಿಂದ ನೆಲವನ್ನು ಕೆದರುತ್ತ ಕೈಯುಗುರುಗಳನ್ನು ತೆಗೆಯುವ ಅಭಿನಯ ಮಾಡುತ್ತ ಅವಳು ಸರೋವರದ ಜಲದಲ್ಲಿ ಮೂಡಿದ್ದ ಸುಖದಂಶನ ಸುಂದರ ನಾರಸಿಂಹ ಮೂರ್ತಿಯನ್ನು ನೋಡುತ್ತ ನಿಂತಿದ್ದಳು.

ಸುಖದಂಶ ಮೆಲ್ಲಗೆ ಅವಳೆಡೆ ನಡೆದುಬಂದನು.



ಆತನ ಬಾಯಿಂದ ಪ್ರೇಮದ ಪ್ರಥಮ ಶಬ್ದಗಳು ತಾವಾಗಿ ಹೊರಬಂದವು: "ಹಾಲಮ್, ಹೋಲಮ್, ಹಾಲಮ್, ಹೋಲಮ್."

ತರುಣಿ ಉತ್ತರವೀಯಲಿಲ್ಲ.

ಸುಖದಂಶ ಮತ್ತೆ ತನ್ನ ಪ್ರೇಮಪ್ರದರ್ಶನದ ಮಾತುಗಳನ್ನಾಡಿದ.

ಅನೇಕ ಸಲ ಸುಖದಂಶನಾಡಿದ ಶಬ್ದಗಳನ್ನು ಕೇಳಿದ ಮೇಲೆ ತರುಣಿಯ ಮುಖದಿಂದ ವೀಣೆಯ ಮಧುರ ಸ್ವರದಂತೆ ಹೊರಟಿತು ಮಾತು: "ಹಮ್-ಹ್ಯೊಮ್-ಹಮ್."

**ಸುಖದಂಶ:** "ಹಮ್, ಹಮ್, ಧುಮ್!"

**ತರುಣಿ:** "ಹು ಹು! ಹ್ವಾಮ್!"

ನಿಮಗೆ ಅರ್ಥವಾಗಲಿಲ್ಲವೆ, ಈ ಸಂಭಾಷಣೆ? ಅದರ ಭಾಷಾಂತರ ಹೀಗಿದೆ:

**ಸುಖದಂಶ:** ಅಹಾ ಸುಂದರಿ! ನಿನ್ನ ಹೆಸರೇನು?

**ತರುಣಿ:** ನಾನು ಉಬ್ಬುಹಣೆಯ ಹುಡುಗಿ.

**ಸುಖದಂಶ:** ಭಲೆ! ಅಹಾ! ಮತ್ತೆ ನಿನ್ನ ತಂದೆಯ ಹೆಸರು?

**ತರುಣಿ:** ಗಿಡ್ಡ ಬಾಲದವರ ರಾಜ್ಯದಲ್ಲಿ ಶ್ರೇಷ್ಠನಾತ!

**ಸುಖದಂಶ:** ಅಂದರೆ........?

**ತರುಣಿ:** ಅಂದರೆ ಆತ ಪ್ರಗತಿಪರ ಮಾನವರ ಈ ದೊಡ್ಡ ಶಹರದ ಅಧಿಪತಿ. ಇಲ್ಲಿಯ ಗಿಡ್ಡ ಬಾಲದವರೆಲ್ಲ ಆತನ ಪ್ರಜೆಗಳು.

ಇಷ್ಟನ್ನರಿತ ಸುಖದಂಶನಿಗೆ ಇನ್ನಿಷ್ಟು ವಿಚಾರಗಳನ್ನು ಅರಿಯಬೇಕೆಂಬ ಕುತೂಹಲ ಪ್ರಬಲವಾಯಿತು. ಅಂದು ತನಗೆ ಕಾಡುಜಾತಿಯ ಒಂದುಳಿದ ಜೀವಿಯೊಂದೂ ತನ್ನ ಬಾಣಕ್ಕೆ ಸಿಗದಿದ್ದರ ಕಾರಣವು ಆತನಿಗೆ ತಿಳಿದುಬಂತು. ಸುಖದಂಶ ತರುಣಿಯನ್ನುದ್ದೇಶಿಸಿ ಹೇಳಿದನು: "ಓಹೋ ಅಂದರೆ ನೀನು ರಾಜ ಮನೆತನದ ಕನ್ಯೆಯೆ? ಸರಿ. ನಾನೂ ರಾಜ ಮನೆತನದವ. ನನ್ನ ತಂದೆ ಉದ್ದ ಬಾಲದವರಲ್ಲಿ ಉದ್ದ ಬಾಲದವ. ಆತ ಅಡವಿಯ ರಾಜ. ಹೀಗಿರುವದರಿಂದ ನನ್ನ ಪ್ರೇಮಯಾಚನೆಗೆ ನೀನೇನೂ ಅನರ್ಹಳಲ್ಲ. ಸುಂದರಿ, ನಿನ್ನ ಸೌಂದರ್ಯಕ್ಕೆ ನಾನು ಮನಸೋತಿದ್ದೇನೆ. ನಿನ್ನನ್ನು ಲಗ್ನವಾಗಬಲ್ಲೆನಾದರೆ ನಾನು ಪರಮಸುಖಿಯಾಗುವೆನು. ಮತ್ತೆ ನೀನು?"

ತರುಣಿ ಇದಕ್ಕೆ ಒಮ್ಮೆಲೆ ಉತ್ತರ ಕೊಡಲು ಸಮರ್ಥಳಾಗಲಿಲ್ಲ. ಸ್ತ್ರೀಸಹಜ ಲಜ್ಜೆ ಅವಳಿಗೆ ಅಡ್ಡಿ ಮಾಡಿರಬೇಕು. ಸುಖದಂಶನೇ ಮತ್ತೆ ನುಡಿದ: "ನಾನು ನಿನ್ನ ಪತಿಯಾಗಲು ಅನರ್ಹನೆಂದೇನಾದರೂ ನಿನ್ನ ಭಾವನೆಯಿದೆಯೆ?"

"ಛೆ! ಛೆ! ದಯಮಾಡಿ ಹಾಗನ್ನಬೇಡಿ. ನಿಮ್ಮ ಸೂಚನೆಗೆ ಹೌದು ಅಥವಾ ಇಲ್ಲ ಎನ್ನುವ ಉತ್ತರವನ್ನು ಕೊಡಲು ನಾನು ಅಸಮರ್ಥಳು ಎಂದರೆ ನನ್ನನ್ನು ಕ್ಷಮಿಸುವಿರಷ್ಟೆ? ದಯವಿಟ್ಟು ನನ್ನ ತಂದೆಯಲ್ಲಿ ಈ ವಿಷಯವನ್ನು ಪ್ರಸ್ತಾಪಿಸಿ," ತರುಣಿ ವಿನಯದಿಂದ ಹೇಳಿದಳು.

ಇಷ್ಟೆಂದವಳೇ ಆ ತರುಣಿ ಲಗುಬಗೆಯಿಂದ ಕೊಡ ತುಂಬಿಕೊಂಡು ಮನೆಗೆ ಹೊರಟಳು. ಆದರೆ ಹೊರಡುವ ಮುನ್ನ ಕ್ಷಣಕಾಲ ತನ್ನ ಪ್ರೇಮಕಟಾಕ್ಷವನ್ನು ಸುಖದಂಶನ ಮೇಲೆ ಬೀರಲು ಅವಳು ಮರೆಯಲಿಲ್ಲ. ಆ ಕಟಾಕ್ಷ ಮನ್ಮಥನ ಬಾಣವೇ ಆಗಿತ್ತು.

ಸುಖದಂಶ ಕನಸು ಕಾಣುತ್ತಲೇ ಮನೆಗೆ ಬಂದ. ತನ್ನ ತಂದೆಯ ಬಳಿಗೆ ಹೋಗಿ ಅಂಜಿಕೆಯಿಂದಲೂ ಆತುರದಿಂದಲೂ "ಅಪ್ಪಾ, ನಾನು ಮಾನವ ಹುಡುಗಿಯೊಬ್ಬಳನ್ನು ಲಗ್ನವಾಗಲಿಚ್ಛಿಸುತ್ತೇನೆ," ಎಂದ.

"ಆಂ! ಒಳ್ಳೇದು, ಒಳ್ಳೇದು. ಮಾನವ ಸೊಸೆಯಿಂದ ನಮ್ಮ ಕುಲಾಭಿವೃದ್ಧಿಯಾಗುವದೆಂದು ನಿನ್ನ ವಿಚಾರವಿದ್ದರೆ ಹಾಗೇ ಆಗಲಿ. ನಾನು ಮುದುಕ. ನನಗೆ ಮಾನವಕುಲದ ಹಿರಿಮೆಯ ಬಗ್ಗೆ ತುಸುಮಟ್ಟಿಗೆ ಗೊತ್ತಿದೆ. ನನ್ನ ಪೂರ್ವಜರು ಅವರೊಂದಿಗೆ ಹೋರಾಡಬೇಕಾಗಿತ್ತು. ನಿನಗೆ ಆ ವಿಚಾರ ಗೊತ್ತಿಲ್ಲ. ಹೇಗೆ ಗೊತ್ತಿರಬೇಕು? ನೀನಿನ್ನೂ ಆಗ ಪುಟ್ಟಮರಿ. ಆದರೂ ನನ್ನ ಮಂತ್ರಿಗಳನ್ನೂ ಸರದಾರರನ್ನೂ

ಕರೆಸಿ ಆಲೋಚಿಸುತ್ತೇನೆ," ಎಂದು ತಂದೆ ಹೇಳಿದ.

ಆದರೆ ಉದ್ದಬಾಲದ ಪ್ರಾಣಿರಾಜ್ಯದ ಅರಸನ ದರಬಾರದವರೆಲ್ಲ ತರುಣ ವಯಸ್ಸಿನವರಾಗಿದ್ದರು. ಅವರಿಗೆ ಹಿಂದಿನ ಇತಿಹಾಸ ಗೊತ್ತಿರಲಿಲ್ಲ. ಮಾನವಕುಲ ಒಮ್ಮೆ ಎಂಥ ಘನತೆಯನ್ನು ಹೊಂದಿತ್ತು ಎಂಬುದನ್ನೂ ಅರಿಯರು. ಆದ್ದರಿಂದ ಸುಖದುಂಶನು ಮಾನವಕುಲದ ಹುಡುಗಿಯನ್ನು ಲಗ್ನವಾಗುವದನ್ನು ಅವರು ಪ್ರತಿಭಟಿಸಿದರು. "ರಾಜಾಧಿರಾಜಾ, ದಯವಿಟ್ಟು ಕೆಳವರ್ಗದ ಜೀವಜಾತಿಯ ಹುಡುಗಿಯನ್ನು ಸೊಸೆಯನ್ನಾಗಿ ಮಾಡಿಕೊಳ್ಳಬೇಡ. ಇಂಥ ಅಂತರ್ಜಾತೀಯ ವಿವಾಹದಿಂದ ನಮ್ಮೆಲ್ಲರ ಮಾನ ಹೋಗುವದು," ಎಂದವರು ಸಲಹೆಯಿತ್ತರು.

ಸುದೈವದಿಂದ ಅರಸು ಈ ಸಲಹೆಯನ್ನು ಧಿಕ್ಕರಿಸಿದ. ಮಂತ್ರಿಗಳಲ್ಲದಿದ್ದರೂ ಪ್ರಜೆಗಳು ಅರಸನ ಬೆಂಬಲಕ್ಕೆ ನಿಂತರು.

ಅಡವಿಯ ಚಕ್ರವರ್ತಿ, ಉದ್ದ ಬಾಲದ ಕುಲದ ಅರಸು ತನ್ನ ಮಗನನ್ನು ಅತ್ಯಂತ ಪ್ರೀತಿಸುತ್ತಿದ್ದನು. ಮಗ ಅಸುಖಿಯಾಗುವಂಥ ಏನನ್ನೂ ಅವನು ಮಾಡಲಾರದವನಾಗಿದ್ದನು. ಆದುದರಿಂದ ಔಪಚಾರಿಕವಾಗಿ, ರಾಜವಂಶದ ಘನತೆಗೆ ತಕ್ಕಂತೆ ಆತ ತನ್ನ ರಾಯಭಾರಿಯೊಬ್ಬನನ್ನು ಆ ತರುಣಿಯ ತಂದೆ, ಗಿಡ್ಡ ಬಾಲದವರ ಅರಸನೆಡೆಗೆ ಕಳುಹಿದನು.

ಈ ರಾಯಭಾರಿ ತಂದ ಒಸಗೆಯ ವಿಚಾರ ತಿಳಿದೊಡನೆ ಗಿಡ್ಡ ಬಾಲದವರ ರಾಜ ಕೋಪದಿಂದ ಕಿಡಿಕಿಡಿಯಾದನು. ಆತನ ಜೀವಮಾನದಲ್ಲೀ ಆತ ಇಂಥ ಹೀನಾಯಮಾನವಾದ ಸೂಚನೆಯನ್ನು ಕೇಳಿರಲಿಲ್ಲ.

ಆದರೆ ತರುಣರಾದ ಆ ತರುಣಿಯ ಅಣ್ಣ ಮತ್ತು ಇತರ ಸಂಬಂಧಿಕರು ಸಂತೋಷಗೊಂಡರು. "ನಾವು ಹೇಳಿರಲಿಲ್ಲವೆ? ನಮ್ಮ ಉಬ್ಬು ಹಣೆಯ ಪುಟ್ಟ ಸುಂದರಿ ಶ್ರೇಷ್ಠ ಕುಟುಂಬದವನನ್ನು ಲಗ್ನವಾಗುವಳು ಎಂದು!" ಎಂದವರು ತಮ್ಮ ದೂರದರ್ಶಿತ್ವದ ಬಗ್ಗೆ ಹೆಮ್ಮೆ ಪಟ್ಟುಕೊಂಡರು. ಈ ಸಂಬಂಧ ಬೆಳೆಯಿತಾದರೆ ತಮಗಾಗಬಹುದಾದ ಲಾಭವನ್ನು ನೆನೆದು ರಾಜಕುಮಾರಿಯ ನೆಂಟರಿಷ್ಟರು ಹಿಗ್ಗಿದರು. ಮೃಗರಾಜ್ಯದ ಯುವರಾಜನನ್ನು ಲಗ್ನವಾದರೆ ಉಬ್ಬು ಹಣೆಯ ರಾಜಕನ್ಯೆ ನಿಜವಾಗಿಯೂ ಸುಖಸಾಗರದಲ್ಲಿ ತೇಲಾಡುವಳು! ರಾಜಕೀಯವಾಗಿ, ಆರ್ಥಿಕವಾಗಿ, ಮಾನವಕುಲಕ್ಕೆ ತಮ್ಮ ನೆರೆಯ ಉದ್ದ ಬಾಲದವರೊಂದಿಗೆ ಉಂಟಾಗುವ ಈ ಬಾಂಧವ್ಯದಿಂದ ಖಂಡಿತವಾಗಿಯೂ ಲಾಭವಾಗುವದು.

ನಗರದಲ್ಲೆಲ್ಲ ಇಂಥ ಮಾತುಕತೆಗಳು ನಡೆದವು.

"ಇದು ಸುವರ್ಣಸಂಧಿಯೇ ಸರಿ. ಈ ಲಗ್ನ ಸಂಬಂಧ ಬೆಳೆದರೆ ನಾವು ಅರಣ್ಯ ಪ್ರಾಂತವನ್ನು ನಿರ್ಭಯದಿಂದ ಪ್ರವೇಶಿಸಬಹುದು," ಎಂದರು ದರಬಾರಿನ ಮಂದಿ.

"ವಾಹವ್ವಾ! ಪ್ರಾಣಿಗಳು ಇನ್ನು ಮುಂದೆ ನಮ್ಮನ್ನು, ನಿನ್ನನ್ನು, ಪ್ರತಿಯೊಬ್ಬನನ್ನೂ 'ಭಾವ' ಎಂದು ಕರೆಯುತ್ತವೆ. ಛೆ! ಛೆ! ಛೆ! ನಮಗೆಲ್ಲ ಇದು ಎಂಥ ಗೌರವದ ಮಾತು!"

"ಪ್ರಾಣಿಗಳು ಈಗ ನಮಗಿಂತ ತಾವು ಶ್ರೇಷ್ಠ ಎಂದು ತಿಳಿಯುತ್ತವೆ. ಈ ಲಗ್ನದಿಂದ ಅವರ ಶ್ರೇಷ್ಠತೆಯ ಕಲ್ಪನೆ ಅಳಿದುಹೋಗುವದು. ಹಾಗಾಗಲೇಬೇಕಾದ್ದು ನ್ಯಾಯ."

ಹೀಗೆ ಜನ ತಮ್ಮತಮ್ಮಲ್ಲಿ ಆಡಿಕೊಂಡರು.

ಆದರೆ ಅವರ ರಾಜ ಮಾತ್ರ ಈ ಲಗ್ನಕ್ಕೆ ಕಡು ವಿರೋಧವನ್ನು ತಾಳಿದನು. "ಮಾನವಕುಲದ ಹಿರಿಮೆಗೆ ಜೀವಂತ ಸಾಕ್ಷಿಯೆಂದರೆ ನಾನೊಬ್ಬನೇ. ಇಲ್ಲಿರುವವರಲ್ಲಿ ಅದನ್ನು ಬಲ್ಲವನೆಂದರೆ ಬಹುಶಃ ನಾನೊಬ್ಬನೇ. ನೀವಿನ್ನೂ ನಿನ್ನೆಯ ಹಸುಳೆಗಳು. ನಿಮಗೇನು ಗೊತ್ತು ನಿಮ್ಮ ಪೂರ್ವಜರ ಮಹಿಮೆ? ಆದ್ದರಿಂದಲೇ ಈಗ ಊರುಗೋಲೆಂಬ ಭ್ರಮೆಯಿಂದ ಹುಲ್ಲುಕಡ್ಡಿಯನ್ನು ಹಿಡಿದುಕೊಳ್ಳಲು ಬಯಸುತ್ತಿದ್ದೀರಿ. ನಾನು ಜೀವಿಸಿರುವವರೆಗೂ ನನ್ನ ರಾಜ್ಯದಲ್ಲಿ ಇಂಥ ಅಂತ

ಜಾತೀಯ ವಿವಾಹವನ್ನು ನಡೆಯಗೊಡೆನು" ಎಂವಾತ ಅಬ್ಬರಿಸಿದ.

ಪ್ರಾಣಿರಾಜ್ಯದ ರಾಯಭಾರಿಯನ್ನು ತನ್ನ ಸಮ್ಮುಖಕ್ಕೆ ಕರೆಸಿಕೊಂಡು ಆತ ಹೇಳಿದ, "ಉತ್ಕ್ರಾಂತಿಯ ಪಥದಲ್ಲಿ ಮನುಷ್ಯ ಹಿನ್ನಡೆದಿದ್ದಾನೆ ಎನ್ನುವದು ನಿಜ. ಆದರೂ ಮನುಷ್ಯ ಮನುಷ್ಯನೇ! ಬೇಕಾದಷ್ಟು ಮುಂದುವರಿದರೂ ಪ್ರಾಣಿ ಮನುಷ್ಯನಿಗೆ ಸರಿಯಾಗಲಾರದು. ಈ ಎರಡು ಕುಲಗಳಲ್ಲಿ ಶರೀರಸಂಬಂಧದ ಪ್ರಶ್ನೆ ಎಂದಿಗೂ ಉದ್ಭವಿಸಲಾರದು. ಇದು ನನ್ನ ನಿರ್ಣಯ— ಕೊನೆಯ ನಿರ್ಣಯ."

ರಾಯಭಾರಿ ತಲೆಬಾಗಿ ನಮಸ್ಕರಿಸಿ ಹೊರಟು ಹೋದ.

ದರಬಾರದವರೆಲ್ಲ ಅರಸನ ಸುತ್ತ ನೆರೆದು "ಪ್ರಭು, ನೀವು ಮೊದಲನೆಯ ಗುಂಡು ಹಾರಿಸಿದಿರಿ. ಪ್ರಾಣಿಗಳು ಈ ಅಪಮಾನವನ್ನೆಂದಿಗೂ ಸಹಿಸುವದಿಲ್ಲ. ಅವು ಸೇಡು ತೀರಿಸಿಕೊಳ್ಳದೆ ಬಿಡವು" ಎಂದರು.

"ಹುಂ! ಆದರೆ ನಾವೇನೂ ಕೈಕಟ್ಟಿಕೊಂಡು ಕುಳಿತು ಸೋಲೊಪ್ಪುವವರಲ್ಲ. ಏನೇ ಆದರೂ ನಾವು **ಮನುಷ್ಯರು**" ಎಂದು ಗಿಡ್ಡ ಬಾಲದ ಅರಸ ಆತ್ಮವಿಶ್ವಾಸದಿಂದ ಹೇಳಿದ.

"ಇರಬಹುದು. ಆದರೆ ಅದೇ ಈಗ ಸಂಶಯಾಸ್ಪದವಾದ ವಾದವಾಗಿದೆ" ಜನ ಮನದಲ್ಲಿಯೆ ಅಂದುಕೊಂಡರು.

ಮೂರನೆಯ ಮಹಾಯುದ್ಧದ ಭೀಕರವಾದ ಅಣ್ವಸ್ತ್ರಗಳು, ಯಮಸ್ವರೂಪಿಯಾದ ಕಿರಣವಾಯುಗಳು ಭೂಮಿಯ ಮೇಲಿನ ಎಷ್ಟೋ ಜನಾಂಗಗಳನ್ನೇ ಆಹುತಿ ತೆಗೆದುಕೊಂಡಿದ್ದವು. ಮನುಷ್ಯನ ಬುದ್ಧಿಯ ದ್ಯೋತಕಗಳಾದ ಮಹಾಕಾರ್ಯಗಳ ಗುರುತು ಕೂಡ ಉಳಿಯದಂತೆ ಮಾಡಿದ್ದವು. ಮನುಷ್ಯನಿರ್ಮಿತ ನಾಗರಿಕತೆ ನುಚ್ಚುನೂರಾಗಿ ಹೋಯಿತು. ಪರಮಾಣು ವಿಕಿರಣದ ಫಲವಾಗಿ ಮನುಷ್ಯನ ದೇಹ, ನರಮಂಡಲ ರಚನೆ, ಮಿದುಳು ಮತ್ತು ಮನಸ್ಸು ತೀರ ಬದಲಾಗಿಹೋದವು. ಜೀವದಿಂದುಳಿದ ಮನುಷ್ಯ ಜಾತಿ ತಮ್ಮ ಹಿರಿಯರ ವೈಜ್ಞಾನಿಕ ಜ್ಞಾನವನ್ನು ಮರೆತುಬಿಟ್ಟಿತ್ತು. ಆದ್ದರಿಂದಲೇ ಅವರು ನಾಲ್ಕನೆಯ ಮಹಾಯುದ್ಧದಲ್ಲಿ ಗದೆ, ಕೋಲು, ಕಲ್ಲು ಮುಂತಾದ ಸಾಮಾನ್ಯ ಆಯುಧಗಳನ್ನು ಉಪಯೋಗಿಸಿ ಹೋರಾಡಿದರು. ಆ ಯುದ್ಧ ಕೂಡ ತಂತಾನೇ ನಿಲ್ಲುವಂತಾಯಿತು. ಏಕೆಂದರೆ ನಾಲ್ಕನೆಯ ಮಹಾಯುದ್ಧದ ಕಾಲದಲ್ಲಿ ಮನುಷ್ಯರು ಇತಿಹಾಸಪೂರ್ವ ಕಾಲದ ಅಪ್ರಬುದ್ಧ ಮನುಷ್ಯರಂತೆಯೆ ಆಗಿಬಿಟ್ಟಿದ್ದರು.

ಮತ್ತೆ ಜಗತ್ತಿನಲ್ಲಿ ತಾತ್ಪೂರ್ತಿಕ ಶಾಂತಿ ನೆಲೆಸಿತ್ತು. ಮತ್ತೆ ಹೊಸ ವಾತಾವರಣದಲ್ಲಿ ಹೋರಾಟಕ್ಕಾರಂಭವಾಯಿತು. ಈ ಹೋರಾಟವೇ ಐದನೆಯ ಜಾಗತಿಕ ಯುದ್ಧ. ಅದರ ಕಾರಣ ಪರಿಣಾಮ ವಿವರಣೆಯೆ ಈ ಕಥೆ.

ಈ ಕಾಲದಲ್ಲಿ ಲಂಡನ್, ನ್ಯೂಯಾರ್ಕ, ಬರ್ಲಿನ್, ಪ್ಯಾರಿಸ್, ಮಾಸ್ಕೊ, ಶಾಂಘಾಯಿ, ದಿಲ್ಲಿ, ಕಲಕತ್ತೆ, ಟೋಕಿಯೊ ಮೊದಲಾದ ನಗರಗಳು ಅಲ್ಲಿ ಬೆಳೆದ ಅಡವಿಯ ಮೂಲಕ ಗುರುತುಹತ್ತದಂತಾಗಿದ್ದವು. ಕಟ್ಟಡಗಳ ಅವಶೇಷಗಳಲ್ಲಿ ಪ್ರಾಣಿಗಳು ಮನೆ ಮಾಡಿಕೊಂಡಿದ್ದವು. ಪರ್ವತದ ಗುಹೆಗಳಲ್ಲಿ ಇಪ್ಪತ್ತನೆಯ ಶತಮಾನದ ಮಾನವನ ವಂಶಜರು ವಾಸಿಸುತ್ತಿದ್ದರು.

ಮೂರನೆಯ ಮಹಾಯುದ್ಧದ ಪರಿಣಾಮವಾಗಿ ಉತ್ಕ್ರಾಂತಿಯ ಧಾರೆ ಬದಲಾಗಿತ್ತು. ಮನುಷ್ಯ ಗಿಡ್ಡನಾಗುತ್ತ ನಡೆದಿದ್ದ. ನಾಲ್ಕೂವರೆ ಅಡಿ ಎತ್ತರದ ಮನುಷ್ಯ ಎಂದರೆ 'ಎಂಥಾ ರಾಕ್ಷಸ' ಎಂದು ಇತರರು ಆಶ್ಚರ್ಯಪಟ್ಟುಕೊಳ್ಳುತ್ತಿದ್ದರು. ಊರಾಂಗಉಟಾಂಗ ಮಂಗದಂತೆ ಮನುಷ್ಯನ ದೇಹದ ತುಂಬ ಕೂದಲು ಬೆಳೆದಿತ್ತು. ಹೆಂಗಸರ ತಲೆಗೂದಲು ಉದ್ದವಾಗಿರಲಿಲ್ಲ. ಅವಳ ಇಡೀ ದೇಹವೂ ಕೂದಲುಗಳಿಂದ ಮುಚ್ಚಿತ್ತು. ಪಾದಗಳು ಪ್ರಾಣಿಗಳ ಗೊರಸಿನೋಪಾದಿಯಲ್ಲಿ ಕಠಿಣವಾಗಿದ್ದವು. ಮನುಷ್ಯನ ಹಣೆಯ ಎರಡೂ ಪಕ್ಕಗಳಲ್ಲಿ ಕೋಡುಗಳು ಮೂಡತೊಡಗಿದ್ದವು. ಪೃಷ್ಠ

ಭಾಗದಲ್ಲಿ ಪುಟ್ಟಬಾಲವೊಂದು ಅಸಹಾಯಕವಾಗಿ ನೇತಾಡುತ್ತಿತ್ತು.

.ಈ ಜನ ತಮ್ಮ ಪೂರ್ವಜರ ಭಾಷೆಯನ್ನೂ ಮರೆತಿದ್ದರು. ವಿವಿಧ ಸ್ವರೋಚ್ಚಾರಗಳೇ ಅವರ ಭಾಷಾಸಾಮ್ರಾಜ್ಯವಾಗಿತ್ತು.

ಆದರೆ ಪ್ರಾಣಿಗಳ ಸ್ಥಿತಿ ಇದಕ್ಕೆ ವಿರುದ್ಧವಾಗಿತ್ತು. ಅವು ಉತ್ಕ್ರಾಂತಿಯ ಪಥದಲ್ಲಿ ಮುಂದುವರಿದಿದ್ದವು. ಈ ಕಥೆ ನಡೆದ ಕಾಲಕ್ಕೆ ಪ್ರಾಣಿಗಳಿಗೂ ಮನುಷ್ಯನಿಗೂ ವಿಶೇಷ ವ್ಯತ್ಯಾಸವಿರಲಿಲ್ಲ. ಮನುಷ್ಯನಿಗೆ ಪಶುವಿನ, ಪಶುವಿಗೆ ಮನುಷ್ಯನ ಭಾಷೆ ಅರ್ಥವಾಗುತ್ತಿತ್ತು. ಈಗ ಪಶುಗಳಲ್ಲಿ ಮತ್ತು ಮಾನವರಲ್ಲಿ ಪ್ರೇಮ ಕೂಡುವದು ಎಂದರೆ ಹುಚ್ಚು ಮಾತು ಎನ್ನುವಂತಿದ್ದರೂ ಆಗೇನೂ ಹಾಗಿರಲಿಲ್ಲ. ಪಶುಗಳಲ್ಲಿ ಮತ್ತು ಮಾನವರಲ್ಲಿ ಸ್ನೇಹ-ಸಹಕಾರದ ಅಗತ್ಯವಿದೆ ಎಂದು ತಿಳಿಯಲಾಗುತ್ತಿತ್ತು.

ಗಿಡ್ಡ ಬಾಲದವರ ಅರಸು ಲಗ್ನಕ್ಕೆ ಒಪ್ಪಲಿಲ್ಲ ಎಂಬ ಸುದ್ದಿಯನ್ನು ರಾಯಭಾರಿ ತಂದೊಡನೆ ಉದ್ದ ಬಾಲದವರ ರಾಜ್ಯದಲ್ಲಿ ಕೋಲಾಹಲವೆದ್ದಿತು. ಈಗ ಇದು ಒಂದು ರಾಷ್ಟ್ರೀಯ ಪ್ರಶ್ನೆಯಾಯಿತು. ಸೇಡಿನ ಭಾವನೆ ಜಾಗೃತವಾಯಿತು. ಅರಸು ಮತ್ತು ಪ್ರಜೆಗಳ ಇಚ್ಛೆ ಒಂದಾಯಿತು. ಪ್ರಾಣಿರಾಜ್ಯದ ಅರಸು ಪ್ರಜಾಪ್ರತಿನಿಧಿಗಳ ಅವಸರದ ಸಭೆ ಕರೆದು ಮುಂದೇನು ಮಾಡಬೇಕೆನ್ನುವದರ ಬಗ್ಗೆ ಸಲಹೆ ಕೇಳಿದನು.

"ಅತ್ಯಂತ ಉಗ್ರ ಕ್ರಮ ಕೈಕೊಳ್ಳಬೇಕು," ಪ್ರಜೆಗಳು ಏಕಕಂಠದಿಂದ ಹೇಳಿದರು.

''ಏನು ಕ್ರಮ ತೆಗೆದುಕೊಳ್ಳಬೇಕೆನ್ನುತ್ತೀರಿ?" ಅರಸ ಕೇಳಿದ.

"ಯುದ್ಧ! ಗಿಡ್ಡ ಬಾಲದವರ ಮೇಲೆ ಯುದ್ಧ ಸಾರಬೇಕು," ಪ್ರಜೆಗಳು ಕೂಗಿದರು.

"ಸರಿ. ಸೈನ್ಯವನ್ನು ಸಂಘಟಿಸಿರಿ. ಪ್ರತಿಯೊಬ್ಬ ಉದ್ದಬಾಲದವನೂ ತನ್ನ ಕರ್ತವ್ಯ ನೆರವೇರಿಸಲಿ," ಅರಸ ಹೇಳಿದ.

ಪ್ರಾಣಿರಾಜ್ಯದಲ್ಲಿ ಸಂತೋಷವೇ ಸಂತೋಷ. ಯುದ್ಧದ ಕಲ್ಪನೆಯಿಂದ ಪ್ರತಿ ಪ್ರಾಣಿಯ ಬಾಹು ಸ್ಫುರಿಸಿತು. ಹೆಂಗಸರಲ್ಲೆಲ್ಲ ಇದೇ ಮಾತು. "ಕೇಳಿದಿಯೇನೇ ನಮ್ಮ ಯುದ್ಧದ ಸಂಗತಿ? ನನ್ನ ಗಂಡನ ಅಣ್ಣನ ಮಗ ಸೈನ್ಯಕ್ಕೆ ಊಟ ಪೂರೈಸುತ್ತಾನೆ. ಆತ ಹೇಳಿದ ಮಾತಿದು,'' ಒಬ್ಬಳೆಂದಳು.



"ಯುದ್ಧದ ಸುದ್ದಿ ಕೇಳಿ ಸಂತೋಷಗೊಂಡ ಪ್ರಾಣಿರಾಜ್ಯದ ಸ್ತ್ರೀಯರು ಉತ್ಸಾಹಿತರಾದರು. ಅವರಲ್ಲಿ ಅದನ್ನು ಬಿಟ್ಟು ಬೇರೆ ಮಾತುಕತೆಯೆ ನಡೆಯಲಿಲ್ಲ."

"ಹಾದೇನೇ? ಅಹಾ! ಎಂಥ ಆನಂದದ ಸುದ್ದಿ! ನಡೆ ಮನೆಗೆ. ರುಚಿಕರವಾದ ಮಾಂಸವಿದೆ. ಒಂದು ತುತ್ತು ತಿನ್ನುವಿಯಂತೆ,'' ಅವಳ ಗೆಳತಿ ಹೇಳಿದಳು.

ಮಕ್ಕಳು ಧ್ವಜಗಳನ್ನು ಹಿಡಿದು ಬೀದಿಗಳಲ್ಲಿ ಅಡ್ಡಾಡಿದರು. "ಮುಯ್ಯಿಗೆ ಮುಯ್ಯಿ!" ಎಂದವರು ಕೂಗಿದರು. ದೊಡ್ಡವರು ಯುದ್ಧಸಿದ್ಧತೆಯಲ್ಲಿ ಮಗ್ನರಾಗಿಹೋಗಿದ್ದರು.

ಪ್ರಾಣಿರಾಜ್ಯದಲ್ಲಿ ನಡೆದ ಯುದ್ಧಸಿದ್ಧತೆಯ ವಾರ್ತೆ ಗಿಡ್ಡಬಾಲದವರ ರಾಜ್ಯಕ್ಕೆ ಬಂತು. ಉಬ್ಬುಹಣೆಯ ರಾಜಕುಮಾರಿಯನ್ನು ಸುಖದಂಶನಿಗೆ ಕೊಟ್ಟು ವಿವಾಹ ಮಾಡೋಣ

ವೆಂದಿದ್ದ ದರಬಾರದವರು ಅರಸನಿಗೆ, "ನಾವು ಮೊದಲೇ ಹೇಳಿರಲಿಲ್ಲವೇ? ಈಗ ಪ್ರತ್ಯಯಕ್ಕೆ ಬಂತಲ್ಲ. ಈಗ ಶತ್ರುಗಳನ್ನು ಎದುರಿಸುವವರಾರು?" ಎಂದು ಕೇಳಿದರು.

"ಓಹೋ! ಶಕ್ತಿಯನ್ನು ಶಕ್ತಿಯಿಂದಲೇ ಎದುರಿಸುವೆವು," ಅರಸ ನುಡಿದ. ಆದರೆ ಮನುಷ್ಯನ ದೇಹಶಕ್ತಿಯಾದರೂ ಎಷ್ಟು!

ಮನುಷ್ಯರ ವಸಾಹತಿನಲ್ಲಿ ಇನ್ನೊಂದು ಯುದ್ಧದ ಸುದ್ದಿಯೇನೂ ಸಂತಸವನ್ನು ತರಲಿಲ್ಲ. ತಮ್ಮ ಈ ಅಳುಕಿಗೆ ಅವರು ಒಂದು ಕಾರಣವನ್ನೂ ಹೇಳಿದರು. ಪರಿಪೂರ್ಣ ಯುದ್ಧವೆಂದರೆ ರಾಷ್ಟ್ರದ ಸರ್ವಾಂಗೀಣ ಪ್ರಗತಿಯ ದ್ಯೋತಕ ಎಂದವರು ವಾದಿಸಿದರು. ಪ್ರಾಣಿ ಈಗ ಪ್ರಗತಿ ಪಥದಲ್ಲಿ ಮನುಷ್ಯನಿಗಿಂತ ಮುಂದೆ ಇತ್ತು. "ಯುದ್ಧ ವಿಚಾರದಿಂದ ಅವು ಕುಣಿದಾಡಲಿ. ನಾವು ಸಂತಸಪಟ್ಟುಕೊಳ್ಳಲು ಕಾರಣವೇನಿದೆ?" ಎಂದವರು ನುಡಿದರು.

*

ಆ ಮಹಾಮುಹೂರ್ತ ಬಂತು. ಉದ್ದಬಾಲ ಮತ್ತು ಗಿಡ್ಡಬಾಲದವರಲ್ಲಿ ಘನಘೋರ ಸಂಗ್ರಾಮ ಜರುಗಿತು. ಪ್ರಾಣಿಗಳು ಆನೆ, ಹುಲಿ, ಕರಡಿ, ಚಿರತೆ, ಕಾಡುಕೋಣ, ಹಾವು, ಮುಂಗಲಿ, ನರಿ ಮುಂತಾದ ನಾನಾ ಪ್ರಾಣಿಗಳ ಸೇನೆಯನ್ನು ತಂದಿದ್ದವು. ಗಿಡ್ಡಬಾಲದವರ ಸೇನೆಯಲ್ಲಿ ಎಲ್ಲ ಬಣ್ಣದ, ಎಲ್ಲ ಕುಲದ ಮಾನವ ಸಮೂಹ ಕೂಡಿತ್ತು. ಎರಡೂ ಪಕ್ಷದವರು ಅವರವರು ಹುಟ್ಟುವಾಗಲೇ ದೊರೆತಿದ್ದ ನೈಸರ್ಗಿಕ ಆಯುಧಗಳಾದ ಹಲ್ಲು, ಉಗುರು, ಕೋಡು, ಬಾಲ, ಗೊರಸು ಮುಂತಾದವುಗಳಿಂದ ಕಾದಾಡಿದರು. ಆಹಾ! ಎಂಥ ಭೀಕರ ಸಂಗ್ರಾಮವದು! ಆದರೆ ಮನುಷ್ಯನ ನೈಸರ್ಗಿಕ ಆಯುಧಗಳು ಕಡಿಮೆ ತರಗತಿಯವಾದ್ದರಿಂದ ಅವನು ಸೋತನು. ಯುದ್ಧ ಮುಗಿಯಿತು.

ಐದನೆಯ ಮಹಾಯುದ್ಧ ಪ್ರಾಣಿಗಳ ಮಹಾ ವಿಜಯದಲ್ಲಿ ಕೊನೆಗಂಡಿತು. ಮನುಷ್ಯನಿಗೂ ಇದರಿಂದ ಲಾಭವಾಯಿತೆನ್ನಬಹುದು. ಹಿಂದಿನ ಮಹಾಯುದ್ಧಗಳಲ್ಲಿ ಇದಕ್ಕಿಂತ ಹೆಚ್ಚಿನ ಅನಾಹುತಗಳು ಸಂಭವಿಸಿರಬಹುದು. ಆದರೆ ಈ ಐದನೆಯ ಮಹಾಯುದ್ಧಕ್ಕೆ ಹೆಚ್ಚಿನ ಐತಿಹಾಸಿಕ ಮಹತ್ವವಿದೆ. ಏಕೆಂದರೆ ಅದು ಮುಂಬರುವ ಸೃಷ್ಟಿಯ ರೂಪನಿರ್ಣಯವನ್ನು ಮಾಡುವದಾಗಿತ್ತು.

*

ಮುಂದಿನ ಕಥೆ ಸರಳವಿದೆ! ಸೋತ ಗಿಡ್ಡಬಾಲದ ಅರಸು ತನ್ನ ಪ್ರತಿಜ್ಞೆಯನ್ನು ಬಿಟ್ಟುಕೊಟ್ಟು ತನ್ನ ಮಗಳನ್ನು ಸುಖದಂಶನಿಗೆ ಮದುವೆ ಮಾಡಿಕೊಟ್ಟನು. ಅವರಿಬ್ಬರೂ ಆಗಿನ ಜೀವಿಗಳಲ್ಲೇ ಅತ್ಯಂತ ಸುಖಿಯಾದ ದಂಪತಿಗಳಾಗಿದ್ದರು. ಗಿಡ್ಡಬಾಲದ ಅರಸನ ಪರಿವಾರದವರು, "ನಾವು ಭವಿಷ್ಯ ನುಡಿದಂತೆಯೆ ಆಯಿತು" ಎಂದು ಜಂಭ ಕೊಚ್ಚಿದರು.

ಮನುಷ್ಯರ ಜಗತ್ತಿನಲ್ಲಿ ರಾಜಪರಿವಾರವನ್ನು ಬಿಟ್ಟು ಉಳಿದವರು ಈ ಪರಾಜಯದಲ್ಲಿ ಜಯದ ಭಾವವನ್ನು ಕಾಣಲೆತ್ನಿಸಿದರು. "ಈಗ ನಾವು ಪ್ರಾಣಿಗಳ ಸಂಬಂಧಿಕರೆಂದು ಹೆಮ್ಮೆಯಿಂದ ಹೇಳಿಕೊಳ್ಳಬಹುದು. ಇದರಂಥ ಗೌರವದ ಮಾತು ಇನ್ನಾವುದಿದೆ? ಈ ಮನುಷ್ಯಜಾತಿಯೆಂದರೆ ಬೇಸರ ಬಂದುಹೋಗಿದೆ. ನಾವು ಪರಿಪೂರ್ಣ ಪಶುವಾಗಲು ಇನ್ನೆಷ್ಟು ದಿನ ಕಾಯಬೇಕೋ ದೇವರೇ ಬಲ್ಲ," ಎಂದ ಒಬ್ಬ.

ಇನ್ನೊಬ್ಬ "ಬಹಳ ದಿನ ಬೇಡ. ನನ್ನ ಮೊಮ್ಮಗನಿಗೆ ಎರಡು ಕೋಡುಗಳು ಮೂಡಿವೆ. ಅವು ನನ್ನ ಕೋಡುಗಳಂತೆ ಮೊಂಡವಾಗಿ ಕಿರಿದಾಗಿಲ್ಲ. ಅವು ಚೆನ್ನಾಗಿ ಬೆಳೆಯುವ ಲಕ್ಷಣವಿದೆ," ಎಂದ.

*

ಈ ಇನ್ನೊಬ್ಬನ ಮಾತು ನಿಜವಾಯಿತು. ಯಥಾವಕಾಶದಲ್ಲಿ ಸುಖದಂಶನ ಪತ್ನಿ ಓರ್ವ ಮಗನನ್ನು ಹಡೆದಳು. ಅದಕ್ಕೆ ಬಾಲ, ಹಣೆಯ

ಮೇಲೆ ಕೋಡು, ಗೊರಸು, ಮೈಕೂದಲು ಎಲ್ಲ ಪ್ರಾಣಿಶಿಶುವಿಗೆ ಇರುವಂತೆಯೇ ಇತ್ತು. ಅದು ಪ್ರಾಣಿಗಳ ಭಾಷೆಯಲ್ಲಿ ಮಾತಾಡುತ್ತಿತ್ತು. ಅದರ



ಬುದ್ಧಿಶಕ್ತಿಗೂ ಪಶುವಿನ ಬುದ್ಧಿಶಕ್ತಿಗೂ ಅಂತರ ವಿರಲಿಲ್ಲ. ಮನುಷ್ಯನಿಗೂ ಅದಕ್ಕೂ ಇದ್ದ ಭೇದ ಬಹಳವಾಗಿತ್ತು.

ಉಬ್ಬು ಹಣೆಯ ರಾಜ್ಞಿ ಮಗುವನ್ನು ತೋಳುಗಳಲ್ಲೆತ್ತಿ ತೂಗಾಡಿಸುತ್ತ, "ಅಹಹಾ! ಎಂಥ ಮುದ್ದಾದ ಕೂಸು! ನನ್ನ ಮಗು ಸಾಕ್ಷಾತ್ ಪಶುವೇ ಸರಿ," ಎಂದು ಗರ್ವದಿಂದ ಅಂದಳು.

"ಸುಂದರವಿದೆ. ಆದರೆ ಪರಿಪೂರ್ಣ ಪಶುವಲ್ಲ. ಅದರ ಮೂಗು ಇನ್ನೂ ತುಸುಮಟ್ಟಿಗೆ ತಾಯಿಯ ಮೂಗಿನಂತೆಯೆ ಇದೆ," ಎಂದು ಸುಖದಂಶನೆಂದ.

ಆ ಕೂಸಿಗೆ "ಮಹಾಮಾನವ" ಎಂಬ ಹೆಸರನ್ನಿಟ್ಟರು. ಆತ ವಯಸ್ಸಿಗೆ ಬಂದ ಬಳಿಕ ತನ್ನ ಅಜ್ಜಂದಿರ ರಾಜ್ಯಕ್ಕೆ ಅಧಿಪತಿಯಾದನು. ೧೭೦೭ ರ ಒಕ್ಕೂಟ ಕಾಯದೆಯಂತೆ ಇಂಗ್ಲಂಡದ ಅರಸು ಮೊದಲನೆಯ ಜೇಮ್ಸನ ಕಾಲದಲ್ಲಿ ಇಂಗ್ಲಂಡ-ಸ್ಕಾಟಲಂಡಗಳು ಒಂದಾದಂತೆ ಪ್ರಾಣಿ ರಾಜ್ಯ ಮತ್ತು ಮಾನವ ರಾಜ್ಯಗಳು ಒಂದರಲ್ಲೊಂದು ವಿಲೀನವಾಗಿ ಮಹಾಮಾನವ ಚಕ್ರವರ್ತಿಯ ಆಧಿಪತ್ಯದಲ್ಲಿ ಒಕ್ಕಟ ರಾಷ್ಟ್ರವಾಯಿತು. ಆತನ ದಕ್ಷ ಆಡಳಿತದಲ್ಲಿ ಮಾನವ ಮತ್ತು ಪಶುಗಳಲ್ಲಿಯ ಚಿಕ್ಕಪುಟ್ಟ ಮತಭೇದಗಳು ಮಾಯವಾದವು. ಅವೆರಡೂ ಕುಲಗಳು ಹಿಂದಿನದನ್ನು ಮರೆತು ಒಂದಾದವು.

ನಮಗೆ ತಿಳಿದಿರುವಂತೆ .ಇದೇ ಕೊನೆಯ ಯುದ್ಧ.



## ಪರಮಾಣುಯುಗ

ಅಣು ಶಸ್ತ್ರಾಸ್ತ್ರಗಳ ಜನ್ಮದ ನಂತರ ಶಾಂತಿ ಹೊರತು ಜಗತ್ತಿಗೆ ಬೇರೆ ಮಾರ್ಗವೇ ಉಳಿದಿಲ್ಲ.

—ಐಸೆನ್‌ಹಾವರ

ಮೂರನೇ ಮಹಾಯುದ್ಧದಲ್ಲಿ ಯಾವ ಬಗೆಯ ಶಸ್ತ್ರಾಸ್ತ್ರಗಳನ್ನು ಬಳಸಲಾಗುವದೆಂದು ನಾನು ಹೇಳಲಾರೆ. ಆದರೆ ನಾಲ್ಕನೇ ಮಹಾಯುದ್ಧದ ಭವಿಷ್ಯ ಹೇಳಬಲ್ಲೆ. ಅದನ್ನು ಮನುಷ್ಯರು ಕಲ್ಲು-ದೊಣ್ಣೆ-ಗದೆಗಳಿಂದ ಹೋರಾಡುವರು.

—ಐನ್‌ಸ್ಟೈನ್

# ಮಂಗಳಲೋಕಕ್ಕೆ ಹೋದರೆ----

ಬರೆದವರು : ಪಾವೆಂ.

ನೀವು ಮಂಗಳಲೋಕಕ್ಕೆ ಹೋಗ ಬಯಸುತ್ತಿದ್ದರೆ ಮತ್ತು ಅದಕ್ಕೆ ಬೇಕಾದ ವಾಹನ ಸೌಕರ್ಯ ನಿಮ್ಮ ಹತ್ತಿರ ಇದ್ದಿದ್ದರೆ ಮೊನ್ನೆ ಸೆಪ್ಟೆಂಬರ ೭ ನೇ ದಿನ ಅತ್ಯುತ್ತಮ ಮುಹೂರ್ತ ಬಂದಿತ್ತು. ಯಾಕೆಂದರೆ ಆ ಕೆಂಪು ಗ್ರಹ ಆ ದಿನ ಭೂಮಿಗೆ ಅತಿ ಸಮೀಪ ಬಂದಿತ್ತು. ಇನ್ನು ಮೂವತ್ತೆರಡು ವರ್ಷಕಾಲ ಅದು ಇಷ್ಟು ಹತ್ತಿರ ಬರು ವುದಿಲ್ಲ.

ಸಮೀಪ ಅಂದರೆ ಕೇವಲ ೩,೫೧,೬೩,೦೦೦ ಮೈಲು. ಸಾಕಷ್ಟು ಹತ್ತಿರ ಇಲ್ಲ ಅನ್ನುವಿರಾ? ಆದರೆ ಭೂಮಿಯಿಂದ ಮಂಗಳದ ಸರಾಸರಿ ದೂರ ೫,೧೦,೦೦,೦೦೦ ಮೈಲುಗಳಿಷ್ಟಿದೆಯೆಂಬ ತಥ್ಯವನ್ನು ಗಮನಿಸಿದರೆ ಮೂರೂವರೆ ಕೋಟಿ ಮೈಲು ಹತ್ತಿರ ಎನಿಸುವದಿಲ್ಲವೇ ?

ಮಂಗಳನನ್ನು [illegible] ವರ್ಷಗಳಿಗೊಮ್ಮೆ ಮಾತ್ರ ಇಷ್ಟು ಹತ್ತಿರ ಬರುತ್ತದೆ. ಸೂರ್ಯನ ಸುತ್ತ ಪ್ರದಕ್ಷಿಣೆ ಹಾಕುವ ಭೂಮಿಯ ಪಥಕ್ಕೆ ಮಂಗಳನ ಪಥ ಸರಿಯಾಗಿ ಸಮಾನಾಂತರವಾಗಿರದೆ ಒಂದೆಡೆ ಉಬ್ಬಿ ಒಂದೆಡೆ ಕುಗ್ಗಿರುವುದೇ ಇದಕ್ಕೆ ಕಾರಣ.

ಈ ಕೆಂಪು ತಾರೆ—ಅಂಗಾರಕ ಎಂಬ ಅದರ ಇನ್ನೊಂದು ಹೆಸರು ಅದು ಕೆಂಡದಂತಿರುವುದರಿಂದಲೇ ಉಂಟಾಗಿದೆ—ಎಂದಿನಿಂದಲೂ ಜನರ ಕೌತುಕವನ್ನು ಕೆರಳಿಸಿದೆ. ಭಾರತೀಯ ಜ್ಯೋತಿಷಿಗಳು ಅದನ್ನು ಪಾಪಗ್ರಹಗಳ ಸಾಲಿನಲ್ಲಿ ಸೇರಿಸಿ ಅದಕ್ಕೆ ಎಲ್ಲ ತರದ ಉಪದ್ರವಕಾರಕ ಶಕ್ತಿಯನ್ನು ಆರೋಪಿಸಿದ್ದಾರೆ. ರೋಮನ್ನರು

### ಮಂಗಳನ ಸಂಗತಿ

| | |
|---|---|
| ಸೂರ್ಯನಿಂದ ಸರಾಸರಿ ದೂರ | ೧೪,೨೦,೦೦,೦೦೦ ಮೈಲು |
| ಭೂಮಿಗೆ ಅತಿ ಹತ್ತಿರ ಬಂದಾಗ | ೩,೫೦,೦೦,೦೦೦ ,, |
| ಮಂಗಳನ ವರ್ಷ | ೬೮೭ ದಿನಗಳು |
| ಮಂಗಳನ ದಿನ | ೨೪ ತಾಸು ೩೭ ನಿಮಿಷ |
| ಮಂಗಳನ ವ್ಯಾಸ | ೪,೨೧೮ ಮೈಲು |

ಮಂಗಳನ ಸುತ್ತ ಎರಡು ಚಿಕ್ಕ ಚಂದ್ರರು ತಿರುಗುತ್ತಾರೆ. ಒಂದರ ಹೆಸರು ಫೋಬೋಸ್ ಇನ್ನೊಂದರದು ದೀಮೋಸ್. ಮಂಗಳನಿಂದ ಮೊದಲನೆಯದು ೫,೮೦೦ ಮೈಲು ಮತ್ತು ಎರಡನೆಯದು ೧೪,೬೦೦ ಮೈಲು ದೂರದಲ್ಲಿದೆ.

ಡಾ. ರಾಬರ್ಟ್ ರಿಚಾರ್ಡಸನ್ನರ ಲೇಖದ ಆಧಾರದಿಂದ

ಅದಕ್ಕೆ ತಮ್ಮ ಯುದ್ಧಾಭಿಮಾನಿ ದೇವತೆಯ ಹೆಸರಿಟ್ಟಿದ್ದಾರೆ.

ಆಧುನಿಕ ಕಾಲದಲ್ಲಿ ಮಂಗಳನ ಬಗ್ಗೆ ಕುತೂಹಲ ಇನ್ನಷ್ಟು ಹೆಚ್ಚಾಗಿದೆ. ಇದಕ್ಕೆ ಕಾರಣವಿದೆ. ಸೂರ್ಯನ ಸಂಸಾರದಲ್ಲಿ ಮಂಗಳ ನಮ್ಮ ಭೂಮಿಗೆ ನೆರೆಮನೆಯವ. ಆದ್ದರಿಂದ ದುರ್ಬೀನಿನಲ್ಲಿ ಅದನ್ನು ಪರೀಕ್ಷಿಸುವುದು ಸುಲಭ.

ಆದರೆ ಖಗೋಳ ತಜ್ಞರಲ್ಲದೆ ಸಾಮಾನ್ಯ ಜನರೂ ಮಂಗಳನ ಬಗ್ಗೆ ಉತ್ಸಾಹ ತಾಳಲು ಕಾರಣವೆಂದರೆ,ಅಲ್ಲಿ ಭೂಮಿಯಂತೆ ಜೀವಿಗಳಿರಬಹುದೇ ಎಂಬ ಪ್ರಶ್ನೆ. ೧೮೭೭ ರಲ್ಲಿ ಇಟಲಿಯ ಶಿಯಾಪರೆಲ್ಲಿ ಮತ್ತು ಅಮೇರಿಕದ ಲೋವೆಲ್ ಎಂಬಿಬ್ಬರು ಖಗೋಳಜ್ಞರು ಮಂಗಳ ಗ್ರಹದಲ್ಲಿ ಬಲೆಗಳಂತೆ ಹೆಣೆದ ರೇಖೆಗಳಿರುವುದನ್ನು ಕಂಡರು. ಶಿಯಾಪರೆಲ್ಲಿಯು ಅವುಗಳನ್ನು "ಕಾಲುವೆ" ಗಳೆಂದು ಕರೆದನು. ಲೋವೆಲ್ಲನು ತನಗೆ ಮಂಗಳದಲ್ಲಿ ಹುಲ್ಲುಗಾವಲು, ಹೊಲ ಮೊದಲಾದವು ಕಾಣಿಸಿದವೆಂದೂ ೨೦೦ಕ್ಕಿಂತ ಹೆಚ್ಚು ಕಾಲುವೆಗಳನ್ನು ಗುರುತಿಸಿದ್ದೇನೆಂದೂ ಸಾರಿದನು.

## ಮಂಗಳ-ಭೂಮಿಗಳ "ಯೋಗ"



ಬೇರೆ ಯಾವ ಗ್ರಹದಲ್ಲಿಯೂ ಇಂಥ ರೇಖೆಗಳಿಲ್ಲದಿರುವುದರಿಂದಲೂ ಅಲ್ಲಿ ಕಾಲುವೆಗಳಿವೆಯೆಂಬ ಹೇಳಿಕೆಗಳಿಂದಲೂ ಮಂಗಳಲೋಕದಲ್ಲಿ ಜೀವಜಂತುಗಳಿವೆಯೆಂಬ ಊಹಾಪೋಹ ಮೊದಲಾಯಿತು. ಜೀವಗಳಿವೆಯಷ್ಟೇ ಅಲ್ಲ, ಅವು ಮಾನವನಂತೆ ಬುದ್ಧಿವಂತ ಪ್ರಾಣಿಗಳಾಗಿರಬೇಕೆಂದೂ ತರ್ಕಿಸಲಾಯಿತು. ಮಂಗಳದಲ್ಲಿ ನೀರು ಇಲ್ಲವೇ ಇಲ್ಲೆನ್ನಲು ಬಾರದಿದ್ದರೂ ಬಹಳ ಕಡಿಮೆಯಿದೆ. ಅಲ್ಲಿನ "ಮನುಷ್ಯರು" ಇದಕ್ಕಾಗಿಯೇ ಸುದೀರ್ಘವಾದ ಕಾಲುವೆಗಳನ್ನು (ಒಂದು "ಕಾಲುವೆ" ಯಂತೂ ೧,೫೦೦ ಮೈಲುದ್ದವಿದೆ) ತೋಡಿದ್ದಾರೆ. ಅಲ್ಲಿ ಮಳೆಯಿಲ್ಲ. ನೀರಿನ ಮುಖ್ಯ ಆಶ್ರಯ ಧ್ರುವ ಪ್ರದೇಶದ ಹಿಮ ಮಾತ್ರ. ಮಂಗಳದ ಧ್ರುವ ಪ್ರದೇಶದಿಂದ ಹಿಮ ಕರಗಿದ ನೀರನ್ನು ಕಾಲುವೆಗಳ ಮೂಲಕ ಹರಿಸಿಕೊಳ್ಳುತ್ತಿದ್ದಾರೆ, ಇತ್ಯಾದಿ ಊಹೆಗಳು ಹೊರಟವು.

ಕೆಲವರು ಇನ್ನೂ ಮುಂದೆ ಹೋದರು. ಮಂಗಳವು ಭೂಮಿಗಿಂತ ಸೂರ್ಯನಿಗೆ ದೂರವಾಗಿರುವುದಲ್ಲದೆ ಚಿಕ್ಕದೂ ಆಗಿರುವುದರಿಂದ ಅದು ಭೂಮಿಗಿಂತ ಎಷ್ಟೋ ಹಿಂದೆ ಕಾವಾರಿ ತಣ್ಣಗಾಗಿದೆ. ಅದರಿಂದ ಅಲ್ಲಿ ಭೂಮಿಗಿಂತ ಮೊದಲೇ ಜೀವಜಂತುಗಳು ಕಾಣಿಸಿಕೊಂಡಿರಬೇಕು. ವಿಕಾಸವಾದವು ನಿಜವಾಗಿದ್ದರೆ, ಅಲ್ಲಿ ಜೀವಗಳ ವಿಕಾಸ ಭೂಮಿಯಲ್ಲಿ ಆದುದಕ್ಕಿಂತಲೂ ಹೆಚ್ಚಾಗಿ ಈಗ ಉತ್ಕ್ರಾಂತಿಪಥದಲ್ಲಿ ನಮಗಿಂತಲೂ ಮುಂದೆ ಹೋಗಿರಬೇಕು. ಅಂದರೆ ಮಂಗಳ ಲೋಕದ ''ಜನರು'' ಭೂಮಿಯ ಜನರಿಗಿಂತಲೂ ಬುದ್ಧಿವಂತರಾಗಿರಬೇಕು.

ಈ ವಾದಸರಣಿಯನ್ನುಪಯೋಗಿಸಿ ಅವರು ಅದ್ಭುತ ಕಲ್ಪನೆಗಳನ್ನು ಕಟ್ಟಿದರು. ಟನ್‌ಗಟ್ಟಳೆ ಕಥೆ ಕಾದಂಬರಿಗಳು ಹೊರಟವು. ಎಚ್. ಜಿ. ವೆಲ್ಸರು War of the Worldsದಲ್ಲಿ ಒಂದು ಭಯಾನಕ ಸನ್ನಿವೇಶವನ್ನು ರಚಿಸಿದರು. ಭೂಮಿಯ ಮನುಷ್ಯರಿಗಿಂತ ಮುಂದುವರಿದ, ರಾಕ್ಷಸರಿಗೆ ಸದೃಶರಾದ ಮಂಗಳಲೋಕದ

## ಮಂಗಳದಲ್ಲಿ ಮನುಷ್ಯ



" ಮೂಗು ತುರಿಸುತ್ತಲ್ಲಯ್ಯಾ ಏನು ಮಾಡಲಿ ? "

ಮೂವರು "ಮನುಷ್ಯ''ರು ವಿಚಿತ್ರ ವಾಹನಗಳಲ್ಲಿ ಕುಳಿತು ಭೂಮಿಗೆ ಬಂದರು. ಅವರಿಗೂ ಇಲ್ಲಿನ ಮನುಷ್ಯರಿಗೂ ಆದ ಯುದ್ಧದಲ್ಲಿ ಆ ಮೂವರೇ ನಮ್ಮವರನ್ನು ಭೀಕರ "ಮೃತ್ಯುಕಿರಣ" ಗಳಿಂದ ಧ್ವಂಸ ಮಾಡಿದರು. ಗರ್ಭಿಣಿಯರು ಓದಿದರೆ ಗರ್ಭಸ್ರಾವವಾಗಬಹುದಾದಂಥ ಇಂಥ ಕಥೆ

ಗಳು ಮಂಗಳ ಗ್ರಹದ ಬಗ್ಗೆ ಜನರಲ್ಲಿ ಒಂದು ಭಯಮಿಶ್ರಿತ ಕುತೂಹಲವನ್ನುಂಟುಮಾಡಿದವು.

ಮಂಗಳ ಗ್ರಹದಲ್ಲಿ ನಮಗಿಂತಲೂ ಬುದ್ಧಿವಂತರಾದ ಪ್ರಾಣಿಗಳಿರಬೇಕೆಂಬ ಕಲ್ಪನೆಗೆ ೧೯೩೩ ರಲ್ಲಿ ದೊಡ್ಡ ಹೊಡೆತ ಬಿತ್ತು. ಆ ವರ್ಷ ವಿಲ್ಸನ್ ಪರ್ವತದ ೧೦೦ ಇಂಚಿನ ದೊಡ್ಡ ದುರ್ಬೀನಿನಲ್ಲಿ ಪರೀಕ್ಷಿಸಿದಾಗ ಮಂಗಳ ಗ್ರಹದಲ್ಲಿ ಪ್ರಾಣಿ ಜೀವನಕ್ಕೆ ಅತ್ಯಗತ್ಯವಾದ ಪ್ರಾಣವಾಯು ( ಆಕ್ಸಿಜನ್ )ವೇ ಇಲ್ಲ, ಇದ್ದರೂ ಅದು ಸೇಕಡಾ ಒಂದಂಶಕ್ಕಿಂತಲೂ ಕಡಿಮೆ ಇದೆ ಎಂಬುದಾಗಿ ತಿಳಿದುಬಂತು. ಅತಿ ನಿಮ್ನವಾದ ಜಂತುಗಳಲ್ಲದೆ ಮತ್ತಾವ ಜೀವಿಗಳೂ ಪ್ರಾಣವಾಯುವಿಲ್ಲದೆ ಬದುಕಲಾರವು.

ಆದರೆ ಮಂಗಳವು ಭೂಮಿಯ ಜನರ ಆಸ್ಥೆಯನ್ನು ಕಳೆದುಕೊಂಡಿಲ್ಲ. ಆಕಾಶಬಾಣಗಳ ರಚನೆಯ ನಂತರ ನಾವೇ ಮಂಗಳಲೋಕಕ್ಕೆ ಹಾರುವ ವಿಚಾರಕ್ಕೆ ಪುಟ ದೊರೆಯಿತು. ಅಂತರ್‌ಗ್ರಹ ಸಂಘವೆಂಬೊಂದು ಸಾಹಸಿಗಳ ಸಂಸ್ಥೆ ಇಂಥ ಪ್ರಯಾಣದ ಚಿಂತನೆಯನ್ನೇ ಹಗಲಿರುಳು ನಡೆಸಿದೆ. ಇನ್ನು ಇಪ್ಪತ್ತೈದು ವರ್ಷಗಳಲ್ಲಿ ಮಂಗಳ ಗ್ರಹವನ್ನು ತಲಪುವುದು ಅಸಾಧ್ಯವಲ್ಲವೆಂದು ಹಲ ವಿಜ್ಞಾನಿಗಳು ನಂಬಿದ್ದಾರೆ. ಬ್ರಿಟಿಶ ಅಂತರ್‌ಗ್ರಹ ಸಂಘದ ಅಂದಾಜಿನ ಪ್ರಕಾರ ಭೂಮಿಯಿಂದ ಹೊರಟು ೮ ತಿಂಗಳಲ್ಲಿ ನೀವು ಮಂಗಳವನ್ನು ಮುಟ್ಟಬಲ್ಲಿರಿ.

ಮಂಗಳಲೋಕಕ್ಕೆ ಹೋಗುವ ಆಕಾಶಬಾಣದಲ್ಲಿ ನಿಮಗೊಂದು ತಿಕೀಟು ಸಿಕ್ಕಿತೆಂದಿಟ್ಟುಕೊಳ್ಳಿರಿ. ನೀವು ಮಂಗಳವನ್ನು ತಲಪಿದಾಗ ಅಲ್ಲಿ ಎಂಥ ಪರಿಸ್ಥಿತಿಯನ್ನು ಕಾಣುವಿರಿ? ಇದಕ್ಕೆ ಸಂಬಂಧಿಸಿದ ಎಲ್ಲ ಪ್ರಶ್ನೆಗಳಿಗೂ ಸರಿಯಾದ ಉತ್ತರ ವಿಜ್ಞಾನಿಗಳಿಗೆ ಗೊತ್ತಿಲ್ಲದಿದ್ದರೂ ಅನೇಕ ಪ್ರಶ್ನೆಗಳನ್ನು ಅವರು ಉತ್ತರಿಸಬಲ್ಲರು.

ಮಂಗಳ ಲೋಕದಲ್ಲಿ ಚಳಿ ಹೆಚ್ಚೆಂದು ನಿಮಗೆ ಎಲ್ಲಕ್ಕೂ ಮೊದಲು ಅನುಭವವಾಗುವದು. ಅಲ್ಲಿ ವಿಷುವದ್ರೇಖೆಯ ಬಳಿ ಹಗಲು ೮೦ ಡಿಗ್ರಿ ಉಷ್ಣತೆ ಇರುವುದಾದರೂ ರಾತ್ರಿ ಒಮ್ಮೆಗೇಲೇ ಅದು ಶೂನ್ಯಾಂಶಕ್ಕಿಂತ ಕೆಳಗೆ ೨೦ ಡಿಗ್ರಿ ಇಳಿದುಹೋಗುವುದು. ಕೆಲವೇಳೆ ಧ್ರುವ ಪ್ರದೇಶದಲ್ಲಿ–೧೩೦ ಡಿಗ್ರಿ ವರೆಗೂ ಇಳಿದು ಹೋಗುವುದು. ಭೂಮಿಯ ಮೇಲೆ ಅತ್ಯುಷ್ಣವೆಂದರೆ ೧೩೬ ಡಿಗ್ರಿ, ಅತಿ ಶೀತವೆಂದರೆ—೯೦ ಡಿಗ್ರಿ ( ಸೈಬೇರಿಯಾದಲ್ಲಿ ) ವರೆಗೆ ಏರಿಳಿತವಾಗುವುದು. ಇಷ್ಟು ಬೆಚ್ಚಗಿನ ಲೋಕದಲ್ಲಿರುವ ನೀವು ಮಂಗಳಕ್ಕೆ ಹೋದರೆ ನಿಮಗೆ ಅನೇಕ ಕಂಬಳಿಗಳು ಬೇಕಾದಾವೆನ್ನಿರಿ.

ಆಮೇಲೆ ನಿಮಗೆ ಮಂಗಳದ ವಾತಾವರಣ ತೀರ ತೆಳ್ಳಗೆ ಅನಿಸುವುದು. ( ಅಲ್ಲಿ ನಿಮಗೆ ಅಗತ್ಯವಾದಷ್ಟು ಪ್ರಾಣವಾಯುವಿಲ್ಲದ್ದರಿಂದ ನಿಮ್ಮ ಪ್ರಯಾಣವನ್ನು ಏರ್ಪಡಿಸಿದವರು ಪ್ರಾಣವಾಯು ನಳಿಗೆಗಳನ್ನು ನಿಮಗೆ ಒದಗಿಸಿರುವರು. ) ಅಲ್ಲಿನ ವಿರಳ ವಾತಾವರಣದಲ್ಲಿ ಭೀಕರ ಬಿರುಗಾಳಿಗಳು ಬೀಸುತ್ತಿರುತ್ತವೆ. ಭೂಮಿಯಿಂದ ಫೋಟೋ ತೆಗೆದಾಗ ಈ ಬಿರು-ಗಾಳಿಗಳ ಧೂಳಿ ಮತ್ತು ಮೋಡಗಳು ಅಲ್ಲಿನ ಆಕಾಶದಲ್ಲಿ ಚಲಿಸುವುದು ಉಜ್ವಲವಾಗಿ ಕಾಣಿಸುತ್ತದೆ. ಈಚೆಗೆ ಈ ಧೂಳಿನಿಂದ ಇಡೀ ಗ್ರಹವೇ ಹಳದಿಯಾಗಿ ಕಂಡಿತು.

ನಿಮ್ಮ ಗೋಚರಕ್ಕೆ ಬರಲಿರುವ ಮೂರನೇ ಸಂಗತಿ, ಅಲ್ಲಿನ ನೀರಿನ ಅಭಾವ. ಮೊದಲೇ ಭೂಮಿಯ ಅರ್ಧದಷ್ಟು ವ್ಯಾಸವುಳ್ಳ ಮಂಗಳ ಗ್ರಹದಲ್ಲಿ ಎಲ್ಲೆಲ್ಲಿಯೂ ಸಮುದ್ರದ ಬದಲು ಬರಿ ಮರುಭೂಮಿಗಳು ಕಾಣಿಸುವವು. ಇವುಗಳಲ್ಲಿ ಬಿರುಗಾಳಿ ಬಹಳ. ನಮ್ಮ ಮರುಭೂಮಿಗಳಂತೆ ಇವು ಬಿಸಿಯಾಗಿರದೆ ಚಳಿಯೇ ಚಳಿಯಾಗಿರುವವು.

ಮಂಗಳಲೋಕದಲ್ಲಿ ಇರುವ ಅಲ್ಪಸ್ವಲ್ಪ ನೀರು ಆ ಗ್ರಹದ ಎರಡು ಧ್ರುವಪ್ರದೇಶಗಳಲ್ಲಿ ಹಿಮವಾಗಿ ಸೇರಿರುತ್ತದೆ. ಬೇಸಗೆಯಲ್ಲಿ ಇವು ಕರಗಿ ಮಂಗಳದ ವಿಷುವದ್ರೇಖೆಯ ಕಡೆ ಹರಿದು ಬರುವಂತೆ ಕಾಣುತ್ತದೆ. ಅಂತೂ " ಮಂಗಳ ಲೋಕದಲ್ಲಿರುವ ನೀರನ್ನೆಲ್ಲ ಸೇರಿಸಿದರೂ

ಭೂಮಿಯ ಒಂದು ದೊಡ್ಡ ಸರೋವರವನ್ನು ತುಂಬಲು ಸಾಲದು."

ಆಮೇಲೆ, ಮಂಗಳಲೋಕದಲ್ಲಿ ನೀವು ನಿಮ್ಮಂಥ ಅಥವಾ ಬೇರೆ ತರದ "ಮನುಷ್ಯ" ರನ್ನು ಕಾಣುವ ಸಂಭವವುಂಟೇ? ಆ ಸಂಭವ ತೀರ ಕಡಿಮೆಯೆಂದು ವಿಷಾದದಿಂದ ಹೇಳಬೇಕಾಗಿದೆ. ನೀರು, ಪ್ರಾಣವಾಯು ಇವೆರಡರ ಅಭಾವದಲ್ಲಿ ಅಲ್ಲಿ ಭೂಮಿಯಲ್ಲಿರುವಂಥ ಪ್ರಾಣಿಗಳು ಇರಲು ಸಾಧ್ಯವಿಲ್ಲೆಂದು ಈಗ ಬಹುಜನ ವಿಜ್ಞಾನಿಗಳು ನಂಬಿದ್ದಾರೆ.

ಆದರೆ ಸಸ್ಯಜೀವನ ಅಲ್ಲಿರಬಹುದು. ಮಂಗಳ ಲೋಕದ ಉತ್ತರ ಗೋಲಾರ್ಧದಲ್ಲಿ ಶುದ್ಧ ಮರುಭೂಮಿಯೇ ಇದ್ದು ಅದರಿಂದಲೇ ಆ ಗ್ರಹಕ್ಕೆ ಕೆಂಪು ಬಣ್ಣ ಬಂದಿದೆ. ದಕ್ಷಿಣ ಗೋಲಾರ್ಧದಲ್ಲಿ ಮಾತ್ರ ಕಡು ಹಸುರು ಬಣ್ಣವಿದೆ. ಇದನ್ನು ಹಿಂದೆ ಸಮುದ್ರವೆಂದು ಭ್ರಮಿಸಲಾಗಿತ್ತು. ಆದರೆ ಅದು ತಪ್ಪೆಂದು ಈಗ ಖಂಡಿತವಾಗಿದೆ.

ಈ ಹಸುರು ಪ್ರದೇಶ ಮಂಗಳದ ಚಳಿಗಾಲದಲ್ಲಿ ಕಂದು ಅಥವಾ ಬೂದು ಬಣ್ಣಕ್ಕೆ ತಿರುಗುತ್ತದೆ ಬೇಸಗೆಯಲ್ಲಿ ಹಸುರು ಬಣ್ಣ ಏರುತ್ತದೆ. ಈ ಬದಲಾವಣೆಗೆ ಋತು ಬದಲಾವಣೆಗಳೊಡನೆ ಸಸ್ಯದ ಉತ್ಪತ್ತಿ ಮತ್ತು ನಾಶವಾಗುವುದು ಕಾರಣವಿರಬಹುದು. ಆದರೆ ಮಂಗಳದಲ್ಲಿ ದೊಡ್ಡ ದೊಡ್ಡ ಮರಗಿಡಗಳನ್ನು ಅಪೇಕ್ಷಿಸಿದರೆ ನೀವು ನಿರಾಶರಾಗುವಿರಿ. ಪ್ರಾಣವಾಯು ಮತ್ತು ನೀರಿನ ಅಭಾವದಿಂದ ಅದು ಅಸಾಧ್ಯವಾಗುವುದು. ಅಲ್ಲಿರಬಹುದಾದ್ದು ಬಂಡೆಗಲ್ಲುಗಳ ಮೇಲೆ ಬೆಳೆಯುವ ಕೆಂಪು ಛಾಯೆಯ ಪಾಚಿಯಂಥ ಸಸ್ಯವಿರಬೇಕು

ಹಾಗಾದರೆ ಅಲ್ಲಿ "ಕಾಲುವೆ"ಗಳು ಹೇಗೆ ಬಂದವು? ಎಂದು ನೀವು ಕೇಳುವಿರಿ. ಈ ಕಾಲುವೆಗಳು ನಿಜವಾಗಿ ಏನಿರಬಹುದೆಂದು ವಿಜ್ಞಾನಿಗಳಿಗೆ ಗೊತ್ತಿಲ್ಲ. ಅವು ಜ್ವಾಲಾಮುಖಿಗಳಿಂದಾದ ಬಿರುಕುಗಳಿರಬಹುದು, ಅಥವಾ ಬೇರೇನಾದರೂ ಇರಬಹುದು. ಮೊನ್ನೆ ಸೆಪ್ಟೆಂಬರದಲ್ಲಿ ವಿಜ್ಞಾನಿಗಳು ಹತ್ತಿರ ಬಂದ ಮಂಗಳನ ಫೋಟೋ ತೆಗೆದಿದ್ದಾರೆ. ಈ ಫೋಟೋಗಳನ್ನು ಪರೀಕ್ಷಿಸಿದಾಗ ಈ "ಕಾಲುವೆ ಸಮಸ್ಯೆ"ಗೆ ಉತ್ತರ ದೊರೆಯುವುದಾಗಿ ಆಶಿಸಲಾಗಿದೆ.

ಮಂಗಳ ಲೋಕದ ಅನಾಕರ್ಷಕವಾದ ಈ ವಿದ್ಯಮಾನಗಳನ್ನು ತಿಳಿದೂ ತಿಳಿದೂ ನೀವು ಅಲ್ಲಿಗೆ ಹೋಗಬಯಸುತ್ತಿದ್ದರೆ ಎಲ್ಲ ತರದ ಕಷ್ಟನಿಷ್ಠುರಗಳಿಗೂ ಸಿದ್ಧರಾಗಿಯೇ ಹೊರಡಬೇಕಾಗುವುದು. ಮಂಗಳಕ್ಕೆ ಹೋಗಿ ಬರಲು ಮೂರರಿಂದ ಐದು ವರ್ಷಗಳ ವರೆಗೆ ಹಿಡಿಯಬಹುದು.

ಮಂಗಳದಲ್ಲಿ ನೀವು ಮೂರು ವರ್ಷ ಉಳಿಯುವುದೆಂದರೆ ಅಲ್ಲಿಯ ಒಂದೂವರೆ ವರ್ಷ ಮಾತ್ರವಾಗುವುದು. ಯಾಕಂದರೆ, ಅಲ್ಲಿಯ ದಿನ ಹೆಚ್ಚು ಕಡಿಮೆ ಭೂಮಿಯ ದಿನದಷ್ಟೇ (ನಿಗದಿಯಾಗಿ ೨೪॥ ತಾಸು) ಇದ್ದರೂ ವರ್ಷ ಮಾತ್ರ ೬೮೭ ದಿನದಷ್ಟಿರುವುದು.

ನಿಮ್ಮ ಪ್ರಯಾಣವೇ ಸಾಕಷ್ಟು ಕಾಲ ತೆಗೆದುಕೊಳ್ಳುವುದು. ಎಷ್ಟು ವೇಗವಾದ ವಾಹನವಿದ್ದರೂ ೩-೪ ಕೋಟಿ ಮೈಲು ಸಾಗಬೇಕಲ್ಲವೆ?

ನೀವು ವಸತಿಯನ್ನು ಧ್ರುವ ಪ್ರದೇಶದಲ್ಲೇ ಹೂಡಬೇಕಾಗುವುದು. ಯಾಕಂದರೆ ನಿಮಗೆ ಬೇಕೇಬೇಕಾದ ನೀರಿನ ಪೂರೈಕೆ ಸ್ವಲ್ಪವಾದರೂ ಇರುವುದು ಅಲ್ಲಿಯೇ. ಆದರೆ ಅಲ್ಲಿ ನೀವು ಅತಿ ಶೀತ ಮತ್ತು ಸುದೀರ್ಘ ರಾತ್ರಿಯ ಕಷ್ಟಗಳಿಗೆ ಎದೆಗೊಡಬೇಕಾಗುವುದು.

ಮೊದಲು ನೀವು ಅಲ್ಲಿ ಭದ್ರವಾದ, ಚಳಿಗಾಳಿಗಳನ್ನು ನಿರೋಧಿಸಬಲ್ಲ ವಸತಿಯನ್ನು ಕಟ್ಟಿಕೊಳ್ಳಬೇಕಾಗುವುದು. ಪ್ರಾಣವಾಯು ಸಲಕರಣೆಗಳಿಲ್ಲದೆ ನೀವು ಮನೆಯಿಂದ ಹೊರಬೀಳಲೇ ಆರಿರಿ. ಎಲ್ಲ ಸಲಕರಣೆಗಳೊಂದಿಗೆ ಹೊರಬಿದ್ದರೂ ನೀವು ಏಕಾಕಿಯಾಗಿ ಹೊರಬಿದ್ದರೆ ತುಂಬ ಅಪಾಯ. ಪ್ರಾಣವಾಯು ಚೀಲಕ್ಕೇನಾದರೂ ಆದರೆ ಕೆಲಸ ಕೆಟ್ಟೀತು. ನಿಮ್ಮ ಗುಂಪಿನಲ್ಲಿ ಕೆಲವರನ್ನಾದರೂ ಕರೆದುಕೊಂಡೇ ನೀವು ಹೊರಬೀಳಬೇಕು

ಅಲ್ಲಿನ ಸ್ಥಳಪರಿಶೀಲನೆಗಳನ್ನು ನೀವು ವಿಮಾನದಲ್ಲಿ ಕುಳಿತೇ ಮಾಡುವುದೊಳಿತು. ಅಲ್ಲಿ ಗಾಳಿಯ ದಟ್ಟಣೆ ಭೂಮಿಯಲ್ಲಿರುವುದರ ೧೦ ಅಥವಾ ೫ ರಲ್ಲೊಂದಂಶ ಮಾತ್ರ, ಇದ್ದರೂ ವಿಮಾನ ಹಾರಬಲ್ಲದು. ಯಾಕೆಂದರೆ ಮಂಗಳ ದಲ್ಲಿ ಗುರುತ್ವಾಕರ್ಷಣೆ ಭೂಮಿಯ ಸೇಕಡಾ ೩೭ ರಷ್ಟು ಮಾತ್ರ ಇದೆ. ಮರಗಿಡಗಳ ಅಡ್ಡಿ ಯಿಲ್ಲದ್ದೂ ಒಂದು ಸುಖ.

ಆದರೆ ಮಂಗಳಲೋಕವಾಸದಲ್ಲಿ ನಿಮಗೆ ಬರುವ ಎಲ್ಲಕ್ಕೂ ದೊಡ್ಡ ಕಷ್ಟವೆಂದರೆ ಅಲ್ಲಿಯ ಜೀವನದ ಅಸಹನೀಯ ಏಕತಾನತೆ. ನೀವು ದಿನ ಬೆಳಗಾದರೆ ಅದೇ ಅದೇ ಜನರನ್ನು ನೋಡ ಬೇಕಾಗುವುದು. ಹೊರಗೆ ನೈಸರ್ಗಿಕ ಸೌಂದರ್ಯ ಕೂಡ ಇಲ್ಲ. ಎಲ್ಲೆಲ್ಲಿಯೂ ಬೆಂಗಾಡು. ರಾತ್ರಿ ನಿಮ್ಮನ್ನು ನೋಡಿ ಕಣ್ಣು ಮಿಟುಕಿಸುವ ಸಾವಿ ರಾರು ತಾರೆಗಳನ್ನು ನೋಡುವುದೇ ಕೆಲಸ. ನಿಮ್ಮ ತಾಯ್ನಾಡಾದ ಭೂಮಿ ನಿಮಗೆ ಬೆಳಗಿನ ಜಾವ ಅಥವಾ ಸಂಜೆ ಹೊತ್ತಿಗೆ ಕೈಮಾಡಿ ಕರೆದಂತೆ ಭಾಸವಾಗುವುದು. ಭೂಮಿಯಿಂದ ಮಂಗಳ ಕಾಣಿಸುವುದಕ್ಕಿಂತಲೂ ದೊಡ್ಡದಾಗಿ ಮಂಗಳ ದಿಂದ ಭೂಮಿ ನಿಮಗೆ ಹಸುರು ಚಿಕ್ಕೆಯಾಗಿ ಕಾಣಿಸುವುದು. ಆದರೆ ನಿಮಗೂ ಭೂಮಿಗೂ ಎಷ್ಟು ಕಾಲ ದೇಶಗಳ ಅಂತರ! ಈ ಪರಿಸ್ಥಿತಿ ಯಲ್ಲಿ ನೀವು ಮಂಗಳ ಪ್ರವಾಸವನ್ನು ಸಹಿಸ ಬಲ್ಲಿರಾ?

ಅಲ್ಲದೆ ಮಂಗಳ ಪ್ರವಾಸಕ್ಕೆ ೫,೦೦೦ ಕೋಟಿ ರೂಪಾಯಿ ಬೇಕಾದೀತು. ಅದನ್ನಾರು ಬಿಚ್ಚು ವವರು?

ಆದ್ದರಿಂದ ನೀವು ಇಲ್ಲೇ ಉಳಿದು ಮೊನ್ನೆ ಸೆಪ್ಟೆಂಬರದಲ್ಲಿ ವಿಜ್ಞಾನಿಗಳು ದುರ್ಬೀನಿನಲ್ಲಿ ಏನೇನು ಕಂಡರೆಂಬ ವರದಿಯನ್ನೋದಿರಿ. ಅದು ಇನ್ನು ಕೆಲ ತಿಂಗಳಲ್ಲಿ ನಿಮಗೆ ಲಭ್ಯವಾದೀತು.

---

# ಪಾಟಲಿಪುತ್ರ



ಆಕರ್ಷಿಕಾಪುರದ ರಾಜನ ಮಗಳಾದ ಪಾಟಲಿಯ ಚೆಲುವಿನ ಕಥೆಯನ್ನು ಅಡಗೂಲಜ್ಜಿಯಿಂದ ಕೇಳಿ ರಾಜಕುಮಾರ ಪುತ್ರಕನ ಎದೆಗೆ ಆಗಲೇ ಹೂವಿನ ಬಾಣ ನಟ್ಟಿತು. ಅವಳನ್ನು ತನ್ನವಳನ್ನಾಗಿ ಮಾಡಿಕೊಂಡೇ ಬಿಡುವೆನೆಂದುಕೊಂಡ.

ರಾಜ ಅವಳನ್ನು ಅಂತಃಪುರದ ಮೇಲುಪ್ಪರಿಗೆಯಲ್ಲಿ ಹೂವಿನಂತೆ ಬೆಳೆಸುತ್ತಿದ್ದಾನೆ. ಅಲ್ಲಿ ಪುರುಷರ ದೃಷ್ಟಿಗೂ ಪ್ರವೇಶವಿಲ್ಲ—ಎಂದು ಅಜ್ಜಿ ಹೇಳಿದ್ದಳು. ಆದರೆ ರಾಜಕುಮಾರ ಇದರಿಂದ ಎದೆಗೆಡಲಿಲ್ಲ. ಆ ರಾತ್ರಿ ಅವನು ತನ್ನ ಐಂದ್ರಜಾಲಿಕ ಪಾದರಕ್ಷೆಯ ಸಹಾಯದಿಂದ ಗಾಳಿಯಲ್ಲಿ ಹಾರಿ ಅಂತಃಪುರದ ಕಿಟಿಕಿಯಲ್ಲಿ ಕುಳಿತು ಆ ಚೆಲುವೆಯೊಡನೆ ಪ್ರೇಮ ಬೆಳೆಸಿದನು. ಇದು ರಾಜನಿಗೆ ಗೊತ್ತಾಯಿತು; ರಾಜನಿಗೆ ಗೊತ್ತಾಯಿತೆಂದು ಚೆಲುವೆ ಪಾಟಲಿಗೂ ಪ್ರಣಯಿ ಪುತ್ರಕನಿಗೂ ತಿಳಿಯಿತು. ಅವರಿಬ್ಬರೂ ಆ ಪಾದುಕೆಯ ಸಹಾಯದಿಂದ ಆಕಾಶಕ್ಕೆ ಹಾರಿ ಪಾರಾದರು.

ಪಾಟಲಿಯ ಅಭೀಷ್ಟದಂತೆ ಗಂಗಾತೀರದಲ್ಲಿ ಪುತ್ರಕನು ಮಂತ್ರಬಲದಿಂದ ನಗರವನ್ನುಂಟುಮಾಡಿ ಚತುರಂಗ ಬಲಗಳನ್ನು ತಯಾರಿಸಿ ಅಲ್ಲಿಗೆ ತಾನೇ ರಾಜನಾದನು. ಅದರ ಹೆಸರು ಪಾಟಲೀಪುತ್ರವೆಂದಾಯಿತು. ಇದು ಕಥಾ ಸರಿತ್ಸಾಗರದ ಕಥೆ. ಈ ಮಾಯಾ ನಗರವೇ ಇಂದಿನ ಪಾಟಣಾ.

ಆದರೆ ಪಾಟಲಿಪುತ್ರವನ್ನು ಕೌಂಡಿನ್ಯ ಋಷಿ ಉಂಟುಮಾಡಿದನೆಂದು ಇನ್ನೊಂದು ರೂಢಕಥೆಯಿದೆ. ವಿಶ್ವಾಮಿತ್ರನ ಸೋದರಿ—ಗಾಧಿಯ ಮಗಳು, ಪಾಟಲಿ ಎಂಬಾಕೆ, ಕೌಂಡಿನ್ಯ ಋಷಿಯನ್ನು ಪ್ರಾರ್ಥಿಸಿದಾಗ ಅವನು ಪಾಟಲಿಪುತ್ರವನ್ನು ಉಂಟುಮಾಡಿದನಂತೆ.

ಇಂದು ಸುಮಾರು ೪ ಕೋಟಿ ಜನಸಂಖ್ಯೆ ಇರುವ ಬಿಹಾರ ರಾಜ್ಯದ ರಾಜಧಾನಿಯಾಗಿರುವ ಪಾಟಣಾ ನಗರವನ್ನು ೨,೪೩೬ ವರ್ಷಗಳ ಹಿಂದೆ ಮಗಧ ರಾಜ್ಯದ ರಾಜನಾದ ಅಜಾತಶತ್ರು ಕಟ್ಟಿಸಿದನೆಂದು ಇತಿಹಾಸ ಹೇಳುತ್ತದೆ. ಮೊದಲಿಗೆ ಅವನ ರಾಜಧಾನಿ ರಾಜಗೃಹದಲ್ಲಿತ್ತು. ಅದು ಬಹಳ ಒಳನಾಡಾಗಿದ್ದುದರಿಂದ ರಕ್ಷಣೆಗೆ ಹಾಗೂ ವಿಜಯಯಾತ್ರೆಗೆ ಅಷ್ಟು ಅನುಕೂಲವಾಗಿರಲಿಲ್ಲ. ಮಹತ್ವಾಕಾಂಕ್ಷಿಯಾದ ಅಜಾತಶತ್ರು ರಾಜನ ಸುನಿಧ ಮತ್ತು ವಸ್ಸಕಾರರೆಂಬ ಮಂತ್ರಿಗಳು ಈ ನಗರರಚನೆಯ ಮೇಲ್ವಿಚಾರಣೆಯನ್ನು ವಹಿಸಿದರು.

"ಭವನ್ಸ ಜರ್ನಲ್" ಇತ್ಯಾದಿ ಮೂಲಗಳಿಂದ

ಗಂಗಾ ಮತ್ತು ಸೂರ್ಯೂ ನದಿಗಳ ಸಂಗಮದಲ್ಲಿ ಪಾಟಲಿಪುತ್ರದ ರಚನೆಯ ಕಾರ್ಯವು ಇನ್ನೂ ನಡೆದಿದ್ದಾಗಲೇ ಮಹಾಪರಿನಿರ್ವಾಣಕ್ಕೆ ಮೊದಲು ಭಗವಾನ್ ಬುದ್ಧ ನಲಂದದಿಂದ ವೈಶಾಲಿಯತ್ತ ಹೊರಟು ಆ ಮಾರ್ಗದಿಂದ ಬಂದ. ಮಂತ್ರಿಗಳಿಬ್ಬರು ಬುದ್ಧನನ್ನು ಇಲ್ಲಿಗೆ ಬರಮಾಡಿಕೊಂಡು ಆತಿಥ್ಯ ಮಾಡಿದರು. ಆಗ ಬುದ್ಧ ಭವಿಷ್ಯ ನುಡಿದ. "ಈ ನಗರ ಆರ್ಯಾವರ್ತದ ವಾಣಿಜ್ಯಕೇಂದ್ರವಾಗುವುದು. ಆದರೆ ಪ್ರವಾಹ, ಬೆಂಕಿ, ಮೋಸಗಳಿಂದ ನಾಶಗೊಳಿಸಲ್ಪಡುವುದು."

ವ್ಯಾಪಾರಸಂಪತ್ತಿನ ವಿಷಯದಲ್ಲಿ ಬುದ್ಧನ ಭವಿಷ್ಯವಾಣಿ ಧಾರಾಳವಾಗಿ ಸತ್ಯವಾಯಿತು. ಪ್ರವಾಹ–ಬೆಂಕಿ–ಮೋಸಗಳ ಅನಾಹುತದ ಸಮಾಚಾರ ಏನಾಯಿತೋ ಗೊತ್ತಿಲ್ಲ. ಪಾಟಣಾದ ಸುತ್ತಮುತ್ತಲ ಭಗ್ನಾವಶೇಷಗಳ ಶೋಧನೆ ಪೂರ್ತಿಯಾದ ಮೇಲೆಯೇ ಅದಕ್ಕೆ ಸರಿಯಾದ ಉತ್ತರಸಿಗಬೇಕು.

ಆದರೆ ಹೂವಿನ ಹೆಸರು ಹೊತ್ತ ಈ ನಗರ ಭಾರತದ ಇತಿಹಾಸಸಾಗರದ ಉತ್ತಾಲ ತರಂಗಗಳ ಹಲವು ಉತ್ಥಾನ ಪತನಗಳಿಗೆ ಸಾಕ್ಷಿಯಾಗಿ ನಿಂತಿದೆ. ಭಾರತದ ಬೇರಾವ ನಗರವೂ ಇಷ್ಟು ಸುದೀರ್ಘ ಇತಿಹಾಸಕ್ಕೆ ಕೇಂದ್ರವಾಗಿರಲಿಕ್ಕಿಲ್ಲ.

ಬುದ್ಧನ ಪಾದಧೂಳಿಯಿಂದ ಆರಂಭದಲ್ಲಿಯೇ ಪಾವನವಾಗಿದ್ದ ಈ ನಗರವು ಎರಡು ಪ್ರಚಂಡ ಸಾಮ್ರಾಜ್ಯಗಳ ಕೇಂದ್ರವಾಗಿ ಮೆರೆಯಿತು. ಇಲ್ಲಿ ಬೌದ್ಧರಾದ ನಂದರನ್ನು ಹಣಿದು ಬ್ರಾಹ್ಮಣ ಚಾಣಕ್ಯ ತನ್ನ ಕೈವಾರಿಯಾದ ಚಂದ್ರಗುಪ್ತ ಮೌರ್ಯನನ್ನು ವೈದಿಕ ಧರ್ಮದ ರಕ್ಷಕನಾಗಿ ಸಿಂಹಾಸನಕ್ಕೇರಿಸಿದನು. ಚಾಣಕ್ಯನನ್ನು ಕಂಡು ಭವಿತವ್ಯ ನಕ್ಕಿರಬೇಕು. ವೈದಿಕ ಚಂದ್ರಗುಪ್ತನ ಮೊಮ್ಮಗನಾದ ಅಶೋಕನೇ ಬೌದ್ಧ ಧರ್ಮವನ್ನು ಅವಲಂಬಿಸಿ ಪಾಟಲೀಪುತ್ರವನ್ನು ಆ ಧರ್ಮದ ಮಹಾಕೇಂದ್ರವಾಗಿ ಮಾಡಿದನು. ಮುಂದೆ ಗುಪ್ತ ಸಾಮ್ರಾಜ್ಯಕ್ಕೆ ರಾಜಧಾನಿಯಾಗಿ ಪುನಃ ವೈದಿಕ ಧರ್ಮದ ಉತ್ಕರ್ಷವನ್ನು ಇದು ಕಂಡಿತು; ಮತ್ತೆ ಮುಸ್ಲಿಮರ ಬರವನ್ನೂ ಅಳಿವನ್ನೂ ಕಂಡಿತು.

ಪಾಟಲಿಪುತ್ರವನ್ನು ಚಂದ್ರಗುಪ್ತ ಮೌರ್ಯನ ಕಾಲದಲ್ಲಿ ಗ್ರೀಕ್ ರಾಯಭಾರಿಯಾಗಿದ್ದ ಮೆಗಸ್ತನೀಸನು "ಪಾಲಿಬೋತ್ರ" ಎಂದು ಕರೆದಿರುವನು. ಅದು ಭಾರತದ ರಾಜಧಾನಿ ನಗರವೆಂದು ಅವನು ಬರೆದಿದ್ದಾನೆ. ಅಲ್ಲಿ ವಾಸಿಸುವವರನ್ನು ಅವನು "ಪ್ರಾಸ್ಸೀ" ಎಂದರೆ ಪ್ರಾಚ್ಯರು ಎಂದು ಕರೆದಿದ್ದಾನೆ. ನಗರವು ೮೦ ಸ್ಟಾಡಿಯ ಉದ್ದ ಮತ್ತು ೧೫ ಸ್ಟಾಡಿಯ ಅಗಲವಿತ್ತಂತೆ. ಆರು ಎಕರೆ ವಿಶಾಲವಾದ ಮೂವತ್ತು ಮೊಳ ಆಳವಾದ ಕಂದಕವು ಅದನ್ನು ಸುತ್ತುಗಟ್ಟಿದ್ದಿತು. ನಗರದ ಕೋಟೆಗಳಿಗೆ ೬೪ ದ್ವಾರಗಳು ಮತ್ತು ೫೭೦ ಗೋಪುರಗಳಿದ್ದವು.

ನಂದರು ಪಾಟಲಿಪುತ್ರವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಮೌರ್ಯ ಚಂದ್ರಗುಪ್ತನ ಕಾಲದಲ್ಲಿ ಎಂದರೆ ಕ್ರಿ. ಪೂ. ೩೨೧ ರಲ್ಲಿ ಪಾಟಲಿಪುತ್ರವು ಉತ್ತರ ಭಾರತದ ರಾಜಧಾನಿಯಾಯಿತು. ಆಗಲೇ ಮೆಗಸ್ತನೀಸನು ಇಲ್ಲಿಗೆ ಬಂದುದು.

ಕ್ರಿ. ಪೂ. ೨೭೨ ರಲ್ಲಿ ರಾಜ್ಯವಾಳಿದ ಪ್ರಿಯದರ್ಶಿ ಅಶೋಕನ ಆಳಿಕೆಯಲ್ಲಿ ನಗರದ ವೈಭವ ಚರಮಸೀಮೆಗೇರಿತು. ಮರದ ಕಾಪು (ಕಾವಲಿನ ಗೋಪುರ)ಗಳ ಬದಲು ಕಲ್ಲಿನ ಕಾಪುಗಳನ್ನು ಅವನು ಕಟ್ಟಿಸಿದನು. ಚೈತ್ಯಾಲಯಗಳೂ ವಿಹಾರಗಳೂ ನಗರದಲ್ಲಿ ಎಲ್ಲೆಡೆಗೂ ರೂಪುಗೊಂಡವು. ಸ್ಮಾರಕಗಳು ಕೆತ್ತಲ್ಪಟ್ಟವು.

ಕುಮರಹರ ಹಳ್ಳಿಯಿಂದ ಅರ್ಧ ಮೈಲಿ ದೂರದ ಬಯಲಿನಲ್ಲಿ ಆಗಿನ ಪಾಟಲಿಪುತ್ರ ನಗರ ಇದ್ದಿತೆಂದು ಆಧುನಿಕ ಸಂಶೋಧನೆ ತೋರಿಸಿದೆ. ಭೋಟಿಪಹಾಡಿಯೆಂಬ ದಿನ್ನೆಯಿಂದ ಕುಮರಹರದ ತನಕ ಎಂದರೆ ನಾಲ್ಕು ಮೈಲಿಗಳವರೆಗೆ ಪ್ರಿಯದರ್ಶಿಯ ಅರಮನೆಯೇ ವ್ಯಾಪಿಸಿತ್ತು! ಪಾಟಣಾದ ನವಾಬರ ನಿವಾಸದ ಪಕ್ಕದಲ್ಲಿಯೇ ಒಂದು ಕೃತಕಶೈಲದ ಭಗ್ನಾವಶೇಷವಿದೆ. ಪ್ರಿಯದರ್ಶಿ ಅಶೋಕ ಅದನ್ನು ಬೌದ್ಧ ಸಂನ್ಯಾಸ ದೀಕ್ಷೆಹೊಂದಿದ ತನ್ನ ಸೋದರ

ಮಹೇಂದ್ರನ ಆಶ್ರಮವಾಸಕ್ಕಾಗಿ ಕಟ್ಟಿಸಿದ್ದನು. ಪಂಚ ಬೌದ್ಧ ಸ್ತೂಪಗಳನ್ನು ಇಲ್ಲಿ ಅಶೋಕನೇ ಕಟ್ಟಿಸಿದನು.

ಅವನ ಕಾಲದಲ್ಲಿಯೆ ಬೌದ್ಧರ ಪ್ರಸಿದ್ಧವಾದ ಮೂರನೆಯ ಸಂಗಿತಿ ಎಂದರೆ ಮಹಾಸಭೆಯು ಪಾಟಣಾದಲ್ಲಿ ಸೇರಿತು. ಬೌದ್ಧ ಆಚಾರಗಳನ್ನು ಶುದ್ಧೀಕರಿಸುವುದೇ ಇದರ ಉದ್ದೇಶವಿತ್ತು. ಯಾಕೆಂದರೆ ಆಗ ಬೌದ್ಧರಲ್ಲಿ ದುರಾಚಾರಿಗಳ ಸಂಖ್ಯೆಯೇನೂ ಕಡಿಮೆಯಿರಲಿಲ್ಲ. ಆದರೆ ಸಮಾಜದಲ್ಲಿ ಬೌದ್ಧರ ಸ್ಥಾನಮಾನ ಏರಿದ್ದಿತು. ಅಶೋಕನಿಗೆ ಬೌದ್ಧ ಧರ್ಮ ಬೋಧಿಸಿದ ಮೊಗ್ಗಲಿಪುತ್ತನಿಗೆ ಬೇಸರ ಬಂದು ಅವನು ವಿಶ್ರಾಂತನಾದ. ರಾಜಾಜ್ಞೆಯನ್ನು ಧಿಕ್ಕರಿಸಿದ ನೂರಾರು ಬೌದ್ಧ ಸಂನ್ಯಾಸಿಗಳನ್ನು ಅಶೋಕನ ಮಂತ್ರಿಯೊಬ್ಬನು ಕೊಲ್ಲಿಸಿದನು.

ಅನಂತರ ಮೊಗ್ಗಲಿಪುತ್ತ ೧,೦೦೦ ಸಂನ್ಯಾಸಿಗಳನ್ನು ಆರಿಸಿ ಬೌದ್ಧ ಆಚಾರ ತತ್ವಗಳ ಸಂಕಲನಕ್ಕೆ ನೇಮಿಸಿದ. ಒಂಭತ್ತು ತಿಂಗಳಲ್ಲಿ "ತ್ರಿಪಿಟಕ" ಮುಗಿಯಿತು. ಮೊಗ್ಗಲಿಪುತ್ತ ತಾನೇ "ಅಭಿಧಮ್ಮ" ಅಥವಾ "ಕಥಾವತ್ಥು" ವನ್ನು ಸಂಕಲಿಸಿದ.

ಅಶೋಕನ ನಂತರದ ಗುಪ್ತ ರಾಜ್ಯಕ್ಕೂ ಪಾಟಲಿಪುತ್ರವೇ ರಾಜಧಾನಿಯಾಗಿ ಉಳಿಯಿತು. ಕ್ರಿ. ಶ. ೩೨೯ ಮಾರ್ಚ ೮ ರಂದು ಒಂದನೆಯ ಚಂದ್ರಗುಪ್ತನ ಅಭಿಷೇಕ ಇದೇ ನಗರದಲ್ಲಿ ಆಯಿತು. ಸಮುದ್ರಗುಪ್ತ ತಂದೆಯ ಸಾಮ್ರಾಜ್ಯವನ್ನು ಬೆಳೆಸಿದ. ವೈದಿಕ ಧರ್ಮಕ್ಕೆ ಮತ್ತೆ ಉಚ್ಚ್ರಾಯ ಬಂತು. ಎರಡನೆಯ ಚಂದ್ರಗುಪ್ತನ ಕಾಲದಲ್ಲಿ ಚೀನದಿಂದ ಫಾಹಿಯಾನ ಬಂದ; ಮೂರು ವರ್ಷಗಳ ಕಾಲ ಇಲ್ಲಿದ್ದು ಸಂಸ್ಕೃತ ಓದಿದ. ೬೩೭ ರಲ್ಲಿ ಹ್ಯುಯೆನ್ ತ್ಸಂಗ್ ಪಾಟಲಿಪುರವನ್ನು ಸಂದರ್ಶಿಸಿದ್ದ. ಗ್ರೀಸರ ಪಾಲಿಗೆ ಇದು "ಕುಸುಮಾಪೊಲಿಸ" ಆಯಿತು.

ಕನೋಜದ ರಾಜ, ಕವಿಚಕ್ರವರ್ತಿ ಹರ್ಷವರ್ಧನನ ಕಾಲಕ್ಕೆ ಮಗಧವು ಅವನ ಸಾಮ್ರಾಜ್ಯದ ಒಂದು ಭಾಗವಾಗಿದ್ದಿತು.

ಬುದ್ಧನ ಸಮಕಾಲೀನನಾದ ಜೈನ ಧರ್ಮ ಸ್ಥಾಪಕ ಮಹಾವೀರ ವರ್ಧಮಾನ ಕೂಡ ಇಲ್ಲಿ ತನ್ನ ತತ್ವಗಳನ್ನು ಸುಮಾರು ೪೦ ವರ್ಷಗಳ ಕಾಲ ಪ್ರಚಾರ ಮಾಡಿದ್ದ.

ಹರ್ಷನಾಳಿಕೆಯ ನಂತರ ಪಾಲ ದೊರೆಗಳು ಬಂದರು. ಆಗ ಎಂದರೆ ಕ್ರಿ. ಶ. ೮೦೦ ರಿಂದ ೧,೨೦೦ ತನಕ ಮಗಧಕ್ಕೆ ಬಿಹಾರ ನಗರ ರಾಜಧಾನಿಯಾಯಿತು. ಮುಸ್ಲಿಮರ ವಿಜಯವಾಗುವ ತನಕ ಇದು ರಾಜಕೀಯವಲ್ಲದಿದ್ದರೂ ಬುದ್ಧ ಧರ್ಮದ ಕೇಂದ್ರಸ್ಥಳವಾಗಿಯೆ ಇತ್ತು. ೧೬ನೇ ಶತಮಾನದಲ್ಲಿ ನವಾಬ ಶೇರಶಾಹನು ಪಾಟಣಾವನ್ನು ರಾಜಧಾನಿಯನ್ನಾಗಿ ಮತ್ತೆ ಆರಿಸಿದ. ೧೭೬೩ ರ ಬಂಡಾಯದಲ್ಲಿ ಬ್ರಿಟಿಶರಿಂದ "ಪಾಟಣ ನರಹತ್ಯೆ" ಯಾದ ನಂತರ ಬ್ರಿಟಿಶರೇ ದೊರೆಗಳಾದರು. ಆಗ ಪಾಟಣಾ ನಗರವನ್ನೇ ಕೊಳ್ಳೆಹೊಡೆಯಲಾಯಿತು.

ಬೌದ್ಧರಿಗೆ, ಜೈನರಿಗೆ ಇದು ಪವಿತ್ರ ಸ್ಥಳವಾದಂತೆಯೇ ಸೀಖರ ಗುರುವೂ ಹಿಂದಿಯ ಕವಿಯೂ ಆದ ಗುರು ಗೋವಿಂದಸಿಂಗ ಇಲ್ಲಿ ಕ್ರಿ. ಶ. ೧೬೬೦ ರಲ್ಲಿ ಜನ್ಮವೆತ್ತಿದ್ದರಿಂದ ಅವರಿಗೂ ಇದು ಪವಿತ್ರಸ್ಥಳವೆನಿಸಿತು. ಭಾರತೀಯ ಪುರಾತನ ಖಗೋಳಜ್ಞ ಆರ್ಯಭಟ್ಟನ ಹುಟ್ಟೂರೂ ಇದುವೆ ಪಾಟಣಾ. ಪಾಣಿನಿ ಸೂತ್ರಗಳಿಗೆ ವೃತ್ತಿ ಬರೆದ ಕಾತ್ಯಾಯನ ವರರುಚಿ, ಅರ್ಥಶಾಸ್ತ್ರ ಚಾಣಕ್ಯ ವಿಷ್ಣುಗುಪ್ತ—ಈ ಮಹಾಪುರುಷರೆಲ್ಲ ಇಲ್ಲಿ ಬೆಳಗಿದರು.

ಪಾಟಲಿಪುತ್ರವು ಆರ್ಯಾವರ್ತದ ವಾಣಿಜ್ಯ ಕೇಂದ್ರವಾಗುವುದೆಂಬ ಬುದ್ಧನ ಭವಿಷ್ಯವೂ ಸುಳ್ಳಾಗಿಲ್ಲವೆಂದು ದಂಡಿಯ ವರ್ಣನೆಯಿಂದ ತಿಳಿಯುತ್ತದೆ. "ಶಶ್ವದಗಣ್ಯಪಣ್ಯವಿಸ್ತಾರಿತ ಮಣಿಗಣಾದಿವಸ್ತುಜಾತವ್ಯಾಖ್ಯಾತರತ್ನಾಕರ ಮಾಹಾತ್ಮ್ಯ"ವುಳ್ಳದ್ದೆಂದು ಅವನು ಪಾಟಲಿಪುತ್ರವನ್ನು ವರ್ಣಿಸಿರುವನು.

**ಕೆಲವರು ಬಳಲಿಕೆಯಿಲ್ಲದೆ ನಿರಂತರವಾಗಿ ದುಡಿಯಬಲ್ಲರು. ನಿಮಗೂ ಹಾಗಾಗಬೇಕಿದ್ದರೆ ಇಲ್ಲಿವೆ ಕೆಲ ಸೂಚನೆಗಳು**

# ಬಳಲಿಕೆ ನೀಗಿಸುವುದು ಹೇಗೆ?

ಆಯಾಸಕ್ಕೂ ಕೆಲಸಕ್ಕೂ ಏನೇನೂ ಸಂಬಂಧವಿಲ್ಲ; ಆಯಾಸವೆಂದರೆ ಕೆಲಸ ಮಾಡುವ ಶಕ್ತಿ ಕುಂದುವುದೆಂದೇನೂ ಅಲ್ಲ. ಹೀಗೆಂದರೆ ಕೆಲವರಿಗೆ ಆಶ್ಚರ್ಯವಾಗಬಹುದು. ಆದರೆ ಇದು ನಿಜ. ಒಬ್ಬ ಕೆಲಸಗಾರನಿಗೆ ರಾತ್ರಿ ನಿದ್ದೆ ಮತ್ತು ಉತ್ತಮ ಆಹಾರ ಇವಿದ್ದರೆ ದೈಹಿಕ ಶಕ್ತಿಯು ಯಾವ ಕೆಲಸದಿಂದಲೂ ಕಡಿಮೆಯಾಗುವುದಿಲ್ಲ.

ಹಾಗಿದ್ದರೆ ಬಳಲಿಕೆ ಎಂದರೇನು?

ಮಾನಸಿಕ ಆಲಸ್ಯ ಹೆಚ್ಚಿದಾಗ ಮನುಷ್ಯನಿಗೆ ಕೆಲಸ ಮಾಡುವುದು ಕಷ್ಟವಾಗುತ್ತದೆ. ಮತ್ತು ಅವನಲ್ಲಿ ಕೆಲಸ ಮಾಡಲಾರೆನೆಂಬ ಭಾವನೆ ಹೆಚ್ಚಾಗುತ್ತದೆ. ಇದರಿಂದ ಆತನ ಕೆಲಸ ಮಾಡುವ ಶಕ್ತಿ ಕಳೆದುಹೋಯಿತೆಂದು ತಿಳಿಯಲಾಗುವುದಿಲ್ಲ. ಆದರೆ ಕೆಲಸ ಮಾಡಬೇಕೆಂಬ ಅವನ ಇಚ್ಛೆಯು ಅಳಿದು ಹೋಗುತ್ತದೆ.

ನಿವೃತ್ತಿ ಭಾವನೆಗಳು—ಎಂದರೆ ಹೆದರಿಕೆ, ನಿರಾಶೆ, ಸುಲಭೋದ್ವೇಗ ಮುಂತಾದವುಗಳು ಆಲಸ್ಯದ ಮೂಲಕ ದಣಿವನ್ನುಂಟುಮಾಡುತ್ತವೆ. ಇಂದಿನ ದುಡಿಮೆಯ ವಾತಾವರಣವೇ ಈ ದಣಿವಿಗೆ ಹೆಚ್ಚಿನ ಹೊಣೆಯಾಗಿದೆ. ಏಕೆಂದರೆ ದುಡಿವವನಿಗೆ ಅವನು ಮಾಡುವ ಕೆಲಸದ ಬಗ್ಗೆ ಯಾವ ಅಧಿಕಾರವೂ ಇರುವುದಿಲ್ಲ. ಅದರಲ್ಲಿ ಏಕತಾನತೆ ತುಂಬಿರುತ್ತದೆ. ಸಾಮೂಹಿಕ ಉತ್ಪಾದನ ವಿಧಾನವು ಕೆಲಸಗಾರನನ್ನು ಕಃಪದಾರ್ಥವಾಗಿಸಿ ಅವನು




**ಸೈಕಾಲಜಿ ಮೆಗಜೀನಿನ ಆಧಾರದಿಂದ**

ನೋಡದೆ ಇರುವ ಒಬ್ಬನ ಅಧಿಕಾರದ ಕೆಳಗೆ ದುಡಿವಂತೆ ಮಾಡಿದೆ.

ಹಾಗಿದ್ದರೂ ನಿಜವಾಗಿ ಕೆಲಸವು ಒಬ್ಬನನ್ನು ದಣಿವುಗೊಳಿಸುವುದಿಲ್ಲ. ಕೆಲಸದ ಸುತ್ತಲ ವಾತಾವರಣವೇ ಆತನಿಗೆ ಮೆಚ್ಚುಗೆಯಾಗದಿರ ಬಹುದು. ಹಾಗೂ ಎಷ್ಟೋ ಜನರು ತನಗಿಂತ ಹೆಚ್ಚು ಸುಖಿಗಳಾಗಿರುವಂತೆ ಅನಿಸಬಹುದು. ಇದೇ ಬೇಸರಿಕೆಯನ್ನು ತರುವ ಸಂಗತಿ.

ಇದಕ್ಕೆ ಸುಮಾರು ಐದು ಕಾರಣಗಳನ್ನು ಕೊಡಬಹುದು. (೧) ಕೆಲಸದಲ್ಲಿ ವೈವಿಧ್ಯ ಇಲ್ಲದಿರುವುದು, (೨) ಕೆಲಸಗಾರನು ಮೇಲಧಿ ಕಾರಿಯನ್ನು ಮೆಚ್ಚದಿರುವುದು, (೩) ಸಹೋ ದ್ಯೋಗಿಗಳೊಡನೆ ಹೊಂದಿಕೆ ಇರದಿರುವುದು, (೪) ಹಣಕಾಸಿನ ಪರಿಸ್ಥಿತಿ ಹಾಗೂ (೫) ಮನೆಯ ಅಡಚಣೆ.

ಇವೆಲ್ಲವುಗಳನ್ನು ಒಂದು ಮಾಡಿ ಹೇಳುವು ದಾದರೆ ವ್ಯಕ್ತಿಯ ಆಂತರಿಕ ಸಮಸ್ಯೆಯೇ ಎಲ್ಲ ಬಳಲಿಕೆಗೂ ಕಾರಣವಾಗಿರುತ್ತದೆ. ಈ ವಿಷಯ ವನ್ನು ಸ್ಪಷ್ಟವಾಗಿ ತಿಳಿದುಕೊಂಡರೆ ಅಷ್ಟು ಬೇಗ ನೆಮ್ಮದಿ ಉಂಟಾಗುವುದು. ಹಣಕಾಸಿನ ಅಡಚ ಣೆಗಳು, ಮತ್ತು ಇತರ ಅನೇಕ ಆಳವಾದ ಆಂತರಿಕ ಸಮಸ್ಯೆಗಳು ವ್ಯಕ್ತಿಯ ಚಿತ್ತದ ಮೇಲೆ ತಮ್ಮ ಪ್ರಭಾವವನ್ನು ಬೀರಲು ಸಮರ್ಥವಾಗು ವವು.

ಎಷ್ಟೋ ವೇಳೆ ಅಪ್ರಿಯ ವಿಚಾರಗಳನ್ನು ಮನಸಿನಲ್ಲಿಯೇ ಹತ್ತಿಕ್ಕುವುದರಿಂದ ವ್ಯಕ್ತಿಯ ಮಾನಸಿಕ ಬಳಲಿಕೆ ಹೆಚ್ಚಬಹುದು. ಇದರಿಂದ ಕೆಲಸದಿಂದ ನಾನು ಬಳಲಿದೆನೆನ್ನುವುದಕ್ಕಿಂತ ನಾನು ಕೆಲಸ ಮಾಡಬಯಸುವುದಿಲ್ಲ; ಅಥವಾ ನನಗೆ ಮೇಲಿನ ಅಧಿಕಾರಿಯನ್ನು ಕಂಡರಾಗುವು ದಿಲ್ಲ ಎನ್ನುವುದು ಸರಿಯಾದೀತು.

ಹಲವು ಬಾರಿ ತಾನು ಇನ್ನೊಬ್ಬನ ಕೈಕೆಳಗಿನ ನೌಕರನೆಂಬ ಭಾವನೆಯಿಂದಲೇ ಅತೃಪ್ತಿ ಯುಂಟಾಗಿ ಬಳಲಿಕೆಯುಂಟಾಗುತ್ತದೆ.

ಹೀಗಾದ ಪ್ರತಿಯೊಬ್ಬನೂ ಆತ್ಮವಿಶ್ಲೇಷಣೆ ಮಾಡಿ, ನಿಜವಾದ ತೊಡಕಿನ ಕಾರಣವೇನೆಂದು ಕಂಡುಹಿಡಿಯಬೇಕು; ಮತ್ತು ಅದನ್ನು ಸರಿ ಪಡಿಸಿ ಮುಂದೆ ಹಾಗಾಗದಂತೆ ತನ್ನ ಭಾವನೆ ಗಳನ್ನು ಮತ್ತು ಅಭ್ಯಾಸವನ್ನು ಹಿಡಿತದಲ್ಲಿಟ್ಟು ಕೊಳ್ಳಲು ಯತ್ನಿಸಬೇಕು. ಎಂದರೆ ಜೀವನದ ಮತ್ತು ವೃತ್ತಿಯ ಸುತ್ತ ಇರುವ ಸುಖದುಃಖ ಗಳತ್ತ ವಿಶಾಲದೃಷ್ಟಿಯಿಂದ ನೋಡಿ ಬಗೆಹರಿ ಸುವ ಅಭ್ಯಾಸವನ್ನು ಬೆಳೆಸಿಕೊಳ್ಳಬೇಕು.

ತನ್ನ ಶಕ್ತಿ ಮತ್ತು ಸಹನೆಯ ಬಗ್ಗೆ ವಿಶ್ವಾಸ ವಿರುವುದು ಈ ವಿಷಯದಲ್ಲಿ ಅತಿ ಮುಖ್ಯ ವಾದುದು. ಯಾವಾಗಲೂ ಜೀವನದಲ್ಲಿ ಬರುವ ಸಣ್ಣಪುಟ್ಟ ಸಂಕಷ್ಟಗಳಿಗಾಗಿ ನಿರುತ್ಸಾಹ ನಿರಾಶೆಗಳನ್ನು ತಳೆಯಬಾರದು.

ದೈನಿಕ ಕೆಲಸವು ಏಕತಾನದ್ದಾಗಿರುವಾಗ ಎಂದಿಗೂ ತನ್ನ ಉಳಿದ ಸಮಯವನ್ನು ವೃಥಾ ಕಳೆಯಬಾರದು. ತನಗೆ ನಿಜವಾಗಿ ಯಾವ ವಿಷಯದಲ್ಲಿ ಅಭಿರುಚಿಯಿದೆ ಎಂಬುದನ್ನು ಗೊತ್ತುಮಾಡಿಕೊಂಡು ಆ ವೇಳೆಯನ್ನು ಅದಕ್ಕೆ ಉಪಯೋಗಿಸುವುದರಿಂದ ಒಂದು ಮಹಾ ಸಾಧನೆಯನ್ನೇ ಮಾಡಿದಂತಾಗುವುದು.

ಕೆಲಸಗಳನ್ನು ಬದಲಾಯಿಸುವುದರಿಂದ ವ್ಯಕ್ತಿಗೆ ಹೊಸ ಬಲ ಮತ್ತು ಹುರುಪು ತಾನಾ ಗಿಯೇ ಬರುತ್ತದೆ.

ಒಂದು ಕೆಲಸದಲ್ಲಿ ಬಳಲಿಕೆ, ಆಲಸ್ಯ ಉಂಟಾ ದಾಗ ವ್ಯಕ್ತಿಯು ತನ್ನ ಮನಸ್ಸಿನ ಯಾವ ಮೂಲೆಯಲ್ಲಿ ಕೃತಿಯ ಆಸಕ್ತಿ ಉಳಿದಿದೆ ಎಂಬು ದನ್ನು ಗುರುತಿಸಿಕೊಳ್ಳಬೇಕು ಮತ್ತು ಅದಕ್ಕೆ ತಕ್ಕಂತಹ ಕೆಲಸಗಳನ್ನು ಆರಿಸಿಕೊಳ್ಳಬೇಕು.

ಯಾವುದಾದರೊಂದು ಕೆಲಸದಲ್ಲಿ ಕೌಶಲ ಕಡಿಮೆಯಾಗಿದ್ದರೆ ಆ ವ್ಯಕ್ತಿಗೆ ಇನ್ನೊಂದು ವಿಷಯದಲ್ಲಿ ಹೆಚ್ಚಿನ ಶಕ್ತಿ ಇದ್ದೇ ತೀರುವುದು. ಒಂದು ಕ್ಷೇತ್ರದಲ್ಲಿ ದಕ್ಷತೆ ಮತ್ತು ಯಶಸ್ಸು ಇಲ್ಲ ದಿರುವುದು ಇನ್ನೊಂದು ಕ್ಷೇತ್ರದಲ್ಲಿ ಆ ವ್ಯಕ್ತಿಯು ಕೆಲಸ ಮಾಡಲಾರನೆಂಬುದಕ್ಕೆ ಸಾಧಕವಾಗಲಾ ರದು. ಎಷ್ಟೋ ವೇಳೆ ಯಾವುದಕ್ಕೂ ಯೋಗ್ಯ ವಲ್ಲದ್ದು ಅನಿರೀಕ್ಷಿತವಾಗಿ ಹೆಚ್ಚಿನ ಉಪಯೋಗ ವನ್ನು ಒದಗಿಸಿದೆ.

ತನ್ನ ಉಪಯೋಗಕ್ಕಾಗಿಯಾಗಲಿ ಇತರರ ಉಪಯೋಗಕ್ಕಾಗಲಿ ಶಕ್ತಿಯನ್ನು ಬಳಸಲು ಕಲಿಯುವುದು ಅಗತ್ಯವಾಗಿದೆ. ವ್ಯಕ್ತಿಯು ತನ್ನ ಅವಿಚ್ಛಿನ್ನ ಸಹಜಶಕ್ತಿಯನ್ನು ವಿಕಾಸಗೊಳಿಸಲು ಕಲಿತಂತೆ ಅವನಲ್ಲಿ ಹೊಸ ಶಕ್ತಿಯೇ ಸಂಚಾರ ವಾಗುವುದು. "ಶಕ್ತಿವಂತನು ಜಗತ್ತನ್ನು ಪಡೆಯುವನು" ಎಂಬುದೊಂದು ನುಡಿಯಿದೆ. ಅದರಂತೆಯೇ ತಮ್ಮ ಬೆಲೆಯನ್ನೂ ಕೆಲಸವನ್ನೂ ಸರಿಯಾಗಿ ಬಲ್ಲವರು ಜಗತ್ತನ್ನೇ ಸ್ವಾಧೀನಪಡಿಸಿಕೊಳ್ಳಬಲ್ಲರೆಂದೂ ಹೇಳಲಾಗುತ್ತದೆ. ಮೊದಲ ಕೆಲಸದಲ್ಲಿ ನಷ್ಟವಾದರೆ ಲಾಭದ ಕೆಲಸವಾವುದೆಂದು ಕಂಡುಹಿಡಿವುದರಲ್ಲಿ ಜಾಣತನವಿದೆ. ಹೆಚ್ಚು ರುಚಿಸುವ, ತಿಳಿಯುವ ಒಂದು ಹೊಸ ಕೆಲಸವನ್ನಾರಿಸಿದರೆ ಅಲ್ಲಿ ಒಳ್ಳೆಯ ಭವಿಷ್ಯ ಇರುವುದು ಕಂಡುಬರುವುದು.

ಶಕ್ತಿಯೆಂಬುದೇನೂ ಯೌವನದ ಸೊತ್ತಾಗಲಿ, ಅಧಿಕಾರವಾಗಲೀ ಅಲ್ಲ. ಮುಪ್ಪಿನ ಕಾಲದಲ್ಲಿ ಕೂಡ ಶಕ್ತಿಯು ಅವಿಚ್ಛಿನ್ನವಾಗಿರಬಲ್ಲದೆಂದು ಇತಿಹಾಸವು ಹಲವಾರು ಉದಾಹರಣೆಗಳನ್ನು ಕೊಟ್ಟಿದೆ. ಬರ್ಟ್ರಾಂಡ ರಸ್ಸೆಲ್, ಚರ್ಚಿಲ್, ವಿಶ್ವೇಶ್ವರಯ್ಯ ಮೊದಲಾದವರು ಇದಕ್ಕೆ ನಿದರ್ಶನವಾಗಿದ್ದಾರೆ.

ಅದರಿಂದ ಮೊದಲಿಗೆ ದೃಷ್ಟಿಕೋನವನ್ನು ಬದಲಾಯಿಸುವುದು ಅಗತ್ಯ. ವಿರೋಧ ಭಾವನೆಗಳ ಬದಲಾಗಿ ಅನುಕೂಲ ಭಾವನೆಗಳನ್ನು ತಳೆಯುವುದೇ ಅನಾಯಾಸವಾಗಿರಲು ಉಪಾಯ.

ಜೀವನದಲ್ಲಿ ಹೊಸ ಹಿತದರ್ಶನವನ್ನು ಕಾಣುವುದು ಹಾಗೂ ಕೆಲಸದಲ್ಲಿ ಅಭಿರುಚಿ ಹೊಂದುವುದು ಮಾನಸಿಕ ಸ್ವಾಸ್ಥ್ಯಕ್ಕೆ ಅವಶ್ಯ ವಿಷಯವಾಗಿದೆ. ಒಂದೇ ರೀತಿಯ ಸಾಂಪ್ರದಾಯಿಕವಾದ ಕೆಲಸದಲ್ಲಿಯೂ ವೈವಿಧ್ಯವನ್ನು ಪತ್ತೆಹಚ್ಚುವುದದಿಂದ ಹೊಸ ಅವಕಾಶಗಳ ಬಾಗಿಲ ತೆರೆಯುವುದು.

ಕಷ್ಟಗಳು ಬಂದರೆ ಎಂದೂ ಜಾರಿಕೊಳ್ಳಬಾರದು. ಏಕೆಂದರೆ ಅವನ್ನು ನಿವಾರಿಸಬೇಕಾಗಿದೆ. ಅದರಂತೆಯೇ ಕೆಲಸದಿಂದಲೂ ಹಿಂದೆಗೆಯಬಾರದು; ಅವು ಮುಗಿಯಬೇಕಾಗಿವೆ. ಕುಳಿತಲ್ಲಿಗೆ ಯಶಸ್ಸು ಬರದು; ಕೈಗೆ ದೊರಕಿದ ಕೆಲಸ ಮಾಡುವುದರಿಂದ ಮತ್ತು ಕಲಿಯುವುದರಿಂದ ಗೆಲವುಂಟಾಗಿಯೇ ಆಗುವುದು.

ಆದರೆ ಒಂದು ವಿಷಯ ಸದಾ ನೆನಪಿನಲ್ಲಿರಬೇಕು. ಅದೆಂದರೆ, ವೃಥಾಕಾಲಹರಣ ಮತ್ತು ಅನಿಶ್ಚಿತತೆ ಇವು ಜೀವನದ ಆದ್ಯಂತವೂ ಬಳಲಿಕೆಯನ್ನು ತರುತ್ತವೆ.

ಯಾವುದಾದರೂ ಒಂದೇ ಕೆಲಸ ಮಾಡಿ ಬಳಲಿಕೆಯಾದರೆ ಸ್ವಲ್ಪಕಾಲ ಗಮನವನ್ನು ಬೇರೆ ಕಡೆಗೆ ಹರಿಸಿದರಾಯಿತು. ಕೆಲಸಗಳನ್ನು ಬದಲಾಯಿಸುವುದರಿಂದ ಮನಸ್ಸಿಗೆ ವಿಶ್ರಾಂತಿಯು ಅವಶ್ಯವಾಗಿ ದೊರೆಯುವುದು.

ವಿವಿಧ ಕಾರ್ಯಗಳನ್ನು ಮಾಡುವುದರಿಂದ ಜೀವನದಲ್ಲಿ ಸುಖವು ದೊರೆಯುತ್ತದೆ. ಮಾಡುವುದು, ಪಡೆಯುವುದು, ಸಹಕರಿಸುವುದು, ಕಲಿಯುವುದು, ಕಲಿಸುವುದು, ಆಡುವುದು ಎಲ್ಲವೂ ಸಂತೋಷ ಸಮಾಧಾನಗಳನ್ನು ಕೊಡಬಲ್ಲವು.

ವಿಚಾರ ಮತ್ತು ದುಡಿಮೆ ಜೀವನಾಂತ್ಯದವರೆಗೂ ಬರತಕ್ಕವುಗಳಾಗಿವೆ. ಇದ್ದುದರಲ್ಲಿ ತೃಪ್ತಿಯಿಲ್ಲವಾದರೆ ಅರ್ಧರಾಜ್ಯ ದೊರೆತರೂ ತೃಪ್ತಿ ದೊರೆಯುವುದು ಸಾಧ್ಯವಲ್ಲ.

ನಮ್ಮ ಹತ್ತಿರ ಏನಿದೆ, ನಮಗೇನು ಸಿಗುತ್ತದೆ ಎಂಬುದಲ್ಲಿ ಸಂತೋಷವಿರುವುದಿಲ್ಲ; ಆದರೆ ನಾವೇನು ಮಾಡುತ್ತೇವೆ, ಕೊಡುತ್ತೇವೆ, ಇದರಲ್ಲಿ ಆನಂದವು ಇರುವುದು. ಆನಂದವು ಹಣದಲ್ಲಿಲ್ಲ, ಆತ್ಮದಲ್ಲಿದೆ.

---

**ಸಂಪತ್ತನ್ನು ಉತ್ಪಾದಿಸದೆ ಅದನ್ನು ಅನುಭವಿಸುವುದು ಎಷ್ಟು ಅಧರ್ಮವೋ ಅಷ್ಟೇ ಸುಖವನ್ನು ಉತ್ಪಾದಿಸದೆ ಅದನ್ನು ಅನುಭವಿಸುವುದೂ ಅಧರ್ಮ.**

—ಬರ್ನಾರ್ಡ ಶಾ

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿ ಕೊಡಲಾಗುವದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥಗಳನ್ನು ವಿವರಿಸಿದೆ.

೧. ಅಘಟಿತ
(ಅ) ಸಂಭವಿಸದ (ಆ) ವಿಶಿಷ್ಟ (ಇ) ನಡೆದು ಹೋದಂಥ (ಈ) ತಿಕ್ಕಾಟವಿಲ್ಲದ.

೨. ಅನಾಯಾಸ
(ಅ) ಸುಲಭದ (ಆ) ಅಗ್ಗವಾದ (ಇ) ಬುದ್ಧಿಪೂರ್ವಕ (ಈ) ಒಂದು ಹಣ್ಣು.

೩. ಒಗತನ
(ಅ) ಒಗೆಯುವಿಕೆ (ಆ) ವಿರೋಧ (ಇ) ಜೀಗತನ (ಈ) ಗಂಡಹೆಂಡಿರ ಅನ್ಯೋನ್ಯ ಬಾಳುವೆ.

೪. ರವ
(ಅ) ಭೀಕರ (ಆ) ಶಬ್ದ (ಇ) ಗುಪ್ತ (ಈ) ಒಂದು ನರಕ.

೫. ಪ್ರಸಾಧನ
(ಅ) ಅನುಗ್ರಹ (ಆ) ಸಂಪತ್ತು (ಇ) ಅಧಿಕ (ಈ) ಅಲಂಕಾರ.

೬. ಸಂಘಟನೆ
(ಅ) ಹೊಂದಿಸುವಿಕೆ (ಆ) ಘರ್ಷಣೆ (ಇ) ಸಿದ್ಧತೆ (ಈ) ರಾಜ್ಯದ ಮೂಲ ಶಾಸನಗಳು.

೭. ಮರ್ತ್ಯ
(ಅ) ಸಾವುಳ್ಳ (ಆ) ದೇವತೆ (ಇ) ಜಜ್ಜುವುದು (ಈ) ಹೆಂಡ.

೮. ವಿಧೇಯಕ
(ಅ) ಪಾಲಕ (ಆ) ಸೇವಕ (ಇ) ಕಾಯದೆಯ ಕರಡು ರೂಪ (ಈ) ಜಯಶಾಲಿ.

೯. ವಿಧಾಯಕ
(ಅ) ಬೀಳ್ಕೊಡುವುದು (ಆ) ವಿನ್ಯಾಸ (ಇ) ರಚನಾತ್ಮಕ (ಈ) ಗಣೇಶ.

೧೦. ನಿಧಾನ
(ಅ) ಉಪಾಯ (ಆ) ಹುಗಿದಿಟ್ಟ (ಇ) ಮೆಲ್ಲಗೆ (ಈ) ಅವಸರ.

೧೧. ಕರೆಗಾಳಿ
(ಅ) ಕಪ್ಪು ದೇವತೆ (ಆ) ಬಿರುಗಾಳಿ (ಇ) ಒಂದು ಗಿಡ (ಈ) ಭೂಮಿಯಿಂದ ಸಮುದ್ರದತ್ತ ಬೀಸುವ ಗಾಳಿ.

೧೨. ಪೂರ್ವಭಾವಿ
(ಅ) ಪೂರ್ವದಿಕ್ಕಿನ ಬಾವಿ (ಆ) ಮೊದಲು ಆಗತಕ್ಕ (ಇ) ಮೊದಲನೇ ಅಕ್ಕನ ಗಂಡ (ಈ) ಹಳೇ ಕಾಲದ ವಿಚಾರ.

# ‘ಶಬ್ದ ಭಾಂಡಾರ’ದ ಸರಿಯಾದ ಅರ್ಥಗಳು

೧. **ಅಘಟಿತ** (ಅ) ಸಂಭವಿಸದ; ಹಿಂದೆಂದೂ ನಡೆಯದ; (ಅದ್ದರಿಂದ) ಅದ್ಭುತವಾದ. ಉದಾ: ಅಘಟಿತ ಘಟನೆಯಿದು. (ಸಂ) ಅ—ಇಲ್ಲ; ಘಟಿತ–ನಡೆದ, ಕೂಡಿ ಬಂದ.

೨. **ಅನಾಯಾಸ** (ಅ) ಸುಲಭ; ಕಷ್ಟ ರಹಿತ; ಸರಳ. ಉದಾ: ಅನಾಯಾಸವಾಗಿ ಆಗುವ ಕೆಲಸ. (ಸಂ). ಅನ್–ಇಲ್ಲ, ಆಯಾಸ–ಕಷ್ಟ.

೩. **ಒಗತನ** (ಈ) ಗಂಡಹೆಂಡಿರ ಅನ್ಯೋನ್ಯ ಬಾಳುವೆ; ಒಮ್ಮತದಿಂದ ಒಡನಾಡುವದು (ಕನ್ನಡ) “ಒಗ್” ನಿಂದ ಉಂಟಾದ ಶಬ್ದ.

೪. **ರವ** (ಅ) ಶಬ್ದ, ಸಪ್ಪಳ; ಕೂಗು; ಗರ್ಜನೆ; ವಿಶೇಷವಾಗಿ ಗಡುಸು ದನಿ. (ಸಂಸ್ಕೃತ).

೫. **ಪ್ರಸಾಧನ** (ಈ) ಅಲಂಕಾರ; ಭೂಷಣ; ಅಲಂಕರಿಸುವಿಕೆ; ಅಲಂಕಾರ ದ್ರವ್ಯ; ಸಿಂಗರಿಸಿಕೊಳ್ಳುವ ಗಂಧ, ತೈಲ, ವಸ್ತ್ರಾದಿ ಸಾಧನಗಳು. (ಸಂ.) ಪ್ರ—ವಿಶೇಷವೆನಿಸುವ, ಸಾಧನ-ಸಲಕರಣೆ.

೬. **ಸಂಘಟನೆ** (ಅ) ಹೊಂದಿಸುವಿಕೆ; (ವಿಶೇಷವಾಗಿ) ಜನರನ್ನು (ಅಥವಾ ವಿಷಯಗಳನ್ನು) ವ್ಯವಸ್ಥಿತರೀತಿಯಲ್ಲಿ ಕಟ್ಟುಪಾಡು ಮಾಡುವುದು. ಉದಾ—ಕಮ್ಯುನಿಸ್ಟ್ ಪಕ್ಷದ ಸಂಘಟನೆ ಬಿಗಿಯಾಗಿದೆ. (ಸಂ.) ಸಂ—ಸರಿಯಾಗಿ ಘಟನಾ ಜೋಡಣೆ.

೭. **ಮರ್ತ್ಯ** (ಅ) ಸಾವುಳ್ಳ; (ವಿಶೇಷವಾಗಿ) ಸಾವಿಗೊಳಪಡುವಂಥ ಮನುಷ್ಯರಿಗೆ ಸಂಬಂಧಿಸಿದ. ಮರ್ತ್ಯಲೋಕ ಅಂದರೆ ಸಾಯುವ ಸ್ವಭಾವದವರು ವಾಸಿಸುವ ಭೂಲೋಕ. (ಸಂ) ಮೃತಿ–ಸಾವು ಎಂಬ ಅರ್ಥದ ಶಬ್ದದಿಂದ ಬಂದುದು.

೮. **ವಿಧೇಯಕ** (ಇ) ಕಾಯದೆಯ ಕರಡು; ಮಸೂದೆ; ಕಾಯದೆಯು ಪಾಸಾಗುವ ಮೊದಲು ಇರುವ ಅದರ ರೂಪ. ಇಂಗ್ಲೀಷಿನ “ಬಿಲ್”. (ಸಂ) ವಿ–ಧಾ ಅಂದರೆ ಅಪ್ಪಣೆ ಕೊಡು ಎಂಬ ಧಾತುವಿನಿಂದ.

೯. **ವಿಧಾಯಕ** (ಇ) ರಚನಾತ್ಮಕ; (ಹಾಳು ಮಾಡುವುದರ ವಿರುದ್ಧ) ಕಟ್ಟುವಂಥ; ಆಜ್ಞಾತ್ಮಕವಾದ. ಉದಾ. ಟೀಕೆಗಳು ವಿಧಾಯಕವಾಗಿರಬೇಕು (ಅಂದರೆ ನಿಂದಿಸುವ ಉದ್ದೇಶದವಾಗಿರದೆ ಸುಧಾರಿಸುವ ಉದ್ದೇಶದವಿರಬೇಕು). (ಸಂ.) ವಿ–ಧಾ–ಸರಿಯಾಗಿ ಮಾಡು.

೧೦. **ನಿಧಾನ** (ಅ) ಹುಗಿದಿಟ್ಟ ಧನ; ನಿಧಿ. ಉದಾ. ನೆಲದ ಮರೆಯ ನಿಧಾನ. (ಸಂ).

೧೧. **ಕರೆಗಾಳಿ** (ಈ) ಭೂಮಿಯಿಂದ ಸಮುದ್ರದ ಕಡೆ ಬೀಸುವ ಗಾಳಿ. (ಕನ್ನಡ) ಕರೆ—ಸಮುದ್ರ ತೀರ + ಗಾಳಿ.

೧೨. **ಪೂರ್ವಭಾವಿ** (ಅ) ಮೊದಲು ಆಗತಕ್ಕ; ಪ್ರಾಸ್ತಾವಿಕ. ರಾಜ್ಯ ಪುನರ್ಘಟನೆಯ ಪೂರ್ವಭಾವಿ ಕಾರ್ಯಗಳು ಮುಗಿಯುತ್ತ ಬಂದಿವೆ. (ಸಂ.) ಪೂರ್ವ—ಮೊದಲು, ಭಾವಿ ಆಗತಕ್ಕ.

---

### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ಅರಿಯಿರಿ.

೬—೮ ಸರಿಯಿದ್ದರೆ ... ಸಾಧಾರಣ
೯—೧೦ ,, .... ಉತ್ತಮ
೧೧—೧೨ ,, .... ಅತ್ಯುತ್ತಮ

# ಜಗತ್ತಿನ ಅತಿ ದೊಡ್ಡ ಮಾರುಕಟ್ಟೆ

ಅಮೇರಿಕದ ಚಿಕಾಗೋ ನಗರದಲ್ಲಿ ಜಗತ್ತಿನ ಅತಿ ದೊಡ್ಡ ಮಾರುಕಟ್ಟೆಯಿದೆ. ಒಂದು ನದೀ ತೀರದಲ್ಲಿರುವ ಈ ಹದಿನೆಂಟಂತಸ್ತಿನ ವಿರಾಟ್ ಕಟ್ಟಡದೊಳ ಹೊಕ್ಕರೆ ನಿಮಗೆ ನೋಡಲು ಸಿಗಲಾರದ ಸರಕು ಪ್ರಪಂಚದಲ್ಲಿ ಎಲ್ಲಿಯಾದರೂ ಸಿಕ್ಕೀತೇ ಎಂಬುದು ಅನುಮಾನ.

ಮಾರ್ಷಲ್ ಫೀಲ್ಡ್ ಮತ್ತು ಕಂಪನಿಯೆಂಬ ಪ್ರಸಿದ್ಧ ವರ್ತಕ ಸಂಸ್ಥೆ ಏರ್ಪಡಿಸಿದ ಈ ಬಾಜಾರದ ಕಟ್ಟಡ ೧೯೩೦ ರಲ್ಲಿ ಉದ್ಘಾಟನೆಯಾದಾಗ ಅದು ಜಗತ್ತಿನ ಅತಿ ದೊಡ್ಡ ಕಟ್ಟಡವೆನಿಸಿತ್ತು.

ಈ ಬಾಜಾರಕ್ಕಿಂತ ದೊಡ್ಡದಾದ ಕಟ್ಟಡವೊಂದು ಈಗ ವಾಷಿಂಗ್ಟನ್ನಿನಲ್ಲಿದೆ. ಅದು ಅಮೇರಿಕದ ಸೈನಿಕ ಕಚೇರಿ—“ಪೆಂಟಗಾನ್”ಕಟ್ಟಡ. ಆದರೂ ಜಗತ್ತಿನ ಅತಿ ದೊಡ್ಡ ವಾಣಿಜ್ಯ ಭವನವೆಂದು ಇದು ಇಂದಿಗೂ ಅದ್ವಿತೀಯವಾದುದಾಗಿಯೆ ಉಳಿದಿದೆ.

ಈ ಕಟ್ಟಡವು ೪೦,೨೩,೪೦೦ ಚದರ ಅಡಿ ಅಥವಾ ೯೩ ಎಕರೆ ಪ್ರದೇಶವನ್ನೊಳಗೊಂಡಿದೆ. ಅದರೊಳಗೆ ಪ್ರವಾಹದಂತೆ ಜನರು ಸಂತತವಾಗಿ ಹೋಗಿಬರುವರು. ಅದರಲ್ಲಿ ಹೊಕ್ಕು ಒಂದು ಸುತ್ತು ಹಾಕಿಬರಬೇಕಾದರೆ ಏಳೂವರೆ ಮೈಲು ನಡೆಯಬೇಕಾಗುತ್ತದೆ. ಇಲ್ಲಿ ಸಾರಿಗೆ ವ್ಯವಸ್ಥೆಯು ತುಂಬ ಇದ್ದರೂ ಜನಪ್ರವಾಹದ ಒತ್ತಡವೂ ಬಹಳವಾಗಿದೆ. ಆದರೂ ಎಲ್ಲವೂ ವ್ಯವಸ್ಥಿತವಾಗಿ ದೊಡ್ಡ ರೇಲ್ವೆ ನಿಲ್ದಾಣದಂತೆ ಸಾಗುತ್ತದೆ.

ಈ ಬಾಜಾರದ ವಿವರ ತಿಳಿಯಲು ನೀವು ಡೈರೆಕ್ಟರಿಯನ್ನು ನೋಡಿದರೆ ಅಲ್ಲಿ ದೊರೆಯುವ ಸಾಮಾನುಗಳನ್ನು ತಿಳಿಸುವ ೨೦೦ ಪುಟಗಳನ್ನು ಕಾಣುವಿರಿ. ೩,೨೦೦ ರಷ್ಟು ತಯಾರಕರು ಇಲ್ಲಿ ಮಾರಲು ತಮ್ಮ ಸರಕುಗಳನ್ನಿಟ್ಟಿರುವರು. ಅಕ್ಷರಾನುಕ್ರಮವಾಗಿ ಈ ಸರಕುಗಳ ಹೆಸರುಗಳು



‘ಥಿಂಕ್’ ಪತ್ರಿಕೆಯಲ್ಲಿ ಇರ್ವಿಂಗ್ ವಾಲೇಸರ ಲೇಖದಿಂದ

ಮುದ್ರಿಸಲ್ಪಟ್ಟಿವೆ. ಅಲ್ಲಿ ವಿಮಾನ ಸಂಚಾರಿಗಳ ಪ್ರವಾಸ ಸಲಕರಣೆಗಳಿಂದಾರಂಭಿಸಿ ಕಸದ ಬುಟ್ಟಿಯ ವರೆಗೆ ಅಸಂಖ್ಯ ಸರಕುಗಳನ್ನು ಕೊಳ್ಳ ಬಹುದು. ಮಕ್ಕಳಬೂಟ್ಸು, ಬಲೂನು, ಬಾರೋಮಿಟರ್ ( ವಾಯುಮಾಪಕ ) ಮುಂತಾದ ಎಲ್ಲ ಸಾಮಾನುಗಳನ್ನು ಕಾಣುವಿರಿ. ೧೨,೮೮,೦೦೦ ವಿಧದ ವಸ್ತುಗಳನ್ನು ಇಲ್ಲಿ ಪ್ರದರ್ಶನಕ್ಕೆ ಇಡಲಾಗಿದೆ. ಜಗತ್ತಿನ ಎಲ್ಲ ಮೂಲೆಗಳಿಂದಲೂ ಇಲ್ಲಿಗೆ ಗಿರಾಕಿಗಳು ಬರುತ್ತಾರೆ.

ಆದರೆ ಇಲ್ಲಿ ಠೋಕ ವ್ಯಾಪಾರ ಮಾತ್ರ ನಡೆಯುವದು. ಇಲ್ಲಿ ಸರಕುಗಳಿಗೆ ಆರ್ಡರು ಮಾತ್ರ ತೆಗೆದುಕೊಳ್ಳಲಾಗುವದು. ಯಾವ ಸಾಮಾನನ್ನೂ ಹೆಚ್ಚು ಪ್ರಮಾಣದಲ್ಲಿ ಇಲ್ಲಿ ಸಂಗ್ರಹಿಸಿಟ್ಟಿರುವುದಿಲ್ಲ. ಹೊಚ್ಚ ಹೊಸ ಮತ್ತು ಉತ್ತಮವಾದ ವಸ್ತುಗಳ ಮಾದರಿಗಳನ್ನು ಮಾತ್ರ ಇಲ್ಲಿ ಇರಿಸುವರು.

ಅದು ಅಂಗೀಕೃತ ಚಿಲ್ಲರೆ ಅಂಗಡಿಗಳಿಗೆ ಮಾತ್ರ ಮಾರಾಟ ಮಾಡುವದು. ಆದರೆ ಸಾರ್ವಜನಿಕರಿಗೆ ಈ ಮಾರುಕಟ್ಟೆಯನ್ನು ಸಂದರ್ಶಿಸಲು ಯಾವಾಗಲೂ ಸ್ವಾಗತವಿದೆ. ಪ್ರತಿ ಸೋಮವಾರದಿಂದ ಶುಕ್ರವಾರದ ತನಕ ನಿತ್ಯವೂ ವಿಶೇಷವಾಗಿ ತರಬೇತಿ ಹೊಂದಿದ ಸಿಬ್ಬಂದಿಗಳು ಅರ್ಧ ಗಂಟೆಗೊಮ್ಮೆ ಬಾಜಾರನ್ನು ತೋರಿಸುವ "ಸಂಚಾರ" ವನ್ನು ಏರ್ಪಡಿಸುವರು. ಈ ಮಾರುಕಟ್ಟೆಯನ್ನು ನೋಡ ಬಯಸಿ ಪ್ರತಿ ದಿನ ಇಲ್ಲಿಗೆ ಬರುವ ನೂರಾರು ಜನರು ನಿಶ್ಚಿತ ಮೊತ್ತವನ್ನು ತೆತ್ತು ಈ ಬಾಜಾರವನ್ನು ಅವಲೋಕಿಸಿ ಹೋಗುವರು. ಒಂದು ಸುತ್ತು ಹಾಕಲು ಒಂದೂ ಕಾಲು ತಾಸು ಹಿಡಿಯುತ್ತದೆ.

ಈ ಪ್ರವಾಸಗಳಿಂದ ಲಾಭವಿದೆ. ಹೆಚ್ಚಿನ ಸಂದರ್ಶಕರು ತಾವು ಮಾರುಕಟ್ಟೆಯಲ್ಲಿ ನೋಡಿದ ವಸ್ತುಗಳಿಗಾಗಿ ತಮ್ಮ ವ್ಯಾಪಾರಿಗಳ ಮೂಲಕ ಆರ್ಡರು ಕೊಡುತ್ತಾರೆಂದು ಪರಿಶೀಲನೆಯಿಂದ ತಿಳಿಯುತ್ತದೆ.

ಇದು ಒಂದೇ ಕಟ್ಟಡದೊಳಗಿದ್ದರೂ ಒಂದು ನಗರವೇ ಸೈ. ೨೦,೦೦೦ ಕ್ಕಿಂತ ಹೆಚ್ಚು ಜನರು ಇಲ್ಲಿ ದುಡಿಯುತ್ತಾರೆ. ೨೦,೦೦೦ ದಷ್ಟು ಜನರು ಪ್ರತಿ ದಿನ ವ್ಯಾಪಾರಕ್ಕಾಗಿ ಇಲ್ಲಿಗೆ ಬರುತ್ತಾರೆ.

ಈ ಮಾರುಕಟ್ಟೆಯ ಆಂತರಿಕ ವ್ಯವಸ್ಥೆಯು ಪ್ರಚಂಡವಾಗಿದೆ. ೩೦೦ ಕ್ಕೂ ಮಿಕ್ಕಿ ನೌಕರರು ಇದಕ್ಕಾಗಿ ಇರುವರು. ೧೫ ಲಕ್ಷ ಡಾಲರಿನ ವಾರ್ಷಿಕ ವೆಚ್ಚ ಬರುವದು. ಕೀಲಿ ದುರಸ್ತಿಯವನು ೧೫,೦೦೦ ಬೀಗಗಳ ಮೇಲೆ ಕಣ್ಣಿಟ್ಟಿರಬೇಕಾಗುವದು. ೧೦,೦೦೦ ಕ್ಕಿಂತ ಹೆಚ್ಚು ಟೆಲಿಫೋನುಗಳನ್ನು ನೋಡಿಕೊಳ್ಳಬೇಕಾಗುತ್ತದೆ. ೧೯೫೪ ರಲ್ಲಿ ೩೦,೦೦೦ ಗ್ಯಾಲನ್ನು ಬಣ್ಣವನ್ನು ಇಲ್ಲಿ ಹಚ್ಚಲು ಉಪಯೋಗಿಸಲಾಯಿತು. ಎಲ್ಲಾ ಕೋಣೆಗಳಿಗೂ ಮತ್ತು ಪ್ರವೇಶ ರಸ್ತೆಗಳಿಗೂ ಏರ್ ಕಂಡಿಶನ್ ಸೌಕರ್ಯ ಒದಗಿಸಲಾಗಿದೆ.

ಚಳಿ ನೀಗಿಸುವ ಸಲುವಾಗಿ ಇಲ್ಲಿ ೨೭,೦೦೦ ಟನ್ನು ಇದ್ದಲಿ ಪ್ರತಿ ವರ್ಷ ವೆಚ್ಚವಾಗುತ್ತದೆ. ಗ್ಯಾಸ್ ಇದ್ದಲಿ, ಎಣ್ಣೆ ಇವನ್ನು ಉಪಯೋಗಿಸಿ ಉಷ್ಣತೆ ಉಳಿಸುವಂತೆ ಮಾಡುವ ಯಂತ್ರಗಳನ್ನೂ ಇಲ್ಲಿ ಈಗ ಹಾಕಿದ್ದಾಗಿದೆ.

ಈ ದೊಡ್ಡ ಕಟ್ಟಡಕ್ಕೆ ಸ್ವಂತ ಪೋಲೀಸ ಪಡೆ ಹಾಗೂ ಸಾರಿಗೆ ಅಧಿಕಾರಿಗಳೂ ಇದ್ದು ಅವರು ಹಗಲಿರುಳು ಕಾರ್ಯನಿರತರಾಗಿರುವರು. ಪ್ರತಿ ದಿನ ೪೦,೦೦೦ ಟಪ್ಪಾಲು ವಸ್ತುಗಳು ಈ ಕಟ್ಟಡಕ್ಕೆ ಬರುತ್ತಿದ್ದು ನಾಲ್ಕು ಸಲ ಬಟವಾಡೆ ಇದೆ. ಅದರಲ್ಲಿ ೧,೦೦೦ ದಷ್ಟು ಪಾರ್ಸಲ್ ಪ್ಯಾಕೇಜುಗಳಿರುವವು.

ಎಷ್ಟೋ ರಾಷ್ಟ್ರಗಳ ಪ್ರಮುಖ ಔದ್ಯಮಿಕ ಕಂಪನಿಗಳು ತಮ್ಮ ಪ್ರಾದೇಶಿಕ ಕಚೇರಿ ಅಥವಾ ಶಾಖೆಯನ್ನು ಇಲ್ಲಿ ತೆರೆದಿವೆ. ಆದರೂ ಇದು ಕಚೇರಿಗಳ ಕಟ್ಟಡವಲ್ಲ.

ರಾಷ್ಟ್ರದ ಅತ್ಯುತ್ತಮವಾದ ತಯಾರಿಕೆಗಳನ್ನು ಪ್ರದರ್ಶಿಸುವ ಸಲುವಾಗಿ ಬಹುಭಾಗ ಸ್ಥಳವನ್ನು ಉಪಯೋಗಿಸಲಾಗಿದೆ. ಪ್ರತಿ ಅಂತಸ್ತಿನಲ್ಲಿ ಸುಂದರವಾಗಿ ಕಾಣುವಂತೆ ಶೃಂಗರಿಸಿದ ಶೋರೂಂಗಳಲ್ಲಿ ಸರಕುಗಳ ಪ್ರದರ್ಶನಗಳಿವೆ. ಇದರ

ಮುಖ್ಯ ಮಾಳಿಗೆಯಲ್ಲಿ ರಾಷ್ಟ್ರದ ಅಗ್ರಗಾಮೀ ವಾಣಿಜ್ಯ ಬ್ಯಾಂಕ ಒಂದು ಇದೆ.

ಮೊದಲಿನ ಎರಡು ಮಾಳಿಗೆಗಳಲ್ಲಿ ಖಾನಾವಳಿ ಹೋಟೆಲುಗಳಿದ್ದು ೩೦,೦೦೦ ಜನರು ಅಲ್ಲಿ ದಿನವೂ ಊಟಮಾಡುವರು. ಕೆಳಗಿನ ಮಾಳಿಗೆಯಲ್ಲಿ ನೌಕರರು ಹಾಗೂ ಸಾರ್ವಜನಿಕರು ಸಣ್ಣ ನಗರದಲ್ಲಿ ದೊರೆಯತಕ್ಕ ಎಲ್ಲ ಸೌಕರ್ಯಗಳನ್ನೂ ಪಡೆಯಬಲ್ಲರು. ಕಿರಾಣಿ ಸಾಮಾನುಗಳನ್ನು ಮಾರುವ ೪೦ ಸ್ವತಂತ್ರ ಅಂಗಡಿಗಳು ಅಲ್ಲಿವೆ. ಅಲ್ಲದೆ ಔಷಧಸಾಮಗ್ರಿ, ಉಡುಗೆ ವಸ್ತು, ಹೊಗೆಸೊಪ್ಪು, ಮದ್ಯ ಮುಂತಾದ ಹಲವಾರು ಪದಾರ್ಥಗಳು ಅಲ್ಲಿ ಕಿರುಕಳವಾಗಿ ದೊರೆಯುತ್ತವೆ. ಡಾಕ್ಟರರು, ದಂತವೈದ್ಯರು, ಕ್ಷೌರಿಕರು, ಪ್ರಯಾಣ ಮಾಹಿತಿ ಪೂರೈಸುವವರು ಇವರೆಲ್ಲರೂ ಇದ್ದಾರೆ.

ಚಿಕಾಗೋದ ಉತ್ತರದ ಕೊನೆಯ ಸಂಪೂರ್ಣ ಭಾಗವನ್ನು ಆವರಿಸಿದ ಈ ಮಾರುಕಟ್ಟೆ ಒಂದು ಭಾರೀ ರಚನೆಯೇ ಆಗಿದೆ. ಇದರ ಮುಖ್ಯ ಭಾಗವು ೧೮ ಮಹಡಿಗಳಿಂದ ಕೂಡಿದೆ. ಗೋಪುರ ಭಾಗ ಮಾತ್ರ ೨೫ ಅಂತಸ್ತುಗಳುಳ್ಳದ್ದು ಎಂದರೆ ೩೯೩ ಅಡಿ ಎತ್ತರವಿದೆ.

೧೯೨೮ ರಲ್ಲಿ ಇದರ ರಚನೆ ಪ್ರಾರಂಭವಾಯಿತು. ೩೨೦ ಲಕ್ಷ ಡಾಲರು ಆಗ ಇದಕ್ಕೆ ವೆಚ್ಚವಾಯಿತು. ೧೯೩೦ ರಲ್ಲಿ ಈ ಮಾರ್ಕೀಟು ತೆರೆಯಲಾಯಿತು. ೩೦ ದೊಡ್ಡ ವಿದ್ಯುತ್‌ಚಾಲಿತ ಲಿಫ್ಟುಗಳು ೨೫೦ ಲಕ್ಷ ಜನರನ್ನು ೧೯೫೮ರಲ್ಲಿ ಈ ಕಟ್ಟಡದ ಅಂತಸ್ತುಗಳ ಮೇಲೆ-ಕೆಳಗ ಸಾಗಿಸಿವೆಯೆಂದು ಅಧಿಕೃತ ಅಂದಾಜಿದೆ. ಇಲ್ಲಿ ಇರುವಂತಹ ಸಾರಿಗೆ ಸೌಕರ್ಯವು ಅಮೇರಿಕೆಯ ಕೆಲವೇ ಕಟ್ಟಡಗಳಿಗೆ ಇರಬಹುದು. ರೇಲು, ರಸ್ತೆ, ಜಲ, ವಾಯು, ಮೋಟಾರು ರಸ್ತೆಗಳು ಈ ಕಟ್ಟಡಕ್ಕೆ ಒದಗಿಸಲ್ಪಟ್ಟಿವೆ. ಇಲ್ಲಿ ಬರುವ ಸರಕು ಸಾಗಾಟದ ರೇಲು ರಸ್ತೆಗೆ ಆರು ಕಪಲುಗಳಿವೆ. ಈ ಕಟ್ಟಡ ಒಂದು ನದೀ ಮುಖದಲ್ಲಿರುವುದರಿಂದ ಹಡಗುಸಾರಿಗೆಯೂ ಇದಕ್ಕಿದೆ. ಮತ್ತು ಭವನದ ಮೇಲೆ ಹೆಲಿಕ್ಯಾಪ್ಟರ ವಿಮಾನಗಳಿಗಾಗಿ ನಿಲ್ದಾಣವಿದೆ. ಪ್ರಯಾಣಿಕರ ಟ್ರೇನುಗಳು ಎರಡನೇ ಮಾಳಿಗೆಗೇ ಅವರನ್ನು ತಂದು ಬಿಡುತ್ತವೆ.

ಹಿಂದೆ ಇಂಗ್ಲಂಡಿನಲ್ಲಿ ಅಮೇರಿಕೆಯ ರಾಯಭಾರಿಯಾಗಿದ್ದ ಬ್ಯಾಂಕರ, ಜೋಸೆಫ ಪಿ. ಕೆನಡಿಯವರಿಗೆ ೧೩ ವರ್ಷಗಳ ಹಿಂದೆ ಈ ಕಟ್ಟಡವನ್ನು ಮಾರಲಾಯಿತು. ಅವರ ಒಡೆತನದ ಕಾಲದಲ್ಲಿ ಅವರು ಇಲ್ಲಿ ಬಾಡಿಗೆಗಿರುವ ಅಂಗಡಿಕಾರರಿಗೆ ಮತ್ತು ಗಿರಾಕಿಗಳಿಗೆ ಅನುಕೂಲತೆಗಳನ್ನು ಒದಗಿಸಲು ತುಂಬ ಯತ್ನಿಸಿದ್ದಾರೆ.



**ಪ್ರತಿಯೊಂದು ಮಗು ಹುಟ್ಟುವಾಗ ಪರಮಾತ್ಮ ಇನ್ನೂ ಮನುಷ್ಯಕುಲದ ಬಗ್ಗೆ ನಿರಾಶನಾಗಿಲ್ಲ ಎಂಬ ಸಂದೇಶ ತರುತ್ತದೆ.**

—ಗುರುದೇವ ಠಾಕೂರ

**ಭೂಮಿ ತನ್ನ ಸೊತ್ತೆಂದು ಹೇಳುವವನನ್ನು ನೋಡಿ ಭೂಮಿ ನಗುತ್ತಾಳೆ; ಕೃಪಣನನ್ನು ಕಂಡು ಧನ ನಗುತ್ತದೆ; ರಣಹೇಡಿಯನ್ನು ನೋಡಿ ಕಾಲ ಗಹಗಹಿಸುತ್ತಾನೆ.**

—ತೆಲಗು ಸಂತ ವೇಮಣ್ಣ

**ಹೊಲಗಳೂ ಮರಗಳೂ ನನಗೇನನ್ನೂ ಕಲಿಸುವುದಿಲ್ಲ; ಆದರೆ ನಗರದ ಜನರು ಕಲಿಸುತ್ತಾರೆ.**

—ಸುಕ್ರಾತ

# ದೋಣಿಯ ಒಳಗೆ ನೀರು

ಆಚಾರ್ಯ ವಿನೋಬಾ ಭಾವೆ

ಸಮಾಜಕ್ಕಾಗಿ ತನ್ನದಾದ ಏನಾದರೊಂದನ್ನು ಬಿಟ್ಟುಕೊಡುವದು ಮನುಷ್ಯಸ್ವಭಾವದ ವೈಶಿಷ್ಟ್ಯ. ತ್ಯಾಗ ಸೇವೆಗಳ ಅವಕಾಶ ದೊರೆತಾಗ ಅವನು ಸಂತೋಷಪಟ್ಟುಕೊಳ್ಳುತ್ತಾನೆ.



ಆದರೆ ಬ್ರಿಟಿಶರಾಳಿಕೆಯಲ್ಲಿ ಹಣಕ್ಕೆ ಹೆಚ್ಚಿನ ಮಹತ್ವ ಪ್ರಾಪ್ತವಾಗತೊಡಗಿತು; ಹಳ್ಳಿಗಳಲ್ಲಿಯ ಕಲೆ, ಕಸಬು ಮತ್ತು ಉದ್ಯೋಗಗಳು ನಾಶವಾದವು; ಜನ ಪಟ್ಟಣಗಳಿಂದ ತಮಗೆ ಬೇಕಾದ ಸಾಮಾನುಗಳನ್ನು ಕೊಳ್ಳತೊಡಗಿದರು. ಹೀಗೆ ಅವರು ಹಣದ ಗುಲಾಮರಾದುದರಿಂದ ಪ್ರೇಮವನ್ನು ಮರೆತರು.

ಈಗ ಈ ಜನರು ಹಣದ ಶಾಸ್ತ್ರವೊಂದನ್ನು ಮಾಡಿಕೊಂಡು ಅದಕ್ಕೆ ಅರ್ಥಶಾಸ್ತ್ರವೆಂದು ಹೆಸರಿಟ್ಟಿದ್ದಾರೆ. ನಿಮ್ಮ ಮನೆಯಲ್ಲಿಯೇ ಹಣವನ್ನು ಹೆಚ್ಚಿಸಿಕೊಳ್ಳುವ ಬಗೆಯನ್ನು ಈ ಶಾಸ್ತ್ರ ಕಲಿಸುತ್ತದೆ. ಆದರೆ ಇದು ಶಾಸ್ತ್ರವಲ್ಲ, ಅದಕ್ಕೆ ವಿರುದ್ಧವಾದುದು.

ನೀರು ದೋಣಿಯಲ್ಲಿ ಸೇರಿಕೊಂಡಾಗ ಹೊಲಸು ನಾರುವದು. ದೋಣಿ ನಡೆಸಲು ನೀರು ಬೇಕು, ನಿಜ; ಆದರೆ ನೀರು ಹೊರಗಡೆ ಬೇಕಲ್ಲದೆ ಒಳಗಡೆ ಅಲ್ಲ. ಅದೇ ರೀತಿಯಲ್ಲಿ ಸಂಪತ್ತು ಅವಶ್ಯಕವಾದರೂ ಅದು ಸಮಾಜಕ್ಕೆ ಅವಶ್ಯಕವಾಗಿದೆಯಲ್ಲದೆ ವೈಯಕ್ತಿಕ ಕುಟುಂಬದಲ್ಲಲ್ಲ. ಸಂಪತ್ತು ಕುಟುಂಬವನ್ನು ಸೇರಿಕೊಂಡಾಗ ನೀರು ಸೇರಿದ ದೋಣಿಯ ಗತಿಯೇ ಅದಕ್ಕೂ ಆಗುತ್ತದೆ.

ನಮ್ಮ ಹಳ್ಳಿಗಳಲ್ಲಿಯ ಬೆಳೆ ಹೆಚ್ಚಾಗಬೇಕು, ಪ್ರತಿ ಮನೆಯಲ್ಲೂ ನೂಲಿನ ರಾಟಿ ತಿರುಗಬೇಕು, ಪ್ರತಿ ಕುಟುಂಬದಲ್ಲೂ ದನಕರುಗಳಿದ್ದು ಎಲ್ಲ ಮಕ್ಕಳಿಗೆ ವಿಪುಲವಾಗಿ ಹಾಲು ದೊರೆಯಬೇಕು, ಹೊರಗಿನವರು ಬಂದಾಗ ಅವರಿಗೆ ಹೊಟ್ಟೆತುಂಬ ಊಟಹಾಕುವ ಮಟ್ಟಿಗೆ ಪ್ರತಿ ಮನೆಯಲ್ಲೂ ಸಾಕಷ್ಟು ಧಾನ್ಯವಿರಬೇಕು, ತೋಟಗಳಲ್ಲಿ ಯಥೇಚ್ಛ ಹಣ್ಣುಹಂಪಲ ಮತ್ತು ಹೂಗಳಿರಬೇಕು ಎಂದು ನಾವು ಅಪೇಕ್ಷಿಸುತ್ತೇವೆ. ಹಳ್ಳಿಗಳಲ್ಲಿ ಇವೆಲ್ಲವು ವಿಪುಲವಾಗಿರಲಿ, ಆದರೆ ಹಣದ ಅಭಾವವಿರಲಿ. ಕಳ್ಳನೊಬ್ಬ ಸುಲಭವಾಗಿ ೨೦೦ ರೂಪಾಯಿಗಳ ನೋಟನ್ನು ಕಿಸೆಯಲ್ಲಿ ಹಾಕಿಕೊಂಡು ಓಡಿ ಹೋಗಬಲ್ಲ. ಆದರೆ ಆತ ಅಷ್ಟು ಬೆಲೆಯ ಧಾನ್ಯವನ್ನು ಕದ್ದುಕೊಂಡು ಅಷ್ಟು ಸುಲಭದಲ್ಲಿ ಓಡಿಹೋಗಲಾರ.

ಇಂದು ಶ್ರೀಮಂತರ ಬಳಿಯಲ್ಲಿ ಹಣದ ಹೊರತು ಇನ್ನೇನೂ ಇರುವದಿಲ್ಲ. ಅವರಿಗೆ ಹೊಲದಲ್ಲಿ ದುಡಿಯುವ ರೀತಿ ಗೊತ್ತಿರುವದಿಲ್ಲ, ಆದುದರಿಂದ ಅವರ ಬಳಿಯಲ್ಲಿ ಧಾನ್ಯ, ಕಾಯಿಪಲ್ಲೆ, ಹಾಲು, ತುಪ್ಪ ಅಥವಾ ಬಟ್ಟೆ ಯಾವದೂ ಇರುವದಿಲ್ಲ. ಆದರೆ ಅವರ ಬಳಿಯಲ್ಲಿ ಕೆಲಕಾಗದ ಚೂರುಗಳೂ ಹರಳುಗಳೂ ಇರುತ್ತವೆ. ಈ ಕಾಗದದ ಚೂರುಗಳನ್ನು ತೋರಿಸಿ ಅವರು ತಮಗೆ ಬೇಕಾದ್ದನ್ನು ಬೇಕಾದವರಿಂದ ಅಪಹರಿಸಿಕೊಳ್ಳಬಲ್ಲರು.

ಈ ಕಾಲದಲ್ಲಿ ಹಳ್ಳಿಯವರು ಕೂಡ ಈ ಕಾಗದದ ಚೂರುಗಳ ಮೋಹಕ್ಕೆ ಬಲಿಬಿದ್ದು ತಾವು ಬೆಳೆಯುವದನ್ನೆಲ್ಲ ಮಾರಿ ಅವನ್ನು ಪಡೆಯುತ್ತಾರೆ. ಕಾಗದವನ್ನು ತಿನ್ನಲಾರೆವು, ಕುಡಿಯಲಾರೆವು ಅಥವಾ ಧರಿಸಲೂ ಆರೆವು. ಆದರೆ ಹಣದ ಮಾಯೆ ಪ್ರತಿ ಹಳ್ಳಿಯಲ್ಲೂ ಹಬ್ಬಿದೆ.

ಹಾಲನ್ನು ಮಾರುವದು ಪಾಪ ಎಂದು ಜನರು ತಿಳಿಯುವ ಕಾಲ ಒಂದಿತ್ತು. ಅಗತ್ಯವಿರುವವರಿಗೆ ಅವರದನ್ನು ಪುಕ್ಕಟೆಯಾಗಿ ಕೊಡುತ್ತಿದ್ದರು. ಆದರೆ ಈಗ ಭೂಮಿಯ ಬೆಲೆಯನ್ನೂ ಹಣದ ಅಳತೆಕೋಲಿನಿಂದ ನಿರ್ಧರಿಸುತ್ತಾರೆ. ಇದು ತೀರ ತಪ್ಪು. ಭೂಮಿ ನಮ್ಮ ತಾಯಿ. ಅದು, ದೇವರು ನಮಗೆ—ಅವನ ಮಕ್ಕಳಿಗೆ—ಇತ್ತ ಉಡುಗರೆ. ನಮ್ಮಲ್ಲಿ ಪ್ರತಿಯೊಬ್ಬನಿಗೂ ಅದರ ಮೇಲೆ ಸಮಾನ ಹಕ್ಕಿದೆ.

ಇಂದು ಜಗತ್ತಿನಲ್ಲಿ ತುಂಬ ಅಶಾಂತಿ ಇದೆ. ಭಾರತದಲ್ಲಿ ತುಂಬ ದುಃಖವಿದೆ. ಆದರೆ ಈ ದುಃಖದ ಪ್ರಮಾಣವನ್ನು ನೋಡಿದಾಗ ಇಲ್ಲಿರುವ ಅಶಾಂತಿ ಕಡಿಮೆಯಾಗಿದೆ. ಗತಕಾಲದಲ್ಲಿ ಭಾರತದ ಸಂತರು ಇತ್ತಿರುವ ಶಿಕ್ಷಣದಫಲವಾಗಿ ಭಾರತದ ಜನರ ಮನಸ್ಸು ಸಂಕಟಕಾಲದಲ್ಲಿ ಉದ್ವಿಗ್ನವಾಗುವದಿಲ್ಲ, ಕೆರಳುವದಿಲ್ಲ. ನಮ್ಮಲ್ಲಿಯ ಸ್ಥಿತಿಯ ಮಾಪದಿಂದ ನೋಡಿದರೆ ಜಗತ್ತಿನಲ್ಲಿರುವ ಅಶಾಂತಿ ನಿಜವಾಗಿಯೂ ಗಂಭೀರ ಸ್ವರೂಪದ್ದಾಗಿದೆ. ಜಗತ್ತಿನಲ್ಲಿಯ ರಾಷ್ಟ್ರಗಳು ಪರಸ್ಪರರ ಅಂಜಿಕೆಯಿಂದ ಶಸ್ತ್ರಾಸ್ತ್ರಗಳ ಸಂಗ್ರಹವನ್ನು ಬೆಳೆಸುತ್ತಿವೆ. ಒಮ್ಮೆಲೆ ಲಕ್ಷಾವಧಿ ಜನರನ್ನು ಸಂಹರಿಸಬಲ್ಲ ಬಾಂಬುಗಳನ್ನು ಅವು ತಯಾರಿಸುತ್ತಿವೆ.

ಶಾಂತಿಯು ಭಾರತದ ರಕ್ತಗತವಾಗಿದೆ. ಆದುದರಿಂದಲೇ ಇಲ್ಲಿಯ ಜನ ಸಂಕಟಗಳ ಸಮ್ಮುಖದಲ್ಲಿ ಹೌಹಾರುವದಿಲ್ಲ. ಆದರೆ ನಾವು ನಮ್ಮ ಜನರ ದುಃಖವನ್ನೂ ದಾರಿದ್ರ್ಯವನ್ನೂ ಹೋಗಲಾಡಿಸಬಲ್ಲೆವಾದರೆ ನಮ್ಮಲ್ಲಿಯ ಈ ಶಾಂತಿ ಭದ್ರವಾಗುವದು ಮತ್ತು ಜನರು ಒಕ್ಕಟ್ಟಿನಲ್ಲಿ ಅಭಿವೃದ್ಧಿ ಹೊಂದುವರು. ಆದ್ದರಿಂದಲೇ ನಾವು ನಮಗಿಂತ ಬಡವರಾದವರ, ನಮಗಿಂತ ದುಃಖಿಗಳಾದವರ ವಿಷಯದಲ್ಲಿ ಚಿಂತೆ ವಹಿಸಬೇಕು.

ಪ್ರತಿಯೊಂದು ಹಳ್ಳಿಯ ಜನರೂ ಸಹಕಾರ

## ಈ "ಭೇವ್" ಯಾರು?

ಅಮೇರಿಕೆಯಲ್ಲಿ ಸಾಮಾಜಿಕ ಕಾರ್ಯಗಳ ಶಿಕ್ಷಣ ಪಡೆದುಬಂದ ಓರ್ವ ಭಾರತೀಯ ಮಹಿಳೆ ಸಾಮಾಜಿಕ ಕಾರ್ಯದ ಶಾಲೆಯೊಂದರಲ್ಲಿ ಇಂಗ್ಲೀಷ್ ಪತ್ರಿಕೆಯೊಂದನ್ನು ಓದುವದರಲ್ಲಿ ಮಗ್ನಳಾಗಿದ್ದಳು.

ನಡುವೆಯೆ ಅವಳು ತಲೆಯೆತ್ತಿ, "ಈ ಭೇವ್ ಯಾರು?" ಎಂದು ಕೇಳಿದಳು.

ಉಳಿದ ಶಿಕ್ಷಕರು "ಆಂ! ಭೇವ್, ಯಾರು!" ಎಂದರು.

"ಅಂದರೆ ಬಿಹಾರದಲ್ಲಿ ಭೂದಾನ ಕಾರ್ಯ ಮಾಡುತ್ತಿದ್ದಾನಲ್ಲ, ಈ ಭೇವ್ ಯಾರು?'

ಅಲ್ಲಿದ್ದವರೆಲ್ಲರೂ ಖೊಳ್ಳೆಂದು ನಕ್ಕರು. ಆದರೆ ಅಮೇರಿಕೆಯಲ್ಲಿ ಶಿಕ್ಷಣ ಪಡೆದ ಆ ಮಹಿಳೆ ಮಾತ್ರ ''ಬಹುಶಃ ಯಾರೋ ತರಬೇತಿ ಹೊಂದಿರುವ ಸಾಮಾಜಿಕ ಕಾರ್ಯಕರ್ತನಿರಬೇಕು" ಎಂದು ತನ್ನ ಪ್ರಶ್ನೆಗೆ ತಾನೇ ಉತ್ತರ ಕೊಟ್ಟುಕೊಂಡಳು.

ಭೂದಾನದ ಜನ್ಮದಾತರಾದ ಭಾವೆಯವರ ಹೆಸರು ಕೂಡ ಅವಳಿಗೆ ಗೊತ್ತಿರಲಿಲ್ಲ.

ಸಂಪ ಮತ್ತು ಒಕ್ಕಟ್ಟಿನಿಂದ ವರ್ತಿಸಿದರಾದರೆ ಅಲ್ಲಿ ಒಬ್ಬನೇ ಒಬ್ಬ ದುಃಖಿಯೂ ಕಂಡುಬರಲಿಕ್ಕಿಲ್ಲ. ಆದ್ದರಿಂದಲೇ ಜಗತ್ತಿನಲ್ಲಿ ನಮಗೆ ಶಾಂತಿ ಬೇಕಾಗಿದ್ದರೆ ಪ್ರತಿ ಹಳ್ಳಿಯಲ್ಲೂ ಭೂಮಿಯ ಒಡೆತನದ ಹಕ್ಕನ್ನು ಇಲ್ಲದಂತಾಗಿಸಬೇಕು ಎಂದು ನಾನು ಸಾರಿದ್ದೇನೆ. ಹಳ್ಳಿಯ ಜಮೀನು ಇಡೀ ಹಳ್ಳಿಯ ಒಡೆತನದ್ದಾಗಬೇಕು ಮತ್ತು ದೇಶದ ಕಾರಖಾನೆಗಳು ದೇಶದ ಒಡೆತನದವಾಗಿರಬೇಕು. ಯಾವನೂ ಆಸ್ತಿಯ ಒಡೆಯನಾಗಿರಬಾರದು. ಇದೊಂದೇ ಸುಖದ ಹಾದಿ. ನಾನು ಮತ್ತು ನನ್ನದು ಎಂಬ ಭಾವನೆಯಿಂದಲೇ ನಮ್ಮ ಹೃದಯಗಳಲ್ಲಿ ಭೇದಭಾವವಿರುತ್ತದೆ. ಇದನ್ನು ಅಳಿಸಲು ನಾವು ಬಯಸುತ್ತೇವೆ. ಭಾರತದ ಜನರು ಇತರರಿಗಿಂತ ಈ ವಿಚಾರವನ್ನು ಹೆಚ್ಚು ಬೇಗ ತಿಳಿದುಕೊಳ್ಳಬಲ್ಲರು. ಇಲ್ಲಿಯ ಜನರಿಗೆ ಎಲ್ಲರೂ ಒಂದೇ ಎಂದು ಭಾವಿಸುವದು ಕಠಿಣವಲ್ಲ. ನಮ್ಮ ದಾರ್ಶನಿಕರು ಈ ಮಾತನ್ನು ನಮಗೆ ಪ್ರಾಚೀನ ಕಾಲದಿಂದ ಇದುವರೆಗೂ ಕಲಿಸುತ್ತ ಬಂದಿದ್ದಾರೆ.

ಪ್ರತಿಹಳ್ಳಿಗೂ ಈ ಅವಶ್ಯಕವಾದ ವಾತಾವರಣ ಹಬ್ಬಿದ್ದಾದರೆ ಅದರ ಬೆನ್ನಹಿಂದೆಯೆ ಕಾಯದೆ ಖಂಡಿತವಾಗಿಯೂ ಬರುವದು. ಕಾಯದೆ ಯಾವಾಗಲೂ ಮೊದಲಾಗಿ, ಮುಂದಾಗಿ ಬರುವವಾಗಿರದೆ ಹಿಂದಿನಿಂದ ಅನುಸರಿಸಿಕೊಂಡು ಬರುವದಾಗಿದೆ. ಜನರೇ ಮುಂದಾಗಬೇಕಾಗುತ್ತದೆ. ಮತ್ತು ದಾರ್ಶನಿಕರು, ಜ್ಞಾನಿಗಳು, ಸಂತರು ಜನರಿಗೆ ಮುಂದಾಳಾಗುತ್ತಾರೆ. ಕಾಯದೆ ಮಾಡುವವರು ಅವರನ್ನು ಅನುಸರಿಸಿ ಕಾಯದೆ ಮಾಡಿಕೊಡುತ್ತಾರೆ. ಆದುದರಿಂದಲೇ ಅಧಿಕಾರವು ಜನರ ಕೈಯಲ್ಲಿ ಇದೆಯೆಂದು ನಾನನ್ನುತ್ತೇನೆ. ಶಕ್ತಿ ಮತ್ತು ಅಧಿಕಾರ ಮನುಷ್ಯನ ಹೃದಯ ಮತ್ತು ವಿಚಾರಗಳಲ್ಲಿರುತ್ತವೆ. ಜಗತ್ತಿನಲ್ಲಿ ಮೊದಲನೆಯದು ವಿಚಾರಶಕ್ತಿ, ಎರಡನೆಯದು ಪ್ರೇಮಶಕ್ತಿ ಮತ್ತು ಮೂರನೆಯದು ಧಾರ್ಮಿಕಶಕ್ತಿ, ನಾಲ್ಕನೆಯದೆಂಬುದಿಲ್ಲ. ಕಾಯದೆಯ ಶಕ್ತಿ ಇವುಗಳ ಹಿಂದಿನಿಂದ ಬರುವದು. ಅಂತೆಯೆ, ಜನರೊಮ್ಮೆ ಪ್ರೇಮವನ್ನರಿತುಕೊಂಡರೆ, ಧರ್ಮ ಅಥವಾ ಕರ್ತವ್ಯವನ್ನರಿತುಕೊಂಡರೆ, ಸತ್ಯವನ್ನರಿತುಕೊಂಡರೆ ಸಮಾಜವು ಬದಲಾಗುವದು ಎಂದು ಪುನಃ ಪುನಃ ಹೇಳುವದಕ್ಕೆ ನಾನು ಬೇಸರಿಸುವದಿಲ್ಲ.

ಬದುಕಿ ಬಾಳುವ ಲಕ್ಷಗಟ್ಟಲೆ ಜನರು ಕಾಯದೆಯ ಬಲದಿಂದ ಬದುಕುವದಿಲ್ಲ. ನಿಜವಾಗಿ ಅವರಿಗೆ ಅದರ ಅರಿವೂ ಇರುವದಿಲ್ಲ. ಭಾರತದಲ್ಲಿ ಲಕ್ಷಗಟ್ಟಲೆ ಜನರು ಸ್ನಾನ ಮಾಡದೆ ಊಟಮಾಡುವದಿಲ್ಲ. ಈಗ ಹೀಗೆ ಮಾಡಬೇಕೆಂಬ ಕಾಯದೆಯೇನಾದರೂ ಇದೆಯೆ? ಆದರೆ ವರ್ಷಗಟ್ಟಲೆ ಸ್ನಾನಮಾಡದೆ ಊಟ ಮಾಡತಕ್ಕದ್ದಲ್ಲ ಎಂದು ನಡೆದ ಪ್ರಚಾರದಿಂದ ಆ ವಿಷಯದಲ್ಲಿ ಜನಕ್ಕೆ ಶಿಕ್ಷಣ ದೊರೆತಿದೆ. ಈ ಸಂದೇಶವನ್ನು ಸಾಧುಸಂತರು ಹಳ್ಳಿಹಳ್ಳಿಗೆ ಮುಟ್ಟಿಸಿದ್ದಾರೆ. ನಿಜವಾಗಿಯೂ ನಮ್ಮ ದೇಶವು ಸತ್ಪುರುಷರಿಂದಲೇ ರೂಪುಗೊಂಡಿದೆ.

ನಮ್ಮದು ಸತ್ಪುರುಷರ ನಾಡು. ಇಲ್ಲಿಯ ಜನರು ಯಾವಾಗಲೂ ಸಂಪತ್ತೇ ಸರ್ವಶ್ರೇಷ್ಠ ಎಂದು ಭಾವಿಸಿದವರಲ್ಲ. ತನ್ನ ಸಂಪತ್ತಿನ ಬಲದಿಂದ ಸುಖಪಡುವವನು, ಇಂಗ್ಲಂಡ ಅಥವಾ ಅಮೇರಿಕೆಗೆ ಹೋಗಿ ಪದವಿ ಪಡೆದು ಬಂದವನು ದೊಡ್ಡವನೆಂದು ಇಲ್ಲಿಯ ಜನ ಭಾವಿಸುವದಿಲ್ಲ. ಅದರಂತೆ ಭೀಮಬಲವುಳ್ಳವನಾಗಲಿ, ಶಸ್ತ್ರಾಸ್ತ್ರಧಾರಕನಾಗಲಿ ದೊಡ್ಡವನು ಎಂದೂ ಅವರು ತಿಳಿಯುವದಿಲ್ಲ. ಯಾವನೊಬ್ಬನ ಅಂಜಿಕೆಗಾಗಿ ಅವರು ಅವನ ಆಜ್ಞೆಯನ್ನು ಪಾಲಿಸುತ್ತಾರೆಂದರೆ ಆ ಮಾತು ಬೇರೆ. ದಯಾಂತಃಕರಣವುಳ್ಳ, ತ್ಯಾಗಿಯಾದ, ದೇವಭಕ್ತನಾದವನನ್ನು ಈ ದೇಶದ ಜನ ಶ್ರೇಷ್ಠನೆಂದು ಬಗೆಯುತ್ತಾರೆ.



# ವೈರಾಗ್ಯಕ್ಕೆ ಮದ್ದು ವೇದಾಂತವಲ್ಲ

"ನೀನು ಆತ್ಮಹತ್ಯೆ ಮಾಡಿಕೊಳ್ಳುವ ವಿಚಾರ ನನಗೆ ತಿಳಿಸಿದ್ದೀ. ಈ ನಿಶ್ಚಯಕ್ಕೆ ಬರಲು ನಿನ್ನನ್ನು ಪ್ರೇರಿಸಿದ ಸಂಗತಿಗಳು ವಿಚಾರಾರ್ಹವಾಗಿರುವಲ್ಲಿ ಸಂದೇಹವಿಲ್ಲ. ಒಬ್ಬ ಮನುಷ್ಯನು ತನ್ನ ಪ್ರಾಣವನ್ನು ನೀಗಿಕೊಳ್ಳಲು ನಿರ್ಧರಿಸುವದೇ ಈ ಜೀವಿತದ ವೈಯರ್ಥ್ಯವನ್ನು ಸಾಧಿಸಲು ಸಾಕಾಗಿದೆ.

ಥೇಮ್ಸ್ ನದಿಯಲ್ಲಿ ಹಾರಿಕೊಂಡು ಪ್ರಾಣ ಕೊಡಲುದ್ಯುಕ್ತನಾದವನೊಬ್ಬನಿಗೆ ಒಬ್ಬ ಪೋಲೀಸನು ಎರಡು ತಿಳಿವಳಿಕೆಯ ಮಾತನ್ನು ಹೇಳತೊಡಗಿದನು. ಆದರೆ ಸಂಭಾಷಣೆಯ ಅಂತ್ಯದಲ್ಲಿ ಆ ಮನುಷ್ಯನ ಮಾತೇ ಒಪ್ಪಿಗೆಯಾಗಿ ಇಬ್ಬರೂ ಕೂಡಿ ನದಿಯಲ್ಲಿ ಹಾರಿ ಪ್ರಾಣ ಬಿಟ್ಟರೆಂಬ ಕಥೆಯೊಂದಿದೆ. ಮಾನವೀ ಜೀವಿತದ ಸ್ವಾರಸ್ಯವನ್ನು ನಿನಗೆ ತಿಳಿಸಿಕೊಡುವ ಭರದಲ್ಲಿ ಕೊನೆಗೂ ಬದುಕಿರುವದಕ್ಕಿಂತ ಮರಣವೇ ಲೇಸೆಂದು ನಾನೂ ಒಪ್ಪುವ ಪ್ರಸಂಗ ಬರಬಹುದು. ಆದರೂ ಚಿಂತೆಯಿಲ್ಲ. ನನ್ನ ವಿಚಾರವನ್ನು ಹೇಳುವ ಪ್ರಯತ್ನ ಮಾಡುವೆ.

ಜೀವಿತದ ಬೆಲೆಯನ್ನು ನಿರ್ಧರಿಸಬೇಕಾದಲ್ಲಿ ಅದನ್ನು ಸಾಪೇಕ್ಷವಾಗಿಯೇ ನಿರ್ಧರಿಸಬೇಕಾಗುವದೆಂದು ನೆನಪಿಟ್ಟುಕೊಳ್ಳಬೇಕು. ವಸ್ತುಮಾತ್ರಕ್ಕೆಲ್ಲ ಏನಾದರೊಂದು ಬೆಲೆ ಇರಲೇಬೇಕೆಂದು ನನ್ನ ತಿಳಿವಳಿಕೆ. ಆದರೆ ಮಾನವನ ಅಲ್ಪಬುದ್ಧಿಗೆ ಅದು ನಿಲುಕಲಾರದೆಂದೂ ಅನಿಸುತ್ತಿದೆ. ವಿಶ್ವ, ಜೀವಿತ, ಅನಂತ, ಉತ್ಪತ್ತಿ, ಲಯ ಇತ್ಯಾದಿ ಶಬ್ದಗಳನ್ನು ನಾವು ಉಪಯೋಗಿಸುತ್ತೇವಾದರೂ ನಮಗೆ ಯಾವದು ತಿಳಿಯುವದಿಲ್ಲವೋ ಮತ್ತು ಎಂದಾದರೂ ತಿಳಿಯುವ ಆಶೆಯಿಲ್ಲವೋ ಅದರ ನಿರ್ದೇಶಕ್ಕಾಗಿ ಈ ಶಬ್ದಗಳನ್ನು ಸೃಷ್ಟಿಸಿಕೊಂಡಿದ್ದೇವೆಂದು ನಮ್ಮ ಮನಸ್ಸಿಗೆ ತಿಳಿದಿರುತ್ತದೆ.

ನಮ್ಮ ಜ್ಞಾನವನ್ನು ಸಂಪೂರ್ಣವೆಂದು ಬಗೆಯದೆ ಅದಕ್ಕೊಂದು ಮೇರೆಯಿಟ್ಟುಕೊಳ್ಳಬೇಕೆಂಬುದೇ ಇದರ ಮಥಿತಾರ್ಥ. ಜ್ಯೋತಿಶ್ಶಾಸ್ತ್ರಜ್ಞರು ಈ ಪೃಥ್ವಿಯ ಬೆಲೆ ಶೂನ್ಯಸಮಾನವೆಂದ ಮಾತ್ರಕ್ಕೆ ನಾವೇತಕ್ಕೆ ದಿಗಿಲುಬೀಳಬೇಕು? ಅವರಿಗಾದರೂ ಯಾವ

೧೯೩೦ನೇ ಇಸವಿಯಲ್ಲಿ ಆತ್ಮಹತ್ಯೆಯನ್ನು ಮಾಡಿಕೊಳ್ಳಲುದ್ಯುಕ್ತರಾದ ಎಷ್ಟೋ ಜನ ತರುಣರು ಅಮೇರಿಕೆಯ ಪ್ರಸಿದ್ಧ ತತ್ವಜ್ಞಾನಿಗಳೂ ಲೇಖಕರೂ ಆದ ವಿಲ್ ಡ್ಯೂರಾಂಟರಿಗೆ "ನಮಗೆ ಜೀವಿಸುವದರಲ್ಲೇನೂ ಅರ್ಥ ಕಂಡು ಬರುವದಿಲ್ಲ. ನೀವು ಘನವಿದ್ವಾಂಸರು ನಮಗೆ ಈ ಜೀವಿತದ ಅರ್ಥ ಹೇಳಿ" ಎಂದು ಪತ್ರಬರೆದಿದ್ದರು. ಈ ಜನರಿಗೆಲ್ಲ ಬರೆದ ಪತ್ರಗಳಲ್ಲಿ ಡ್ಯೂರಾಂಟರು "ಜೀವಿತದಲ್ಲಿ ಸ್ವಾರಸ್ಯವಿದೆ. ಆತ್ಮಹತ್ಯೆ ಮೂರ್ಖತನ" ಎಂದು ಬೇರೆ ಬೇರೆ ರೀತಿಯಲ್ಲಿ ಪ್ರತಿಪಾದಿಸಿದ್ದರು. ಈ ಎಲ್ಲ ಪತ್ರಗಳ ವಿಚಾರವನ್ನು ಏಕೀಕರಿಸಿ ಈ ಪತ್ರದಲ್ಲಿ ಕೊಟ್ಟಿದೆ.

ಶ್ರೀ ಜ. ಜ. ಹೆಗಡೆಯವರ "ಆಧುನಿಕ ಗೀತ" ಪುಸ್ತಕದಿಂದ

ಅಬಾಧಿತವಾದ, ಮಹತ್ವಾದ ಸಮ್ಯಗ್-ಜ್ಞಾನದ ಗಂಟು ದೊರೆತಿದೆ? ಈ ಭೂಗೋಲದ ಉತ್ಪತ್ತಿಯ ವಿಷಯದಲ್ಲಿ ನಿಶ್ಚಿತ ಸಿದ್ಧಾಂತವೊಂದನ್ನು ಮಾಡಲು ಇದು ವರೆಗೂ ಅವರು ಅಸಮರ್ಥರಾಗಿದ್ದಾರೆ. ಇದರಂತೆ ಇತರ ಪ್ರಾಣಿಗಳೂ ತರ್ಕಹೊಡಿ ನೋಡುತ್ತಿರುವರೆಂಬುದೇ ನಿಜವಲ್ಲವೆ? ಹೀಗಿರುವಾಗ ಅವರ ಸಿದ್ಧಾಂತಗಳಿಂದ ತಲೆ ಕೆಡಿಸಿಕೊಂಡು ಜಗತ್ತಿಗೆ ಮತ್ತು ಜೀವಿತಕ್ಕೆ ಶರಣು ಹೊಡೆಯಲು ಉದ್ಯುಕ್ತರಾಗಬೇಕು?

ಜೀವನಕ್ಕೆ ವ್ಯತಿರಿಕ್ತವಾದ ಎರಡನೆಯದೊಂದರ ಕಸಿಕಟ್ಟಿ ಅದರ ಅರ್ಥ ಶೋಧಿಸಲಾಗದು. ಜೀವಿಸುವುದರಲ್ಲಿಯೇ ಜೀವನದ ನಿಜವಾದ ಅರ್ಥವಿದೆ. ಜೀವನಕಾಲದ ವಿವಿಧ ಪ್ರೇರಣೆ ಮತ್ತು ಪೂರಣದಲ್ಲಿಯೆ ಸಮಾಧಾನ ಸ್ವಾರಸ್ಯಗಳಿವೆ. ನಮ್ಮಲ್ಲಿ ತೋರುವ ಹುರುಪಿನ ಅರ್ಥವನ್ನು ವಿಚಾರಿಸುವುದಾದರೂ ಏಕೆ? ಅದರಿಂದ ಮಹತ್ವದ ಕಾರ್ಯವೊಂದು ನಡೆಯುವುದು ಸರಿಯಷ್ಟೆ? ಅದರ ಸ್ವಯಂಸಿದ್ಧ ಮಹತ್ವವಾದರೂ ಇದ್ದೇ ತೀರುವುದು. ಮಹಾರೋಗದಿಂದ ನರಳುವಾತನು ಆತ್ಮಹತ್ಯೆಗೆ ಮನಸು ಮಾಡಿದರೆ ನಾನು ಆನಂದದಿಂದಲೇ ಅವನಿಗೆ ನಿರೋಪ ಕೊಡುವೆನು. ಹುಳಿತ ಜೀವಿಗಳ ಮರಣಕ್ಕೆ ಅಡ್ಡಿಯುಂಟುಮಾಡಲು ನಾನೆಂದೂ ಬಯಸುವುದಿಲ್ಲ; ಆದರೆ ಯಾರ ಆರೋಗ್ಯವು ಚೆನ್ನಾಗಿದೆಯೊ ಅಂಥವರು ಆತ್ಮಹತ್ಯೆಯ ವಿಚಾರ ಮಾಡುವುದೆಂದರೆ! ಛೆ! ಛೆ! ಅವರು ನರಳಕೂಡದು. ಬೆಳಗ್ಗೆ ಸೂರ್ಯಪ್ರಕಾಶದಲ್ಲಿ ಸೃಷ್ಟಿಯು ಮೀಯುತ್ತಿರುವಾಗ ಅವರು ಕೇಕೆ ಹಾಕಿ ಉದ್ಯೋಗಕ್ಕೆ ತೊಡಗಬೇಕು.

ಜೀವಂತವಾಗಿರುವುದರ ಪ್ರತ್ಯಯದಲ್ಲಿ, ಆರೋಗ್ಯದ ಹುಮ್ಮಸ್ಸಿನಲ್ಲಿ ಪಂಚೇಂದ್ರಿಯಗಳ ಸ್ನಾಯುಗಳ ಅಖಂಡ ಚಲನವಲನೆಯಲ್ಲಿ ಇರುವ ವಿಲಕ್ಷಣವಾದ ಆನಂದವೇ ಜೀವನದ ಸರಳವಾದ ಅರ್ಥ. ಆತ್ಮಕ್ಕಿಂತ ದೇಹದ ಅರಿವು ಹೆಚ್ಚಾಗಿ ಭಾಸವಾಗುವುದರಿಂದಲೇ ದೊಡ್ಡವರಿಗಿಂತ ಚಿಕ್ಕವರು ಹೆಚ್ಚು ಆನಂದದಲ್ಲಿರುವರು.

ಪ್ರತಿಯೊಬ್ಬನ ಆಯುಷ್ಯದಲ್ಲಿ ಒಮ್ಮೆಯಾದರೂ ಬರುವ ಆನಂದ ಮತ್ತು ಉಲ್ಲಾಸದ ಉನ್ಮಾದದ ಕೆಲವೊಂದು ನಿಮಿಷಗಳಿಗಾದರೂ ಜೀವಿಸಬೇಕೆಂದು ಪ್ರತಿಯೊಬ್ಬನಿಗೂ ಅನಿಸಲೇಬೇಕು; ಮಳೆಯ ನೀರಿನಲ್ಲಿ ಹಾದಿ ನಡೆಯುವುದು, ಗುಡುಗುಮಿಂಚುಗಳನ್ನೆದುರಿಸುವುದು, ಹಿಮದ ಮೇಲೆ ಅಡ್ಡಾಡುವುದು ಅಥವಾ ಒಂದು ಗಿರಿಶಿಖರದ ಮೇಲೆ ಕುಳಿತು ರಾತ್ರಿಯ ರಾಜ್ಯ ಪ್ರಸಾರವನ್ನು ನೋಡುವುದು ಇವಿಷ್ಟೇ ಜೀವಿತದ ಮೋಹವನ್ನು ಹೆಚ್ಚಿಸಲು ಸಾಲವೆ? ಕೊನೆಗೂ ನಾವು ಸಾಯಬೇಕೆಂಬುದು ನಿಜವಾದರೇನಾಯಿತು? ಆತನಕ ಸೂರ್ಯೋದಯದ ದಿವ್ಯ ಶೋಭೆಯು, ತಾರಕೆಗಳ ತೇಜೋವೈಭವದ ಸೌಂದರ್ಯವನ್ನು ಅನುಭವಿಸಲು ದೊರೆಯುವುದಿಲ್ಲವೇ? ಸಾಲದೆ ಅದು?

ನನ್ನನ್ನು ನಿರ್ಮಿಸಿದ ನಿಸರ್ಗವು ಕೊನೆಗೂ ನನ್ನ ನಾಶ ಮಾಡುವುದು; ಆ ಅಧಿಕಾರ ಅದಕ್ಕಿದೆ. ನನ್ನ ಪಂಚೇಂದ್ರಿಯಗಳಲ್ಲಿ ಚೈತನ್ಯವನ್ನು ತುಂಬಿ ಸುಖ ಸಂವೇದನೆಯ ಅನುಭವವನ್ನು ಅದುವೆ ಕೊಟ್ಟಿತಲ್ಲವೆ? ಒಮ್ಮೆ ಕೊಟ್ಟದ್ದನ್ನು ಅದು ತಿರುಗಿ ತೆಗೆದುಕೊಂಡಲ್ಲಿ ನಾನೇಕೆ ಅಸಮಾಧಾನ ಪಡಬೇಕು? ಈ ಕೈಗಳು, ಈ ದೃಷ್ಟಿ,-ಶೃತಿ-ರಸನೆ! ಸೃಷ್ಟಿಯ ಸಕಲ ಹರ್ಷ ಸಂಪತ್ತಿಯನ್ನು ನನ್ನದಾಗಿ ಮಾಡಿಕೊಳ್ಳಲು ನಿಸರ್ಗವು ಎಷ್ಟೊಂದು ಸಾಧನಗಳನ್ನು ನನ್ನ ಸ್ವಾಧೀನ ಮಾಡಿದೆ!

ಪ್ರಿಯ ಮಿತ್ರನೇ, ಪ್ರಣಯದ ವಿಷಯದಲ್ಲಿ ಇಷ್ಟು ಉದ್ವಿಗ್ನನೇಕಾಗಿರುವೆ? ಪ್ರಣಯದ ಮೂಲದಲ್ಲಿ ಹೊಲಸು ದೇಹ ಧರ್ಮವಿರುವಂತೆ ಅದರಿಂದಲೇ ಎಷ್ಟೋ ರಮಣೀಯ ಭಾವನೆಗಳು ಉದಯವಾಗುವವೆಂಬುದನ್ನು ಮರೆಯಲಾಗದು. ಮರದ ಬೀಜವನ್ನು ಹೊಲಸು ಭೂಮಿಯಲ್ಲಿ ಬಿತ್ತಿದರೂ ಅದರ ನೆತ್ತಿಯಲ್ಲಿ ಪರಿಮಳಯುತ ಕೋಮಲ ಹೂಗಳಿವೆ. ಪ್ರಣಯವು ಇದೇ ಬಗೆಯದು. ಕಾಮಪ್ರೇರಣೆಯ ಮೂಲದಲ್ಲಿ ದೇಹವಾಸನೆಯ ಅವಸರವಿರಬಹು

ಪಾದರೂ ಆ ಪ್ರೇರಣೆಯ ಉಚ್ಚ ಪರಿಣಾಮವು ಭಕ್ತಿಯಲ್ಲಿಯೂ ಸೌಜನ್ಯದಲ್ಲಿಯೂ ಮೂಡು ತ್ತದೆ.

ವೈರಾಗ್ಯದಿಂದ ನಿರಾಶಾವಾದವನ್ನು ಪ್ರತಿ ಪಾದಿಸತೊಡಗುವ ಮಹಾಶಯನಿಗೆ ಲಗ್ನವಾಗಿ ಲ್ಲವೆಂದು ಕಾಣುತ್ತೆ; ಎಂದು ನಾನು ಮನಸ್ಸಿನಲ್ಲಿಯೇ ಅಂದುಕೊಳ್ಳುತ್ತೇನೆ. ಏಕೆಂದರೆ ವಿವಾಹಿತನಿಗೆ ರೋದನಗಾಯನ ಮಾಡಲು ಸಮಯವೇ ಇಲ್ಲ. ನಿರಾಶಾವಾದಿಗಳಲ್ಲಿ ಹೆಚ್ಚಿನವರ ವೈರಾಗ್ಯಕ್ಕೆ ಅವರು ತಮ್ಮ ದುರ್ಬಲ ಮನೋವೃತ್ತಿಗನುಸರಿಸಿ ಮಾಡಿಕೊಂಡಿರುವ ಸಿದ್ಧಾಂತವೇ ಕಾರಣ; ಎರಡನೆಯವರ ಅಸ್ತಿತ್ವದ ಅರಿವೇ ಅವರಿಗಿರುವುದಿಲ್ಲ; ಅವರ ವಿಚಾರ ಅಹಂಭಾವದಲ್ಲಿಯೇ ಸುತ್ತಾಡುತ್ತಿರುವುದು; ಅದರಿಂದ ತಮ್ಮ ಮನಸ್ಸಿನಲ್ಲಿ ಮೂಡಿದ ವೈರಾಗ್ಯವೇ ನಿಜವಾದ ವೇದಾಂತವೆಂದು ಅವರು ಭಾವಿಸುತ್ತಾರೆ. ನಾಲ್ಕು ಜನರೊಡನೆ ಸಹಕರಿಸುವ, ಅವರ ಸುಖದುಃಖದಲ್ಲಿ ಸಮರಸವಾಗುವ ಜನರು ಸಹಸಾ ವೈರಾಗ್ಯ ತಾಳುವುದಿಲ್ಲ. ತನ್ನ ಮಾತ್ರವಲ್ಲದೆ ಇತರ ಅನೇಕ ವ್ಯಕ್ತಿಗಳ ಜೀವನದೊಡನೆ ಬಾಳನ್ನು ಹೊಂದಿಸಿಕೊಂಡರೆ ಜೀವಿತದಲ್ಲಿ ಅರ್ಥ ಕಂಡುಬರುವುದು. ಆ ಇತರ ವ್ಯಕ್ತಿಗಳ ದುಃಖಭಾರವನ್ನು ಕಡಿಮೆ ಮಾಡುವಾಗ ಇಲ್ಲವೆ ಅವರ ಸುಖವನ್ನು ಹೆಚ್ಚಿಸಲಾದಾಗ ಆಗಿನ ಮಟ್ಟಿಗಾದರೂ ನಮ್ಮ ಜೀವನ ಸಾರ್ಥಕವಾಯಿತೆಂದೆನಿಸದಿರುವುದಿಲ್ಲ. ನಾಲ್ಕು ಜನರಲ್ಲಿ ಬೆರೆಯುವುದು ಕುಂದು ಎಂದು ಭಾವಿಸುವವರಿಗೆ, ತಮ್ಮ ಯೋಗ್ಯತೆಗನುರೂಪಳಾದ ಹೆಂಡತಿ ದೊರೆಯುವುದು ಅಸಾಧ್ಯವೆಂದು ಅವಿವಾಹಿತರಾಗಿರುವವರಿಗೆ ಆಯುಷ್ಯ ನಿಸ್ಸಾರವಾಗಿ ತೋರುವುದು. ಈ ಜೀವಿತದಲ್ಲಿ ಏನಾದರೂ ಅರ್ಥ ಇದೆಯೇ ಎಂದವರು ವಿಚಾರದಲ್ಲಿ ಬೀಳುವರು. ಆದರೆ ನಾಲ್ಕಾರು ಮಕ್ಕಳ ಪೋಷಕನನ್ನು ಕೇಳಿ, ಜೀವಿತದ ಅರ್ಥವೇನೆಂದು? ಅವನ 'ಕುಟುಂಬದ ಪಾಲನೆ ಪೋಷಣೆ' ಎಂದು ತಟ್ಟನೆ ಹೇಳುವನು. ಸ್ತ್ರೀ ಪುರುಷರ ಪರಸ್ಪರ ಆಕರ್ಷಣೆಯು ವಿಚಾರವಾಗಿ ಕಾಮವಿಕಾರವೆಂದರೆ ಹುಚ್ಚು ವ್ಯಾಪಾರವೆಂದು ಕಾಣುತ್ತದೆ. ಜೀವಿತ ಪ್ರವಾಹವು ಹರಿಯುವಂತೆ ಮಾಡಲು ಕಾಮವಿಕಾರವನ್ನು ಉಪಯೋಗಿಸಿದಲ್ಲಿ ಅದರಿಂದ ವ್ಯಕ್ತಿಯ ಆಯುಷ್ಯಕ್ಕೆ ಸಾರ್ಥಕತೆಯುಂಟಾಗುತ್ತದೆ.

ಈ ಪತ್ರ ಬರೆಯುತ್ತಿರುವಾಗ ನಾನು ಉಗಿ ಬಂಡಿಯಲ್ಲಿ ಕುಳಿತು ಪ್ರವಾಸ ಮಾಡುತ್ತಿರುವೆನು. ನನ್ನೆದುರಿನಲ್ಲಿ ಒಬ್ಬ ಹೆಂಗಸು ಕುಳಿತು ತನ್ನ ಮಗುವಿನೊಡನೆ ಆಡುತ್ತಿದ್ದಾಳೆ. ಆಟವಾಡುವುದರಲ್ಲಿ ನಗುವುದರಲ್ಲಿ ಎಳೆ ಮಗುವಿನ ತೊದಲ್ನುಡಿಗಳನ್ನು ಕೇಳುವುದರಲ್ಲಿ ಆಕೆ ಸುತ್ತಲಿನ ಜಗತ್ತನ್ನೇ ಮರೆತಿದ್ದಾಳೆ. ಜೀವಿತದ ಅರ್ಥವನ್ನು ಹುಡುಕುವ ಪಂಡಿತ ಮಹಾಶಯರು ಈ ಹೆಂಗಸಿಗಿಂತ ಜಾಣರೆಂದು ನಿಮಗೆನಿಸುವುದೇ?

ಅಂದ ಮೇಲೆ ಜೀವಿತದ ಸಾರ್ಥಕ್ಯವನ್ನು ಪಡೆಯಲು ಒಂದೇ ಮಾರ್ಗವಿದೆ ಎಂದಾಯಿತು. ತಮ್ಮ ವೈಯಕ್ತಿಕ ಜೀವಿತಕ್ಕಿಂತ ವ್ಯಾಪಕವಾದ ಜೀವಿತದೊಡನೆ ಬೆರೆತುಕೊಂಡು ಅದಕ್ಕಾಗಿ ರಾತ್ರಿಹಗಲು ಕಾಯಾ ವಾಚಾ ಮನಸಾ ಶ್ರಮಪಡಬೇಕು. ತಮಗಿಂತಲೂ ವ್ಯಾಪಕವಾದುದರಲ್ಲಿ ಅಂಶಭಾಗಿಗಳಾಗುವ ಯೋಗವು ದೊರೆಯುವುದರಿಂದ ಜೀವಿತವು ಧನ್ಯವೆಂದು ಭಾವಿಸಬೇಕು.

ಆತ್ಮಹತ್ಯೆಗೆ ಪ್ರವೃತ್ತನಾಗಿರುವ ಗೆಳೆಯಾ, ನನ್ನ ವಿಚಾರಗಳ ಸಂಭ್ರಮದಲ್ಲಿ ನಿನ್ನನ್ನು ಮರತೇ ಬಿಟ್ಟೆನಲ್ಲ! ಕ್ಷಮಿಸು. ನಾನೀವರೆಗೆ ಬರೆದಿರುವುದರಿಂದ ನಿನ್ನ ವೈರಾಗ್ಯಕ್ಕೆ ವೇದಾಂತ ಔಷಧವಲ್ಲ ಎಂದು ನಿನಗೆ ತಿಳಿದಿರಬಹುದು. ಹೆಂಡತಿ ಮಕ್ಕಳು ಮತ್ತು ಅವಿಶ್ರಾಂತ ಉದ್ಯೋಗಗಳೇ ಅದಕ್ಕೆ ಔಷಧ. ಒಬ್ಬ ಫ್ರೆಂಚ ಪಂಡಿತನು "ಇಷ್ಟೊಂದು ಕೆಲಸ ನನಗಿರದಿದ್ದರೆ ನಾನು ಆತ್ಮಹತ್ಯೆಮಾಡಿಕೊಳ್ಳುತ್ತಿದ್ದೆ" ಎಂದಿದ್ದಾನೆ. ಪುನಃ ಹೇಳುತ್ತೇನೆ, ಕೆಲಸವಿಲ್ಲದ ಜನರೇ ನಿರಾಶಾವಾದವನ್ನು ಹೂಡುತ್ತಾರೆ.

ಮಿತ್ರನೇ, ಆದ್ದರಿಂದ ನಿನ್ನ ವೈರಾಗ್ಯವನ್ನು

ಮುಗಿಸು. ಕಾರಖಾನೆಯಲ್ಲಿ ಕೂಲಿ ಮಾಡಿದರೂ ಚಿಂತಿಲ್ಲ, ಉದ್ಯೋಗವನ್ನು ಕೈಗೊಳ್ಳು. ಇಲ್ಲದಿದ್ದರೆ ರೈತನ ಬಳಿಗೆ ನಡೆದು ಎರಡು ಹೊತ್ತಿನ ಊಟವನ್ನು ಸಂಬಳವೆಂದು ನಿಶ್ಚಯಿಸಿ ಹೊಲದ ಕೆಲಸ ಒಪ್ಪಿಕೊ. ಆಗ ನೋಡುವಿಯಂತೆ ನಿನ್ನ ಆತ್ಮಹತ್ಯೆಯ ವಿಚಾರ ಎಲ್ಲಿಗೆ ಬರುವುದೆಂಬುದನ್ನು !

ಕೊನೆಯದಾಗಿ, ನಿನ್ನನ್ನು ಕಂಡು ಒಂದು ಗಳಿಗೆ ಮಾತನಾಡಲು ಅವಕಾಶವಾದರೆ ಒಳ್ಳೆಯದಾದೀತು. ಆಗ ನಾನು ವಾಸಿಸುವ ಮನೆಯ ಪಕ್ಕದಲ್ಲಿರುವ ಸುಂದರವಾದ ತೋಟವನ್ನು ನಿನಗೆ ತೋರಿಸುವೆ. ಆ ತೋಟವೇ ಆತ್ಮಹತ್ಯೆಯನ್ನು ಮಾಡುವುದು ಮೂರ್ಖತನವೆಂದು ನಿನಗೆ ತಿಳಿಯ ಹೇಳೀತು. ಗೆಳೆಯಾ, ನಾನೊಬ್ಬ ಆಶಾವಾದಿ. ನಿನ್ನ ಬಳಿ ಇರುವ ಸಿದ್ಧಾಂತ ಸಾಕ್ಷಿಗಳನ್ನು ಮುಂದಿಡು. ಈ ಜಗತ್ತಿನ ಧಿಕ್ಕಾರವನ್ನು ಮನಃಪೂರ್ತಿಯಾಗಿ ಮಾಡು. ನಿನ್ನ ಹೇಳಿಕೆಗಳಿಗೆಲ್ಲ "ಹುಂ" ಎಂದು ನಾನೆನ್ನುವೆನು. ಆದರೆ ಕೊನೆಯ ನಿರ್ಣಯಕ್ಕೆ "ಊಹುಂ" ಎನ್ನುವೆನು. ನಮ್ಮ ವಾದ ಮುಗಿದ ನಂತರ ನನ್ನ ಬಡತನದ ರೊಟ್ಟಿ ಪಲ್ಯವನ್ನು ಇಬ್ಬರೂ ಕೂಡಿ ತಿನ್ನೋಣ. ಆಗ ನಮ್ಮ ಸುತ್ತಲೂ ಆಡುತ್ತಿರುವ ನನ್ನ ಮಕ್ಕಳ ತೊದಲ್ನುಡಿಗಳನ್ನು ಕೇಳಿದೊಡೆ ನೆಂಪೀ ನಮಗಿಬ್ಬರಿಗೂ "ಓ! ನಾವಿನ್ನೂ ತರುಣರಿದ್ದೇವೆ. ಇನ್ನೂ ಎಷ್ಟೋ ವರ್ಷಗಳವರೆಗೆ ಈ ಜೀವನದ ಆನಂದವನ್ನು ಸೂರೆಗೊಳ್ಳಲಿದ್ದೇವೆ" ಎಂದು ಖಂಡಿತವಾಗಿಯೂ ಅನಿಸುವುದು."

# ಮುಸೋಲಿನಿಯ ಅಂತರಂಗ ಜೀವನ

**ಇಟಲಿಯ ಹಿಂದಿನ ಸರ್ವಾಧಿಕಾರಿಯ ಬಾಳಿನ ಒಳನೋಟಗಳು**

ಸರ್ವಾಧಿಕಾರಿಗಳು ಅತಿಮಾನುಷ ಜೀವಿಗಳೆಂಬ ಜನರ ಭಾವನೆ ಎಷ್ಟು ಭ್ರಾಮಕವಾದುದು! ಮುಸೋಲಿನಿಯ ಅಂತರಂಗ ಜೀವನ ನೋಡಿದರೆ ಅದು ಉದಾತ್ತತೆಯಿಂದ ಬಹು ದೂರ ಪತ್ತೆನ್ನಿಸುತ್ತದೆ. ಅವನ ಅನುದಾತ್ತ ಜೀವನ ಮತ್ತು ಅನುದಾತ್ತ ಮರಣದಲ್ಲಿ ಒಬ್ಬ ಹೆಂಗಸಿನ ನಿಷ್ಕಲ್ಮಷ ಪ್ರೇಮವೊಂದೇ ಉದಾತ್ತ ಭಾಗವಾಗಿದೆ. ಆವಳು ಅವನಿಗಾಗಿ ಪ್ರಾಣ ತೆತ್ತು ಅಮರಳಾಗಿದ್ದಾಳೆ.



ಪಾಲೋ ಮೊನೆಲಿಯ ಇಟಾಲಿಯನ್ ಪುಸ್ತಕದಿಂದ

# ಮುಸೋಲಿನಿಯ ಅಂತರಂಗ ಜೀವನ

ತಾಯಿ ಮಾಸ್ತರಿಣಿ, ತಂದೆ ಕಮ್ಮಾರ. ತಂದೆ ಸ್ಥಳೀಯ ಸಮಾಜವಾದಿ ಪತ್ರಿಕೆಗಳಲ್ಲಿ ಲೇಖ ಬರೆಯುತ್ತಿದ್ದುದೂ ಉಂಟು. ಬಡತನದ ಸಂಸಾರ. ಚಿಕ್ಕ ಮನೆಯಲ್ಲಿ ಒಂದೆಡೆ ತಾಯಿಯ ಶಾಲೆ, ಇನ್ನೊಂದೆಡೆ ತಂದೆಯ ಕಮ್ಮಾರ ಶಾಲೆ. ಉಳಿದೆರಡು ಕೋಣೆಗಳಲ್ಲಿ ಊಟ, ನಿದ್ದೆ, ಸ್ನಾನ ಎಲ್ಲವೂ ನಡೆಯಬೇಕು. ಬಡವರಾದರೂ ಇವರ ಸಂಬಂಧಿಕರು ಶ್ರೀಮಂತ ರೈತರು. ತಾಯಿಯ ನಯ ನಾಜೂಕಾಗಲಿ, ತಂದೆಯ ಉದ್ದೇಶರಹಿತ ಚಟುವಟಿಕೆಗಳಾಗಲಿ ಅವರಿಗೆ ಅರ್ಥವಾಗುತ್ತಿರಲಿಲ್ಲ.

ಇಂಥ ಬಡ ತಂದೆ-ತಾಯಿಗಳ ಹೊಟ್ಟೆಯಲ್ಲಿ ಬೆನಿಟೊ ಮುಸೋಲಿನಿ ೧೮೮೩ ನೇ ಜುಲೈ ೨೯ ನೇ ದಿನಾಂಕ ಹುಟ್ಟಿದ. ಇಟಲಿಯ ಡೋರಿಯಾ ಎಂಬ ಹಳ್ಳಿ ಇವನು ಹುಟ್ಟಿದ ಊರು. ಚಿಕ್ಕಂದಿನಲ್ಲಿ ಅನುಭವಿಸಿದ ಕಷ್ಟ-ನಿಷ್ಠುರಗಳೇ ಮುಸೋಲಿನಿಯ ಮುಂದಿನ ಜೀವನದ ವಿಕ್ಷಿಪ್ತತೆಗೆ ಕಾರಣವಾಗಿರಬೇಕು.

## ಸರ್ವಾಧಿಕಾರಿತ್ವದ ಬೀಜಗಳು

ಫಯೆಂಝಾ ಶಾಲೆಯಲ್ಲಿ ಕಠೋರ ಶಿಸ್ತು ಇದ್ದಿತು. ಅಲ್ಲಿ ಕಲಿಯುತ್ತಿದ್ದಾಗ ತನಗಿಂತಲೂ ಚೆನ್ನಾಗಿ ನಡೆಸಿಕೊಳ್ಳಲ್ಪಡುತ್ತಿದ್ದ ಶ್ರೀಮಂತ ಮಕ್ಕಳನ್ನು ಕಂಡು ಅಸೂಯೆಪಡಲು, ದ್ವೇಷಿಸಲು ಮುಸೋಲಿನಿ ಕಲಿತ. ಚೆನ್ನಾಗಿ ಕಥೆ ಹೇಳುತ್ತಿದ್ದ, ಚಾಡಿಖೋರನಾಗಿದ್ದ ಒಬ್ಬ ಹುಡುಗನ ಗೆಳೆತನವನ್ನು ಮಾತ್ರ ಮುಸೋಲಿನಿ ಕಟ್ಟಿಕೊಂಡಿದ್ದ. ಆ ಹುಡುಗನಾದರೋ ತನ್ನ ತಲೆ ಕಲ್ಲಿನದು ಎಂದು ಜಂಭ ಕೊಚ್ಚಿಕೊಳ್ಳುತ್ತಿದ್ದ. ಇಟ್ಟಂಗಿಯೊಂದರಿಂದ ಆ ಹುಡುಗನ ತಲೆಗೆ ಹೊಡೆದು ಮುಸೋಲಿನಿ ಸಂತೋಷಪಟ್ಟುಕೊಳ್ಳುತ್ತಿದ್ದ.

ತಮ್ಮಿಬ್ಬರಲ್ಲಿ ಯಾರೇ ಆಗಲಿ, ಮುಂದೆ ಒಳ್ಳೆಯ ಸ್ಥಿತಿಗೆ ಬಂದರೆ ಒಬ್ಬರಿಗೊಬ್ಬರು ಸಹಾಯ ಮಾಡಬೇಕು, ಎಂದು ಈ ಗೆಳೆಯರು ಒಪ್ಪಂದ ಮಾಡಿಕೊಂಡಿದ್ದರು. ಮುಸೋಲಿನಿ ಸರಕಾರದ ಪ್ರಮುಖನಾದಾಗ ತನ್ನ ಬಾಲ್ಯದ ಈ ಗೆಳೆಯನಿಗೆ ಧನಸಹಾಯ ಮಾಡಿದ್ದಲ್ಲದೆ ಒಂದು ನೌಕರಿಯನ್ನೂ ಕೊಡಿಸಿದ.

ಶಿಸ್ತು ನಿಯಮಗಳನ್ನು ಮೆಚ್ಚದಿದ್ದರೂ ಮುಸೋಲಿನಿ ಮಹತ್ವಾಕಾಂಕ್ಷಿಯಾಗಿದ್ದ. ತಾನು ದೊಡ್ಡವನಾಗಿ ಮೆರೆಯಬೇಕು ಎನ್ನುತ್ತಿದ್ದ. ರಜಾ ದಿನಗಳಲ್ಲಿ ಹುಡುಗಿಯರ ಮೇಲೆ ತನ್ನ ಪ್ರಭಾವ ಬೀರಲೆಂದು ಆದಷ್ಟು ಚೆನ್ನಾಗಿ ಉಡುಪು ಧರಿಸಲು ಪ್ರಯತ್ನಿಸುತ್ತಿದ್ದ. ರಾಜಕೀಯ ಕಾರಣಗಳಿಗಾಗಿ ತಾನು ಬಡವರಲ್ಲಿ ಹುಟ್ಟಿದವ ಎಂದು ಜಂಭ ಕೊಚ್ಚಿಕೊಳ್ಳುವ ಪ್ರಸಂಗ ಬರುವವರೆಗೂ ಮುಸೋಲಿನಿ ಮಧ್ಯಮ ವರ್ಗದ ಮನೋಭಾವನೆಯವನೇ ಆಗಿದ್ದ. ಗೌರವಸ್ಥ ಶಾಲಾ ಶಿಕ್ಷಕನಂತೆ ಪೋಷಾಕು ಧರಿಸುತ್ತಿದ್ದ.

ಚಿಕ್ಕಂದಿನಲ್ಲಿಯೇ ಈತನಿಗೆ ಅಧಿಕಾರದ ಅಸ್ಪಷ್ಟ ಕಲ್ಪನೆ ಇದ್ದಿತು. ಒಮ್ಮೆಯಂತೂ ತಾಯಿಯೆದುರು "ನೋಡುತ್ತಿರು, ಒಂದಿಲ್ಲೊಂದು ದಿನ ಇಡೀ ಜಗತ್ತನ್ನೇ ನಡುಗಿಸುತ್ತೇನೆ," ಎಂದು ಆಕೆಯನ್ನು ಚಕಿತಗೊಳಿಸಿದ್ದ. "ನಾನು ಆಕ್ರಮಣಶೀಲ ಪ್ರವೃತ್ತಿಯ, ಅಶಾಂತ ಪ್ರಕೃತಿಯ, ಘಟಿಂಗ. ನಾನು ಧೈರ್ಯಶಾಲಿಯಾದ ಕಳ್ಳ," ಎಂದು ಮುಸೋಲಿನಿ ತನ್ನನ್ನು ವರ್ಣಿಸಿಕೊಳ್ಳುತ್ತಿದ್ದ.

## ಹೆಣ್ಣು ಮತ್ತು ಹಿಂಸೆ

ಹದಿನಾರನೆ ವಯಸ್ಸಿನಲ್ಲಿ ಶಿಕ್ಷಕರ ಟ್ರೇನಿಂಗ ಕಾಲೇಜ ಸೇರಿದಾಗಲೂ ಮುಸೋಲಿನಿ ಶಿಸ್ತನ್ನರಿಯದ ತುಂಟನೇಆಗಿದ್ದ. ಆಗಲೇ ಅವನ ಪ್ರಣಯ ಜೀವನವೂ ಆರಂಭವಾಯಿತು. ಸಾಯಂಕಾಲದಲ್ಲಿ ಅಗ್ಗದ ನೃತ್ಯಮಂದಿರಗಳಿಗೆ ಹೋಗುವದು, ಕಂಡಕಂಡ ಹುಡುಗಿಯರೊಡನೆ ಲಲ್ಲೆಯಾಡುವದು ಅವನ ಚರ್ಯೆಯಾಗಿತ್ತು. ಆದರೆ ಆತನಲ್ಲಿ

ಕಲಿಯಬೇಕೆಂಬ ಹಂಬಲವಿದ್ದಿತು. ಕಷ್ಟಪಟ್ಟು ಓದುತ್ತಿದ್ದುದರಿಂದ ವರ್ಗದಲ್ಲಿ ಅತ್ಯುತ್ತಮ ವಿದ್ಯಾರ್ಥಿ ಎಂದೆನಿಸಿಕೊಂಡಿದ್ದ. ಕೈಗೆ ಸಿಕ್ಕ ಪುಸ್ತಕ-ಪತ್ರಿಕೆಗಳನ್ನೂ ಓದುತ್ತಿದ್ದ. ರಜಾ ದಿನಗಳಲ್ಲೂ ಹೆಚ್ಚಿನ ಸಮಯವನ್ನು ಓದುವದ ರಲ್ಲೇ ಕಳೆಯುತ್ತಿದ್ದ.

ಅವನಲ್ಲಾಗಲೇ ಕಾಮುಕ ವೃತ್ತಿ ತಲೆದೋರಿತ್ತು. ತನ್ನ ಜೀವನಚರಿತ್ರೆಯಲ್ಲಿ ವರ್ಜೀನಿಯ ಎಂಬ ಹುಡುಗಿಯನ್ನು ತಾನು ಬಲಾತ್ಕಾರದಿಂದ ಕೆಡಿಸಿದ್ದನ್ನು ಆತ ಬರೆದಿದ್ದಾನೆ. ಮದುವೆಯಾಗುವೆನೆಂಬ ವಚನವಿತ್ತು ಈ ಸಮಯದಲ್ಲಿ ಆತ ಅನೇಕ ಹುಡುಗಿಯರನ್ನು ಕೆಡಿಸಿದ. ಗಾಲಟಿಯುರಿ ಎಂಬ ಹಳ್ಳಿ ಶಾಲೆಯಲ್ಲಿ ತಾತ್ಪೂರ್ತಿಕ ಶಿಕ್ಷಕನೆಂದು ತನ್ನ ನೇಮಕವಾದಾಗ ತಾನು ಈ ಹುಡುಗಿಯರನ್ನೆಲ್ಲ ಅವರ ಪಾಡಿಗೆ ಬಿಟ್ಟು ಕೊಟ್ಟು ಹೋದೆ ಎಂದಾತ ಹೇಳಿದ್ದಾನೆ.

ಶಿಕ್ಷಕನಾದ ಮೇಲೆ ಆತ ಓರ್ವ ವಿವಾಹಿತ ಮಹಿಳೆಯೊಂದಿಗೆ ಪ್ರಣಯದಾಟ ನಡೆಸಿದ. ಊರಲ್ಲೆಲ್ಲ ಸುದ್ದಿ ಹರಡಿ ಆ ತರುಣಿಯ ಗಂಡ ಅವಳನ್ನು ಮನೆಬಿಟ್ಟು ಹೊರಹಾಕುವಂತೆ ತನ್ನ ತಂದೆ-ತಾಯಿಗಳಿಗೆ ಪತ್ರ ಬರೆದ. ಆತ ಸೈನಿಕನಾಗಿ ಪರಸ್ಥಳದಲ್ಲಿದ್ದುದರಿಂದ ಮುಸೋಲಿನಿಯ ಆಟಕ್ಕೆ ವ್ಯತ್ಯಯ ಬಂದಿರಲಿಲ್ಲ. "ಈ ತರುಣಿಯನ್ನು ನನ್ನ ಮನಬಂದಂತೆ ನಡೆಸಿಕೊಂಡೆ. ಬಯ್ದು ಹೊಡೆದು ಮಾಡಿದೆ. ಒಮ್ಮೆಯಂತೂ ನನ್ನ ಚಾಕುವನ್ನು ಹಿಡಿಕೆಯವರೆಗೂ ಅವಳ ದೇಹದಲ್ಲಿ ಚುಚ್ಚಿದೆ!" ಎಂದು ಆತನೇ ಬರೆದಿಟ್ಟಿದ್ದಾನೆ.

ಊರೊಳಗಿನ ಪುಂಡರನ್ನು ಕಟ್ಟಿಕೊಂಡು ಹಳ್ಳಿಯ ನೃತ್ಯಮಂದಿರಗಳಲ್ಲಿ ನುಗ್ಗಿ ಧಾಂದಲೆ ಹಾಕುತ್ತಿದ್ದ. ಹೊಡೆದಾಟ-ಬಡಿದಾಟಗಳನ್ನು ಎಬ್ಬಿಸುತ್ತಿದ್ದ.

೧೯೦೨ರಲ್ಲಿ ಅವನ ಕಲಸದ ಅವಧಿ ಮುಗಿಯಲು ಮುಸೋಲಿನಿ ಸ್ವಿಝರ್ಲಂಡಕ್ಕೆ ತೆರಳಿ [illegible] ೧೯೦೪ರ ವರೆಗೂ ಇದ್ದ.

ಸ್ವಿಝರ್ಲಂಡದಲ್ಲಿ ನಾನಾ ಬಗೆಯ ಚಿಲ್ಲರೆ ಕೆಲಸಗಳನ್ನು ಆತ ಮಾಡಿದ. ಹಸಿವಿನ ಸಂಕಟವನ್ನು ಅನುಭವಿಸಿದ. ಇರಲು ಸ್ಥಳವಿಲ್ಲದೆ ಅಲೆದ. ಮುಂದೆ ಇವನ್ನೆಲ್ಲ ಮುಸೋಲಿನಿ ಸಂದರ್ಭಾನುಸಾರ ನಾಟಕೀಯವಾಗಿ ವರ್ಣಿಸುತ್ತಿದ್ದ. ಈ ಸಮಯದಲ್ಲಿ ಆತ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯತೊಡಗಿದ್ದ. ಅವನಿಗೆ ಒಂದು ಕೂಲಿಕಾರ ಸಂಘದ ಪ್ರಚಾರಕ ಮತ್ತು ಸಂಘಟಕ ಎಂದು ಕೆಲಸವೂ ಸಿಕ್ಕಿತ್ತು. ನಿಜವಾಗಿ ಆತನಿಗೆ ಅಂಥ ದೀರ್ಘಕಾಲದ ಕ್ಲೇಶವೇನೂ ಬಂದಿರಲಿಲ್ಲ. ಆದರೆ ತನ್ನ ಕಷ್ಟಜೀವನವನ್ನು ಹಿಗ್ಗಿಸಿ ವರ್ಣಿಸುವ ಚಟ ಅವನಿಗಿತ್ತು.

ಜಿನೇವಾದಲ್ಲಿ ೧೯೦೪ ರಲ್ಲಿ ಈತನನ್ನು ಭೆಟ್ಟಿಯಾದ ಎಂಜಲಿಕಾ ಬಾಲ್ಬನಾಫ್ ಎಂಬ ಮಹಿಳೆ ಈತನನ್ನು, "ಈತ ವಿಪರೀತ ಸೂಕ್ಷ್ಮವೇದಿ, ಸುಲಭದಲ್ಲಿ ಉದ್ವೇಗಗೊಳ್ಳುವವ, ಪಾಷಂಡ, ಹೊಲಸು ಅರಿವೆಯ ಅಸ್ಥಿರ ಚಿತ್ತದ ಯುವಕ, ಯಾವ ವಿಧದ್ದೇ ಆಗಲಿ, ತಾರತಮ್ಯ ಎಂಬ ಶಬ್ದಕ್ಕೇ ಕಡುವಿರೋಧಿಯಾಗಿದ್ದರೂ ತಾನು ಮಾತ್ರ ಜನಸಾಮಾನ್ಯನಲ್ಲ ಎಂದು ಭಾವಿಸುತ್ತಿರುವವ. ತಾನು ಪ್ರಚಂಡ ಬುದ್ಧಿಶಾಲಿ, ಧುರೀಣ ಎಂದು ನಂಬಿಕೊಂಡಿರುವವ" ಎಂದು ವರ್ಣಿಸಿದ್ದಾಳೆ.

೧೯೦೪ ರಲ್ಲಿ ಸ್ವಿಝರ್ಲಂಡದಿಂದ ಮರಳಿ ಬಂದ ಬಳಿಕ ಎರಡು ವರ್ಷಗಳ ವರೆಗೆ ಈತ ಸೈನ್ಯದಲ್ಲಿ ದುಡಿದ. ಈತ "ಕಮ್ಯುನಿಸ್ಟ" ಎಂಬ ವರದಿ ಸೈನ್ಯ ಕಚೇರಿಗೆ ಬಂದಿತ್ತು. ಆದರೆ ಈತ ಈ ಅವಧಿಯಲ್ಲಿ ಅತಿ ಶಿಸ್ತಿನಿಂದ ಮನಮುಟ್ಟಿ ಕೆಲಸ ಮಾಡಿದ.

## ರಾಕ್ಷಸ—ಶಿಕ್ಷಕ

೧೯೦೬ ರಲ್ಲಿ ಸೈನ್ಯ ಶಾಖೆಯಿಂದ ಹೊರಬಿದ್ದ ಬಳಿಕ ಈತ ಪ್ರೆಡೆಪ್ಪಿಯಾಕ್ಕೆ ಬಂದು ತನ್ನ ಸಮಾಜವಾದಿ ಮಿತ್ರರ ಗುಂಪಿನಲ್ಲಿ ಸೇರಿಕೊಂಡ. ಆಗ ಓರ್ವ ಶಾಲಾಶಿಕ್ಷಿಕೆಯೊಡನೆ ಅವನ ಪ್ರಣಯ ವ್ಯವಹಾರ ನಡೆಯಿತು. ಈತನಿಗೆ ಶಾಲಾಶಿಕ್ಷಿಕೆಯರೆಂದರೆ ಯಾವಾಗಲೂ ಹೆಚ್ಚಿನ ಆಕರ್ಷಣೆಯೆನಿಸುತ್ತಿತ್ತು.

ಆದರೆ ತುಸು ದಿನಗಳಲ್ಲೇ ಮುಸೋಲಿನಿ

ಟಾಲ್ಮೆಝೋದಲ್ಲಿ ಶಿಕ್ಷಕನ ಕೆಲಸ ಸಂಪಾದಿಸಿ ಕೊಂಡ. ಅಲ್ಲಿ ಈ ಕೆಲಸ ತನಗೆ ಹೇಳಿದ್ದಲ್ಲ ಎಂಬ ಅನುಭವ ಈತನಿಗೆ ಬಂತು. ಮುಸೋಲಿನಿ ಈ ಮಾತನ್ನು ತನ್ನ ಜೀವನಚರಿತ್ರೆಯಲ್ಲಿ ಬರೆದಿದ್ದಾನೆ. ತಾನೊಮ್ಮೆ ಶಿಕ್ಷಕನಾಗಿದ್ದೆ ಎಂದು ಈತ ಎಲ್ಲಿಯೂ ಹೆಮ್ಮೆಯ ಮಾತನ್ನು ಹೇಳಿರು ವದಿಲ್ಲ. ಹುಡುಗರನ್ನು ಹಿಡಿತದಲ್ಲಿಟ್ಟುಕೊಳ್ಳಲು ಅವನಿಂದಾಗುತ್ತಿರಲಿಲ್ಲ.

ಟಾಲ್ಮೆಝೋದಲ್ಲಿದ್ದಾಗ ವಿಪರೀತ ಕುಡಿತ, ಪ್ರಣಯಚೇಷ್ಟೆ ಮೊದಲಾದ ಅವ್ಯಾಪಾರದಲ್ಲಿ ಮಗ್ನನಾದ ಮುಸೋಲಿನಿ ಎಷ್ಟೋ ಸ್ತ್ರೀಯರ ಗಂಡಂದಿರೊಡನೆ ಹೊಡೆದಾಡಿದ್ದೂ ಉಂಟು. ಉಂಡಾಡಿಯಂತೆ ತಲೆಗೆ ಹ್ಯಾಟು ಕೂಡ ಹಾಕಿ ಕೊಳ್ಳದೆ ಅಲೆಯುವದು, ನೋಡಲು ಚೆನ್ನಾ ಗಿರುವ ಯಾವ ಸ್ತ್ರೀಯೇ ಸಿಕ್ಕಲಿ, ಅವಳೊಡನೆ ಪ್ರೇಮವ್ಯವಹಾರಕ್ಕೆ ಮುಂದಾಗುವದು ಇವನ ದಿನಚರಿಯಾಗಿತ್ತು. ಈತನನ್ನು ಈತನ ಶಾಲೆಯ ಹುಡುಗರು "ರಾಕ್ಷಸ" ಎಂದು ಕರೆಯುತ್ತಿ ದ್ದರು.

ತನ್ನ ಆತ್ಮಚರಿತ್ರೆಯಲ್ಲಿ ಟಾಲ್ಮೆಝೋದಲ್ಲಿ ಕಳೆದ ಒಂದು ವರ್ಷ ತನ್ನ ನೈತಿಕ ಅಧಃಪತ ನದ ಕಾಲ ಎಂದು ಮುಸೋಲಿನಿ ಹೇಳಿದ್ದಾನೆ.

೧೯೦೯ ರಲ್ಲಿ ಮುಸೋಲಿನಿ ಮತ್ತೆ ಮನೆಗೆ ಬಂದ. ತಂದೆ ನಡೆಸುತ್ತಿದ್ದ ಖಾನಾವಳಿಯಲ್ಲಿ ಸಹಾಯ ಮಾಡತೊಡಗಿದ. ಗ್ಯಾಡಿ ಎಂಬ ವಿಧವೆ ಈ ಖಾನಾವಳಿಯಲ್ಲಿ ಸಹಾಯಕಳಾಗಿ ದುಡಿಯುತ್ತಿದ್ದಳು. ಅವಳಿಗೆ ಅಗಸ್ಟಾ, ಪಿನಾ ಮತ್ತು ರಾಚಿಲಾ ಎಂಬ ಮೂವರು ಹುಡುಗಿಯ ರಿದ್ದರು.

ಮುಸೋಲಿನಿ ಮೊದಲು ಅಗಸ್ಟಾಳನ್ನು ಅತಿಯಾಗಿ ಪ್ರೀತಿಸತೊಡಗಿದ. ತಂದೆಗೆ ಸಹಾಯ ಮಾಡಿ ಉಳಿದ ಸಮಯದಲ್ಲಿ ವಾಚ ನಾಲಯಕ್ಕೆ ಹೋಗಿ ಓದುತ್ತಿದ್ದ. ಅರ್ಧ ರಾತ್ರಿಯ ವರೆಗೂ ಬರೆಯುತ್ತ ಕೂಡ್ರು ತಿದ್ದ.

ಆದರೆ ಅಗಸ್ಟಾ ಇವನನ್ನು ಮೆಚ್ಚಿರಲಿಲ್ಲ. ಸಮಾಜವಾದಿ ಚಟುವಟಿಕೆಗಳಿಗಾಗಿ ಹಲವಾರು ಸಲ ಜೇಲು ಕಂಡು ಬಂದಿದ್ದ ಮುಸೋಲಿನಿ ಯನ್ನು ಆಕೆ "ಜೇಲು ಹಕ್ಕಿ" ಎಂದು ಜರೆದು ತಿರಸ್ಕರಿಸಿದಳು. ಕೊನೆಗೆ ಮುಸೋಲಿನಿಯ ಕಾಟ ದಿಂದ ಮುಕ್ತಳಾಗಲು ಆಕೆ ಸ್ಮಶಾನಭೂಮಿ ಯಲ್ಲಿ ಗೋರಿಗಳನ್ನಗೆಯುವ ಕೆಲಸ ಮಾಡುತ್ತಿದ್ದ ಒರ್ವ ಯುವಕನನ್ನು ಲಗ್ನವಾದಳು.

ಅಗಸ್ಟಾಳ ತಿರಸ್ಕಾರದಿಂದ ಅವಮಾನಗೊಂಡು ದುಃಖಿತನಾದ ಮುಸೋಲಿನಿ ತನ್ನ ದೃಷ್ಟಿಯನ್ನು ಅವಳ ತಂಗಿ ರಾಚಿಲಾಳ ಕಡೆಗೆ ತಿರುಗಿಸಿದ. ಅವಳಿಗಿನ್ನೂ ಆಗ ಹದಿನಾರು ವರ್ಷಗಳಾಗಿ ದ್ದವು.

ರಾಚಿಲಾ ಮುಸೋಲಿನಿಗೆ ಮನಸೋತಳಾದರೂ ಮುಸೋಲಿನಿಯ ತಂದೆಯಾಗಲಿ, ರಾಚಿಲಾಳ ತಾಯಿಯಾಗಲಿ ಅವರ ಲಗ್ನಕ್ಕೆ ಸರ್ವಥಾ ಒಪ್ಪಲಿಲ್ಲ. ಒಮ್ಮೆ ರಾಚಿಲಾಳನ್ನು ನಾಟಕಕ್ಕೆ ಕರೆದೊಯ್ದು ತಿರುಗಿ ಮನೆಗೆ ಬಂದ ಬಳಿಕ ಮುಸೋಲಿನಿ ತನ್ನ ತಂದೆ ಮತ್ತು ಅವಳ ತಾಯಿ ಯೆದುರು ಒಂದು ಪಿಸ್ತೂಲನ್ನು ತೋರಿಸಿ "ನೀವು ಅವಳನ್ನು ನನಗೆ ಕೊಡದಿದ್ದರೆ ಇದರಲ್ಲಿ ಆರು ಗುಂಡುಗಳಿವೆ. ಅವಳಿಗೆ ಒಂದು, ನನಗೆ ಐದು" ಎಂದು ಕೂಗಾಡಿದ.

ನಿರುಪಾಯರಾಗಿ ಅವರು ಈ ಲಗ್ನಕ್ಕೆ ಸಮ್ಮತಿ ಯಿತ್ತರು. ಮುಸೋಲಿನಿ ರಾಚಿಲಾಳೊಡನೆ ಬೇರೆ ಬಿಡಾರ ಹೂಡಿದ. "ನಾವು ಧಾರ್ಮಿಕ ಅಥವಾ ನಾಗರಿಕ ಕಾಯದೆಯ ಬಂಧನವಿಲ್ಲದೆ ಒಟ್ಟಿಗೆ ವಾಸಮಾಡಲು ತೆರಳಿದೆವು" ಎಂದು ಮುಸೋಲಿನಿ ತನ್ನ ಆತ್ಮಚರಿತ್ರೆಯಲ್ಲಿ ಬರೆ ದಿದ್ದಾನೆ.

೧೯೧೦ ರಲ್ಲಿ ಮುಸೋಲಿನಿಯ ಮೊದಲನೆಯ ಮಗು ಎಡಾ ಹುಟ್ಟಿದಳು. ೧೯೧೪ ರಲ್ಲಿ ಮೊದಲ ನೆಯ ಮಹಾಯುದ್ಧ ಪ್ರಾರಂಭವಾದಾಗ ಮುಸೋ ಲಿನಿ ಸೈನ್ಯ ಸೇರಬೇಕಾಯಿತು. ೧೮ ತಿಂಗಳು ಯುದ್ಧ ಭೂಮಿಯಲ್ಲಿ ಆತ ಕಳೆದ. ೧೯೧೫ ರಲ್ಲಿ ಒಮ್ಮೆ ರಜೆ ಪಡೆದು ಬಂದಿದ್ದಾಗ ಆತ ರಾಚಿಲಾ ಳೊಡನೆ ರಜಿಸ್ಟರ ಲಗ್ನಮಾಡಿಕೊಂಡ. ಮುಂದೆ ಕೆಲ ತಿಂಗಳಲ್ಲಿ ಆತನ ಎರಡನೇ ಮಗು ವಿಟೋ ರಿಯೊ ಹುಟ್ಟಿದ.

## ದರ್ಪದ ಮೂರ್ತಿ

೧೯೧೭ ರಲ್ಲಿ ವಿಪರೀತ ಗಾಯಗಳಾದುದರಿಂದ ಸೈನ್ಯವನ್ನು ಬಿಟ್ಟು ಮುಸೋಲಿನಿ ಮತ್ತೆ ನಾಗರಿಕ ಜೀವನದಲ್ಲಿ ಕಾಲಿಡುವಂತಾಯಿತು. "ಇಲ್ ಪೊಪೊಲೆ ಡಿ ಇಟಾಲಿಯಾ" ಪತ್ರಿಕೆಯಲ್ಲಿ ಸಂಪಾದಕನಾಗಿ ಕೆಲಸ ಮಾಡಲು ಪ್ರಾರಂಭಿಸಿದ. ೧೯೨೧ ರಲ್ಲಿ ಬೇರೆ ೨೨ ಫ್ಯಾಸಿಸ್ಟರೊಡನೆ ಈತ "ಚೇಂಬರ್ ಆಫ್ ಡಿಪ್ಯೂಟೀಸ್" ಸಭೆಗೆ ಆರಿಸಿಬಂದ. ೧೯೨೨ ರ ಅಕ್ಟೋಬರ ೩೰ ರಂದು ಮುಖ್ಯಮಂತ್ರಿಯಾದ.

ತನ್ನ ಆಳಿಕೆಯ ಮೊದಲಿನ ವರ್ಷಗಳಲ್ಲಿ ಮುಸೋಲಿನಿ ಏಕಾಂಗಿಯಾಗಿ ವಾಸಿಸುತ್ತಿದ್ದ. ರಾಚಿಲಾಳ ಸಂಕೋಚಪ್ರಕೃತಿ ಅವನಿಗೆ ಅನುಕೂಲವೇ ಆಯಿತು. ಇನ್ನೂ ಒಕ್ಕಲಿಗರಂತೆಯೆ ಬಟ್ಟೆ ತೊಟ್ಟು ವರ್ತಿಸುತ್ತಿದ್ದ ಸಹಚಾರಿಣಿ ಆಗ ಮುಸೋಲಿನಿಗೆ ಇಷ್ಟವಿರಲಿಲ್ಲ. ಅಲ್ಲದೆ ಅವನು ಕೂಡ ಆಗ ತನ್ನ ಪರಿಸ್ಥಿತಿಗೆ ಹೊಂದಿಕೊಳ್ಳಲು ಹೆಣಗುತ್ತಿದ್ದ.

ತನ್ನಲ್ಲಿಗೆ ಮುಸೋಲಿನಿ ಅನೇಕ ಸ್ತ್ರೀಯರನ್ನು ಕರೆಸಿಕೊಳ್ಳುತ್ತಿದ್ದ. ಇವರಲ್ಲಿ ಓರ್ವ ಪುಟ್ಟ ಫ್ಯಾಸಿಸ್ಟ ಧುರೀಣನ ಪತ್ನಿಯೂ ಇದ್ದಳು. ಆರು ವರ್ಷಗಳ ಕಾಲ ಮುಸೋಲಿನಿಗೆ ಅವಳಲ್ಲಿ ಆಸಕ್ತಿಯಿದ್ದಿತು.

ಮುಸೋಲಿನಿ ಧಾರ್ಮಿಕ ಪ್ರವೃತ್ತಿಯುವನಾಗಿರದಿದ್ದರೂ ಮೂಢ ನಂಬಿಕೆಯುವನಾಗಿದ್ದ. ಅವನ ಪ್ರೇಯಸಿಯರು, ಚರ್ಚಿನ ದಾದಿಯರು ಕೊಟ್ಟಿದ್ದ ವಸ್ತುಗಳನ್ನು ಅವನೆಂದೂ ಚೆಲ್ಲಿಕೊಡುವ ಧೈರ್ಯಮಾಡುತ್ತಿರಲಿಲ್ಲ. ಅವುಗಳಲ್ಲಿ ಏನೋ ಭಾಗ್ಯದಾಯಕ ಶಕ್ತಿ ಇದೆಯೆಂದು ಅವನಿಗೆ ಭ್ರಮೆ ಇರುತ್ತಿತ್ತು. ತನ್ನ ತಾಯಿ ಕೊಟ್ಟ ಎಲುಬಿನ ಒಂದು ತಾಯಿತವನ್ನು ಸದಾ ಕೊರಳಲ್ಲಿ ಧರಿಸುತ್ತಿದ್ದ.

ಈ ಸಮಯದಲ್ಲಿ ಮುಸೋಲಿನಿಗೆ ಕರಳು ಬೇನೆ ಉಂಟಾದುದರಿಂದ ಆತ ಊಟವನ್ನು ಬಹು ಕಡಿಮೆ ಮಾಡಿದ್ದ. ಕುಡಿಯುವದನ್ನೂ ಹೆಚ್ಚುಕಡಿಮೆ ನಿಲ್ಲಿಸಿದ್ದ. ಒಮ್ಮೆ ತಿನಸುಬಾಕನೂ ಕುಡುಕನೂ ಆಗಿದ್ದ ಮುಸೋಲಿನಿ ಈಗ ತನ್ನ ಸಂಯಮದ ಬಡಾಯಿ ಕೊಚ್ಚಿಕೊಳ್ಳುತ್ತ, ಮಿತಾಹಾರ, ಮಿತಪಾನಗಳನ್ನು ಬೋಧಿಸತೊಡಗಿದ.

ಕೊನೆಯ ವರೆಗೂ ಮುಸೋಲಿನಿಯ ವರ್ತನೆ ಅಸಭ್ಯವಾಗಿಯೆ ಇತ್ತು. ತನ್ನ ಮಂತ್ರಿಗಳನ್ನು, ಪಕ್ಷದ ಧುರೀಣರನ್ನು ಟೆಲಿಫೋನಿನಲ್ಲಿ ಅಪ್ಪಣೆ ಮಾಡಿ ಕರೆಸುತ್ತಿದ್ದ. "ಬಾ" ಎಂದುಬಿಟ್ಟು ಅವರ ಉತ್ತರಕ್ಕೆ ಕೂಡ ಕಾಯದೆ ಟೆಲಿಫೋನನ್ನು ಕೆಳಕ್ಕಿಟ್ಟುಬಿಡುತ್ತಿದ್ದ. ಅವರು ಬಂದಾಗ ಔಪಚಾರಿಕ ವಿನಯವನ್ನು ಕೂಡ ತೋರಿಸುತ್ತಿರಲಿಲ್ಲ. "ಕೂಡ್ರಿ" ಎಂದು ಹೇಳುತ್ತಲೂ ಇರಲಿಲ್ಲ. ಅನಿವಾರ್ಯವೆನಿಸಿದ ಫ್ಯಾಸಿಸ್ಟ ಸಲಾಮನ್ನು ಮಾತ್ರ ಕೊಡುತ್ತಿದ್ದ. ಇಟಲಿಯ ದಕ್ಷಿಣ ಭಾಗದಲ್ಲಿ ಸೇವಕರನ್ನು ಕರೆಯುವ "ವೊಯ್" ಎಂಬ ಸಂಬೋಧನೆಯಿಂದ ಅವರನ್ನು ಕರೆಯುತ್ತಿದ್ದ.

ಸ್ವಪ್ರತಿಷ್ಠೆಯ ಹುಚ್ಚು ಬೆಳೆದಂತೆ ಆತ ಇತರರೊಡನೆ ಸಂಪರ್ಕವಿಟ್ಟುಕೊಳ್ಳುವದು ತೀರ ಕಡಿಮೆಯಾಗುತ್ತ ನಡೆಯಿತು. ಆದರೆ ೧೯೪೩ ರ ನಂತರದ ವರೆಗೂ ಖಲಪುರುಷನೆನಿಸಿಕೊಳ್ಳುವ ಮಟ್ಟಿಗೆ ಆತ ಹೋಗಲಿಲ್ಲವೆನ್ನಬಹುದು. ಅದು ವರೆಗೆ ಆತನನ್ನು ಕ್ರೂರನೆನ್ನುವದಕ್ಕಿಂತಲೂ ವಿಚಾರಹೀನ ಎನ್ನಬಹುದಾಗಿತ್ತು, ದುರುಳನೆನ್ನುವದಕ್ಕಿಂತಲೂ ತುಂಟ ಎನ್ನಬಹುದಾಗಿತ್ತು. ತನ್ನ ಶತ್ರುಗಳು ಎನಿಸುವವರೊಂದಿಗೆ ಅವನ ಈ ಕಟು ವ್ಯವಹಾರ ವಿಶೇಷವಾಗಿರುತ್ತಿತ್ತು. ತನ್ನ ನಿಕಟ ಸಹಕಾರಿಗಳೊಂದಿಗೆ ಅವನ ವರ್ತನೆ ಸ್ನೇಹದ್ದಾಗಿರುತ್ತಿತ್ತು. ಅಪರಿಚಿತರು ಮತ್ತು ಜನಜಂಗುಳಿಯೊಡನೆ ಆತ ಪ್ರೇಮದಿಂದ, ಔದಾರ್ಯದಿಂದ ನಡೆದುಕೊಳ್ಳುತ್ತಿದ್ದನು.

## ಜಿಪ್ರುಣ

ಇಲ್ಲಿ ಮುಸೋಲಿನಿಯ [illegible] ಬಗೆಯನ್ನು ಸ್ವಲ್ಪ [illegible]. ಆತ [illegible] ಸರಕಾರದ [illegible] ತನ್ನ [illegible] [illegible]

ನಾದಂದಿನಿಂದ ಮುಸೋಲಿನಿಯ ಬಳಿ ಸ್ವಂತ ವೆಂಬ ಒಂದು ಕಾಸೂ ಇರುತ್ತಿರಲಿಲ್ಲ. ಸಂಬಳ ವನ್ನು ಪೂರ್ತಿಯಾಗಿ ಆತ ಹೆಂಡತಿಗೆ ಕಳಿಸಿ ಕೊಡುತ್ತಿದ್ದ. ತನ್ನ ವೆಚ್ಚಕ್ಕಾಗಿ ಪತ್ರಿಕೆಯ ಹಣ ಬಳಸಿಕೊಳ್ಳುತ್ತಿದ್ದ. ಯಾರಲ್ಲಾದರೂ ಸಾಲ ಮಾಡಿದರೆ ತಿರುಗಿ ಕೊಡಲು ಮರೆತು ಬಿಡುತ್ತಿದ್ದ.

ಮುಖ್ಯಮಂತ್ರಿಯಾದ ನಂತರವೂ ಆತ ಇದೇ ರೀತಿ ಜೀವಿಸಿದ. ಹಿಂದಿನ ಸರ್ವಾಧಿಕಾರಿ ಸಾರ್ವಭೌಮರೋಪಾದಿಯಲ್ಲಿ ಆತ ತನ್ನ ಮತ್ತು ಸರಕಾರದ ಹಣವೆಂದರೆ ಒಂದೇ ಎಂದೂ ತನ್ನ ಎಲ್ಲ ವೆಚ್ಚವನ್ನು (ಅದು ಬಹು ಕಡಿಮೆಯಿರುತ್ತಿತ್ತು) ಸರಕಾರದ ವೆಚ್ಚವೆಂದು ಬಗೆಯಲಡ್ಡಿಯಿಲ್ಲ ಎಂದೂ ಭಾವಿಸಿ ಅದರಂತೆ ಮಾಡುತ್ತಿದ್ದನು.

ಪದಚ್ಯುತನಾದ ಬಳಿಕವೂ ಆತನಿಗೆ ತನಗಾಗಿ ಊಟ, ವಸತಿ ಯಾವದಕ್ಕೂ ತನ್ನ ಒಂದು ಕಾಸನ್ನೂ ವೆಚ್ಚ ಮಾಡುವ ಪ್ರಸಂಗ ಬರಲಿಲ್ಲ.

೧೯೩೬ರಲ್ಲಿ ಮುಸೋಲಿನಿ ಅತಿಮಾನುಷನಾದ. ಅವನು ತಾನೊಬ್ಬ ದೇವತೆಯೆಂಬಂತೆ ವರ್ತಿಸ ತೊಡಗಿದ. ಅಂದಿನಿಂದ ಆತನಿಗೂ ಜನ ಸಾಮಾನ್ಯರಿಗೂ ಯಾವ ಸಂಬಂಧವೂ ಉಳಿಯಲಿಲ್ಲ. ಜನ ಅವನನ್ನು ಕಾಣಬೇಕಾದರೆ ಪೋಲೀಸರು ಮತ್ತು ಅಧಿಕಾರಿಗಳ ನಡುವೆಯೆ ಕಾಣುವಂತಾಯಿತು. ಈಗ "ಡೂಚೆ" (ಅಧಿನಾಯಕ) ಎಂಬುದು ಆತನನ್ನು ಸಂಬೋಧಿಸುವ ಸಂಜ್ಞೆಯಾಯಿತು.

ಅಬಿಸೀನಿಯಾವನ್ನು ಮುಸೋಲಿನಿ ಗೆದ್ದುಕೊಂಡ ಕಾಲ ಇದು. ಆಗ ಈ ಸರ್ವಾಧಿಕಾರಿಯ ಮೂರ್ತಿ ಜನರಿಂದ ದೂರದೂರವಾಗುತ್ತ ಬೇರೆ ಒಂದು ಅನ್ಯತರವ್ಯಕ್ತಿಯನ್ನು ಪಡೆಯ ತೊಡಗಿತ್ತು. ಅವನು ಬೇಕೆಂದೇ ಬಾಹ್ಯ ಸಂಪರ್ಕಗಳನ್ನು ಮರೆಮುಕೊಂಡಿದ್ದನು. ಮುಸೋಲಿನಿ ಪ್ರವಾಸ ಕಾಲದಲ್ಲಿ ಕೂಡ ತನ್ನ ಖಾಸ ಸೇವಕ, ಫ್ಯಾಸಿಸ್ಟ ಪಕ್ಷದ ಕಾರ್ಯದರ್ಶಿ ಇವರನ್ನು ಬಿಟ್ಟು ಇನ್ನಾರನ್ನೂ ತನ್ನ ಸಮೀಪ ಬರಗೊಡುತ್ತಿರಲಿಲ್ಲ.

## ಮುಸೋಲಿನಿಗಾಗಿ ಜೀವತೆತ್ತರಮಣಿ



ಇದೇ ಅವಧಿಯಲ್ಲಿ ಆತನ ಖಾಸಗಿ ಜೀವನದಲ್ಲಿ ಇದು ವರೆಗೂ ಆತನ ಅನುಭವಕ್ಕೆ ಬಾರದಿದ್ದಂಥ ಭಾವನಾತ್ಮಕ ಸಂಬಂಧವೊಂದು ಅವನಿಗೆ ಗಂಟುಬಿತ್ತು. ಕ್ಲೆರಿಟಾ ಪೆಟಸಿಯೊಂದಿಗೆ ನಡೆದ ಅವನ ಪ್ರಣಯವ್ಯವಹಾರವು ಅವನ ಜೀವನದ ಕೊನೆಯುಸಿರಿನ ವರೆಗೂ ಅದಕೆ ಒಂದು ಮೆರುಗನ್ನು ಕೊಟ್ಟಿತು. ಕರುಣರಸವೊಂದು ಅವನ ಜೀವನದಲ್ಲಿ ಮೂಡಿತು.

### ಆರಾಧನಾಭಾವ

೧೯೩೬ರಲ್ಲಿ ಕ್ಲೆರಿಟಾ ೨೪ ವರ್ಷದ ತರುಣಿ. ಅವಳ ವಿವಾಹವಿಚ್ಛೇದನವಾಗಿತ್ತು. ಗುಂಗುರುಗೂದಲಿನ ಸುಂದರಿ ಅವಳು. ತುಂಬಿದ ಎದೆ, ಮಾಟಾದ ದೇಹದ ಅವಳು ತುಂಬ ಆಕರ್ಷಕಳಾಗಿದ್ದಳು. ಅವಳು ಮಾತಾಡಿದಳೆಂದರೆ ಸಮರ್ಪಣಭಾವದ ಕಲ್ಪನೆಯೊಂದು ಕೇಳುವವರಲ್ಲಿ ಮೂಡುತ್ತಿತ್ತು.

ಹುಡುಗಿಯಾಗಿದ್ದಾಗಿನಿಂದಲೂ ಕ್ಲೆರಿಟಾ ಮುಸೋಲಿನಿಯಲ್ಲಿ ಅನುರಕ್ತಳಾಗಿದ್ದಳು. ಮುಸೋಲಿನಿ ಅವಳ ತಾರುಣ್ಯದ ಕನಸಿನ ರಾಜನಾಗಿದ್ದನು. ಅವನ ಭಾವಚಿತ್ರವನ್ನು ಅವಳು ತಲೆದಿಂಬಿನ ಬುಡದಲ್ಲಿಟ್ಟುಕೊಂಡಿರುತ್ತಿದ್ದಳು. ಸಾರ್ವಜನಿಕ ಸಮಾರಂಭಗಳಲ್ಲಿ, ಮಿಲಿ

ಟರಿ ಕೂಚುಗಳಲ್ಲಿ ಅವನ ದರ್ಶನ ಪಡೆಯಲೆಂದು ಕ್ಲೆರಿಟಾ ಪ್ರೇಕ್ಷಕಳಾಗುತ್ತಿದ್ದಳು. ಭರ್ರೆಂದು ಹೋಗುವ ಕಾರಿನಲ್ಲಿದ್ದ ಆತನ ಮುಖವು ಒಂದರೆನಿಮಿಷ ಕಂಡರೂ ಅವಳು ಪುಳಕಿತಳಾಗುತ್ತಿದ್ದಳು. ಅವನ ಬಗ್ಗೆ ಬರೆದು ಬಂದದ್ದನ್ನೆಲ್ಲ ಓದುತ್ತಿದ್ದಳು. ಮುಸೋಲಿನಿಗಾಗಿ ಸರ್ವಾರ್ಪಣ ಮಾಡಲು ಕ್ಲೆರಿಟಾ ಸಿದ್ಧಳಿದ್ದಳು.

ಮುಸೋಲಿನಿಗೂ ಕ್ಲೆರಿಟಾಳಲ್ಲಿ ಏನೋ ಹೊಸದೊಂದು ಕಂಡುಬಂದಿತು. ಮುಸೋಲಿನಿಗೆ ಆಗ ೫೪ ವರ್ಷ. ತಾನು ಸುದೃಢ ಪ್ರಕೃತಿಯವ ಎಂದಾತ ನಟಿಸುತ್ತಿದ್ದರೂ ಆತನಿಗೆ ಗುಪ್ತ ಬೇನೆಗಳಿದ್ದವು. ಹೊಟ್ಟೆಯ ಹುಣ್ಣು ಪುನಃ ತೊಂದರೆ ಕೊಡತೊಡಗಿತ್ತು.

ಕ್ಲೆರಿಟಾಳ ತಾರುಣ್ಯ ಮತ್ತು ಉಲ್ಲಸಿತ ವೃತ್ತಿ, ಸದಾ ಸಿದ್ಧವಿದ್ದ ಅವಳ ನಗು ಮತ್ತು ತಟ್ಟನೆ ಉತ್ತರ ಕೊಡುವ ಬುದ್ಧಿ, ವಿನಯ ಮತ್ತು ಕೃತಜ್ಞತಾಭಾವದಿಂದ ಅವಳು ತನ್ನನ್ನು ಅರ್ಪಿಸಿಕೊಳ್ಳುತ್ತಿದ್ದ ಬಗೆ, ಇವುಗಳು ಮುಸೋಲಿನಿಯ ಏಕಾಂತಜೀವನದ ರುಕ್ಷತೆಯನ್ನು ಹೋಗಲಾಡಿಸಿದವು. ಸ್ನೇಹವಂಚಿತನಾದ, ಚಿತ್ತಶಾಂತಿಯಿರದ ಮುಸೋಲಿನಿಯ ಬಾಳಿನಲ್ಲಿ ಕ್ಲೆರಿಟಾ ಮರುಭೂಮಿಯಲ್ಲಿನ ಜಲಾಶಯದಂತಾದಳು.

ಮುಸೋಲಿನಿ ಎಡಬಿಡದೆ ಅವಳಿಗೆ ಟೆಲಿಫೋನ ಮಾಡುತ್ತಿದ್ದನು. ನಿತ್ಯವೂ ಅವಳನ್ನು ಕಾಣಬೇಕೆನ್ನುತ್ತಿದ್ದನು. ತಾನು ಹೋಗುತ್ತಿದ್ದ ಯಾವುದೊಂದು ಸಮಾರಂಭ ಇಲ್ಲವೆ ನಾಟಕ ಇತ್ಯಾದಿಗೆ ಬರಲು ಅವಳಿಗೆ ಅಪ್ಪಣೆ ಮಾಡುತ್ತಿದ್ದನು. ಅಲ್ಲಿ ಅವಳನ್ನು ಸನಿಹದಲ್ಲಿ ಕಂಡು ಸಂಜ್ಞೆ ಮಾಡಲು ಸಾಧ್ಯವಾಗುತ್ತಿದ್ದುದೇ ಇದಕ್ಕೆ ಕಾರಣವಾಗಿದ್ದಿತು. ಕ್ಲೆರಿಟಾ ಹಗಲೆಲ್ಲ ಅವನಲ್ಲಿ ಬರುವ ಅತಿಥಿಯಾದಳು. ಮುಂದೆ ಪೆಲೆಝೊವೆನಿಝಿಯಾದಲ್ಲಿ ಅವನ ಪ್ರೇಯಸಿಯಾಗಿ ಉಳಿದಳು.

ಕ್ಲೆರಿಟಾ ತನ್ನ ಕೋಣೆಯಲ್ಲಿ ಮಂಚದ ಮೇಲೊರಗಿಕೊಂಡು ಮುಸೋಲಿನಿಯ ಭೆಟ್ಟಿಗಾಗಿ ತಾಸುಗಟ್ಟಲೆ ಕಾದಿರುತ್ತಿದ್ದಳು. ಓದುತ್ತ, ಹಗಲುಗನಸು ಕಾಣುತ್ತ, ಚಹ ತಂದುಕೊಡುವ ಆಳಿನ ಜೊತೆ ಮಾತಾಡುತ್ತ, ಅವಳು ಸಮಯ ಕಳೆಯುತ್ತಿದ್ದಳು.

ಅವಳ ಬಳಿ ಬೆಲೆಬಾಳುವ ಅರಿವೆಗಳಿದ್ದವು, ಚಿಕ್ಕ ಕಾರೊಂದಿತ್ತು. ತನ್ನ ಕುಟುಂಬದವರೊಂದಿಗೆ ಅವಳು ಬಹು ತುಟ್ಟಿಯಾದ ರಿಕೊನೆ ಹೊಟೆಲಿನಲ್ಲಿ ವಾಸಿಸುತ್ತಿದ್ದಳು. ಕ್ಲೆರಿಟಾ-ಮುಸೋಲಿನಿಯರ ಸಂಬಂಧವನ್ನರಿತ ಅರಿವೆ ವ್ಯಾಪಾರಿಗಳು, ದರ್ಜಿಗಳು ಅವಳಿಗೆ ಉದ್ದರಿ ಕೊಡುವಲ್ಲಿ ಸ್ಪರ್ಧೆಯನ್ನೇ ನಡೆಸುತ್ತಿದ್ದರು. ಈ ಸಂಬಂಧದ ಪ್ರಯೋಜನ ಪಡೆಯಲೆಂದು ಶ್ರೀಮಂತ ವ್ಯಾಪಾರಿಗಳು ಅವಳಿಗೆ ಆಭರಣಾದಿಗಳನ್ನು ಕಳಿಸುತ್ತಿದ್ದರು. ಸಾಮಾನ್ಯವಾಗಿ ಕ್ಲೆರಿಟಾ ಅಲ್ಪಸಂತುಷ್ಟ ಸ್ತ್ರೀಯಾಗಿದ್ದಳು. ಮುಸೋಲಿನಿ ತನ್ನ ಪ್ರೇಯಸಿಯರೊಡನೆ ನಡೆದುಕೊಳ್ಳುತ್ತಿದ್ದ ಜಿಪುಣ ರೀತಿಯಲ್ಲೆ ಇವಳೊಂದಿಗೂ ವ್ಯವಹರಿಸುತ್ತಿದ್ದನು.

ಪ್ರತಿನಿತ್ಯವೂ ಅವಳಿಗೆ ನೂರಾರು ಪತ್ರಗಳು ಬರುತ್ತಿದ್ದವು. ಏನಾದರೊಂದು ಅನುಗ್ರಹವನ್ನಪೇಕ್ಷಿಸಿ, ಅನ್ಯಾಯದ ಪರಿಮಾರ್ಜನೆಯನ್ನು ಬಯಸಿ, ಇಲ್ಲವೆ ದೂರುಗಳನ್ನು ವಿವರಿಸಿ ಅನೇಕರು ಅವಳಿಗೆ ಪತ್ರ ಬರೆಯುತ್ತಿದ್ದರು. ಕೆಲವರಂತೂ ಅವಳನ್ನು ತಮ್ಮ ಪತ್ರದಲ್ಲಿ “ಘನ ಹೊಂದಿದ ಪೆಟೆಸಿ” ಎಂದು ಸಂಬೋಧಿಸುತ್ತಿದ್ದರು.

ಈ ಪತ್ರವ್ಯವಹಾರವನ್ನು ಕ್ಲೆರಿಟಾ ಬಹು ಗಂಭೀರಳಾಗಿ ಪರಿಶೀಲಿಸುತ್ತಿದ್ದಳು. ಇಟಲಿಯ ಸರ್ವಾಧಿಕಾರಿಗೆ ತಪ್ಪುಮಾಡದೆ ನ್ಯಾಯವನ್ನೆ ಆಚರಿಸಲು ಸಹಾಯ ಮಾಡಲೆಂದು ದೇವರು ತನ್ನನ್ನು ಹುಟ್ಟಿಸಿದ್ದಾನೆ ಎಂದು ಅವಳು ಒಮ್ಮೆ ಅಂದಿದ್ದಳು!

ಇವರೀರ್ವರಲ್ಲಿ ಆಗಾಗ ಜಗಳಗಳಾಗುತ್ತಿದ್ದವು. ಒಬ್ಬರನ್ನೊಬ್ಬರು ಅಗಲಿ ದೂರವಿರಲು ಪ್ರಯತ್ನಗಳೂ ನಡೆಯುತ್ತಿದ್ದವು. ಆದರೆ ಮುಸೋಲಿನಿಗೆ ಕ್ಲೆರಿಟಾಳನ್ನು ಬಿಟ್ಟು ಜೀವಿಸಲು ಸಾಧ್ಯವಿರಲಿಲ್ಲ. ಮುಸೋಲಿನಿಯ ಅಸ್ಥಿರ ಜೀವನದಲ್ಲಿದ್ದ ಭದ್ರತೆಯ ಕೊರತೆಯನ್ನು ಕ್ಲೆರಿಟಾ ತುಂಬಿದ

ಳೆಂಬುದೇ ಬಹುಶಃ ಇದಕ್ಕೆ ಕಾರಣವಾಗಿರಬಹುದು.

೧೯೩೬ರಿಂದ ೧೯೪೦ರ ವರೆಗಿನ ಗದ್ದಲದ ದಿನಗಳಲ್ಲಿ ಮುಸೋಲಿನಿಯ ಚರಿತ್ರೆ ಬರೆಯುವವನು ಇಬ್ಬರು ಮುಸೋಲಿನಿಯರ ವಿಚಾರ ಹೇಳುವಂತಿದೆ :

ಒಬ್ಬ ಮುಸೋಲಿನಿ ಸರಳ ಸ್ನೇಹಮಯಿಯಾದ ಸ್ತ್ರೀಯ ಪ್ರೇಮದಿಂದ ಮೃದುಹೃದಯದವನಾಗಿ, ಅವಳಿಗಾಗಿ, ತನ್ನನ್ನು ಕಾಣಲು ಬಂದ ಮಹತ್ವದ ವ್ಯಕ್ತಿಗಳನ್ನು ತಾಸುಗಟ್ಟಲೆ ಕಾಯಹಚ್ಚುತ್ತಿದ್ದ, ತಾರುಣ್ಯದ ಹುಡುಗಾಟಿಕೆಗಳಲ್ಲಿ ಮಗ್ನನಾಗಿರುತ್ತಿದ್ದ, ಮಹತ್ವದ ಮಾತುಕತೆಗಳ ನಡುವೆ ಪ್ರೇಮಸಲ್ಲಾಪಕ್ಕಾಗಿ ಟೆಲಿಫೋನ ಮಾಡಲು ಮೇಲಿಂದ ಮೇಲೆ ಎದ್ದು ಹೋಗುತ್ತಿದ್ದ ಮಧ್ಯಮ ವಯಸ್ಸಿನ ವ್ಯಕ್ತಿ

ಇನ್ನೊಬ್ಬನು ಜಗತ್ತಿಗೆ ಪರಿಚಿತನಾಗಿರುವ ಸರ್ವಾಧಿಕಾರಿ. ಯಾವಾಗಲೂ ಸೈನಿಕ ಉಡುಪಿನಲ್ಲಿದ್ದು ಯುದ್ಧ ಮತ್ತು ವಿಜಯಗಳ ಉನ್ಮಾದದಲ್ಲಿರುವ,ತಾನೇ ವಿಮಾನ ನಡೆಸಿಕೊಂಡು ಇಡೀ ದೇಶವನ್ನು ಸುತ್ತಿ ಸೈನ್ಯ ವ್ಯವಸ್ಥೆಯನ್ನು ನಿರೀಕ್ಷಿಸುವ, ಫ್ಯಾಸಿಸ್ಟ ಶಿಸ್ತಿನಲ್ಲಿ ಮಕ್ಕಳು ಕೂಡ ತಪ್ಪಿಸಿಕೊಳ್ಳದಂತ ನೋಡಿಕೊಳ್ಳುವ, ಸೈನಿಕ ಯೋಜನೆ ನಡೆಸುವ ವ್ಯಕ್ತಿ.

## ಯುದ್ಧ ಮತ್ತು ಚಿಂತೆ

೧೯೪೦ ರಲ್ಲಿ ಇಟಲಿ ಜಾಗತಿಕ ಯುದ್ಧದಲ್ಲಿ ಸೇರಿಕೊಂಡನಂತರ ಮುಸೋಲಿನಿ ತಾನೇ ಹೇಳಿಕೊಂಡಿರುವಂತೆ ನಿರುತ್ಸಾಹದ ಏಕಾಂತ ಜೀವನ ನಡೆಸಿದನು.

ಆಗೊಮ್ಮೆ ಈಗೊಮ್ಮೆ ಸೈನ್ಯ ಶಿಬಿರಗಳಿಗೆ ಭೆಟ್ಟಿಕೊಡುವದನ್ನು, ಬೇಸಿಗೆಯಲ್ಲಿ ರಿಕೊನಿ ಹೋಟೆಲ್ಲಿಗೆ ವಿಶ್ರಾಂತಿಗಾಗಿ ಹೋಗುವದನ್ನು ಬಿಟ್ಟರೆ ಮುಸೋಲಿನಿ ಸಹಸಾ ಪೆಲೆಝೊ ವೆನೆಝಿಯವನ್ನು ಬಿಟ್ಟು ಕದಲುತ್ತಿರಲಿಲ್ಲ. ನಿತ್ಯವೂ ತಾನು ಕಾಣುವವರನ್ನು ಬಿಟ್ಟು ಬೇರೆಯವರನ್ನು ಕಾಣುವದು ದಿನದಿನವೂ ಅವನಿಗೆ ಅಸಹ್ಯವಾಗುತ್ತ ಹೋಯಿತು.

ಆತನ ಖಾಸಗಿ ಮನೆಯಲ್ಲಿ ಆತನ ಪ್ರೇಯಸಿ ಕ್ಲೆರಿಟಾ ಪ್ರತಿನಿತ್ಯ ಮಧ್ಯಾಹ್ನ ೪ರಿಂದ ರಾತ್ರಿಯಾಗುವವರೆಗೂ ಅವನಿಗಾಗಿ ಕಾದಿರುತ್ತಿದ್ದಳು. ಮುಸೋಲಿನಿಯ ಭೆಟ್ಟಿ ಅವಳಿಗಾಗುತ್ತಿದ್ದುದು ಅಷ್ಟಕ್ಕಷ್ಟೆ ಆಗಿತ್ತು. ಅಧಿಕೃತ ನಿವಾಸಕ್ಕೆ ತೆರಳುವ ಮೊದಲು ಆತ ಬಂದು ಮುಖ ತೋರಿಸಿ ಹೋಗುತ್ತಿದ್ದ, ಅಷ್ಟೇ. ಬೇಸಿಗೆಯ ವಿಶ್ರಾಂತಿಗಾಗಿ ಆತ ತೆರಳಿದಾಗ ಮಾತ್ರ ಅವರೀರ್ವರ ಸಮಾಗಮ ಸುಗಮವಾಗಿ, ಸುಖಕರವಾಗಿರುತ್ತಿತ್ತು.

ಆಗ ಅವರೀರ್ವರೂ ಸಮುದ್ರದಲ್ಲಿ ಈಸಲು ಹೋಗುತ್ತಿದ್ದರು. ಅವರಿಬ್ಬರೂ ಜನರ ಕಣ್ಣಿಗೆ ಕಾಣದಂತೆ ಅವರ ಸುತ್ತ ಪೋಲೀಸರು ಈಸುತ್ತಿದ್ದರು. ನಿರ್ಜನ ಪ್ರದೇಶಗಳಲ್ಲಿ ಅವರು ಕಾರುಗಳಲ್ಲಿ ಬಂದು ಭೆಟ್ಟಿಯಾಗುತ್ತಿದ್ದರು. ನಸುಕಿನಲ್ಲಿ ಸಮುದ್ರ ದಂಡೆಯಲ್ಲಿ ಇನ್ನೂ ಜನಸಂಚಾರ ವಿರಳವಿದ್ದಾಗ ಕೂಡಿ ಹೊತ್ತು ಕಳೆಯುತ್ತಿದ್ದರು.

ಈ ಪ್ರಸಂಗಗಳಲ್ಲಿ ಮುಸೋಲಿನಿಗೆ ಕ್ಲೆರಿಟಾಳ ಪ್ರಥಮ ಸಂದರ್ಶನಕಾಲದಲ್ಲಾದ ಸುಖಾನುಭವವಾಗುತ್ತಿತ್ತು. ಒಮ್ಮೆ ಸ್ನಾನದ ಉಡುಪಿನಲ್ಲಿದ್ದಾಗ ಮುಸೋಲಿನಿ "ನಾನು ಈ ಹುಡುಗಿಯನ್ನು ಪ್ರೀತಿಸುತ್ತೇನೆ, ನಾನವಳನ್ನು ಪೂಜಿಸುತ್ತೇನೆ. ಓ ಸಮುದ್ರವೇ, ಇದು ನಿನಗೆ ಗೊತ್ತಿರಲಿ. ಹಾಗೆ ಹೇಳಲು ನನಗೆ ನಾಚಿಕೆಯಿಲ್ಲ. ಇವಳು ನನ್ನ ತಾರುಣ್ಯ, ನನ್ನ ದೇವತೆ, ನನ್ನ ಜೀವನದ ಅತ್ಯಂತ ಮಧುರ ಸ್ಮೃತಿ. ನಾನೀ ಮಾತುಗಳನ್ನು ಈ ಸಮುದ್ರದೆದುರು, ಉದಯಿಸುತ್ತಿರುವ ಈ ಸೂರ್ಯನೆದುರು ಪ್ರಮಾಣ ಮಾಡಿ ಹೇಳುತ್ತೇನೆ," ಎಂದು ಕೂಗಿ ಹೇಳಿದನೆಂದು ಕ್ಲೆರಿಟಾ ಹೇಳಿದ್ದಾಳೆ.

ಕೆಲ ಸಲ ಅನೇಕ ದಿನಗಳ ವರೆಗೆ ಅವರಿಬ್ಬರಿಗೆ ಮಾತಾಡಲೂ ಸಂದರ್ಭ ಸಿಗುತ್ತಿರಲಿಲ್ಲ. ಆಗ ಕ್ಲೆರಿಟಾ ರಸ್ತೆಯಲ್ಲಿ ನಿಂತು ಮುಸೋಲಿನಿ ಹೋಗುತ್ತಿರುವಾಗ ತನ್ನ ಕರವಸ್ತ್ರವನ್ನು ಬೀಸಿ ತನ್ನ ಅರಿವನ್ನುಂಟುಮಾಡಿಕೊಡುತ್ತಿದ್ದಳು. ಮುಸೋಲಿನಿಯ ಹೆಂಡತಿ ರಾಚಿಲಾಳಿಗೆ ಈ ಪ್ರಣಯವ್ಯವಹಾರ ಗೊತ್ತಿರಲಿಲ್ಲ. ಆದರೆ

ಅವಳ ಗಮನಕ್ಕೆ ಮುಸೋಲಿನಿಯ ಈ ಆರಾಧಕಳು ಬಂದಾಗ, "ಯಾವಾಗಲೂ ಇಂಥ ಸಂದರ್ಭಗಳಲ್ಲಿ ಕಣ್ಣಿಗೆ ಬೀಳುವ ಈ ಹುಡುಗಿ ಯಾರು?" ಎಂದವಳು ಕೇಳುತ್ತಿದ್ದಳು.

ಆದರೆ ರೋಮದಲ್ಲಿದ್ದಾಗ ಪತ್ರ ವ್ಯವಹಾರದ ಗೊಂದಲದಲ್ಲಿ, ಟೆಲಿಫೋನ ಕರೆಗಳ ಗದ್ದಲದಲ್ಲಿ, ಮಧ್ಯಾಹ್ನವೆಲ್ಲ ಮುಸೋಲಿನಿಗಾಗಿ ಕಾದಿರುತ್ತಿದ್ದ ಕಾಲದಲ್ಲಿ ಕ್ಲೆರೆಟಾಳ ಮನಸ್ಸು ಚಿಂತೆಯಿಂದ ಉದ್ವಿಗ್ನವಾಗಿರುತ್ತಿತ್ತು. ಮುಸೋಲಿನಿಯ ಚಂಚಲ ಸ್ವಭಾವದ ನೆನಪು ಅವಳನ್ನು ಪೀಡಿಸುತ್ತಿತ್ತು.

ಅವನನ್ನು ಬಿಡುವದು ಅವಳಿಗೆ ಸಾಧ್ಯವಿರಲಿಲ್ಲ. ಅವನನ್ನು ಕಳೆದುಕೊಳ್ಳುವ ವಿಚಾರವೂ ಅವಳಿಗೆ ಸಹನವಾಗುತ್ತಿರಲಿಲ್ಲ. ತಾನೋರ್ವಳೇ ಅವನನ್ನು ರಮಿಸಬಲ್ಲೆ, ಅವನಿಗೆ ಶಾಂತಿಯನ್ನೀಯಬಲ್ಲೆ, ತಾನೋರ್ವಳೇ ಹೃತ್ಪೂರ್ವಕವಾಗಿ ಅವನನ್ನು ಪ್ರೀತಿಸುವವಳು ಎಂದು ಕ್ಲೆರೆಟಾ ಸಮಾಧಾನ ಮಾಡಿಕೊಳ್ಳಲೆಳಸುತ್ತಿದ್ದಳು.

೧೯೪೦ರಷ್ಟೊತ್ತಿಗೆ ಪ್ರತಿಯೊಬ್ಬರೂ ಮುಸೋಲಿನಿ-ಕ್ಲೆರೆಟಾಳ ಸಂಬಂಧವನ್ನು ಕುರಿತು ಮಾತಾಡಿಕೊಳ್ಳತೊಡಗಿದರು. ಮುಸೋಲಿನಿಯ ಪ್ರಣಯಜೀವನದ ರಮ್ಯತೆ, ಬೊಕ್ಕಸದಿಂದ ಅವನು ಅವಳಿಗೆ ಕೊಡಬಹುದಾದ ಹಣ ಇತ್ಯಾದಿಗಳ ಬಗ್ಗೆ ಜನ ಕಲ್ಪನಾಚಿತ್ರಗಳನ್ನು ಮಾಡಿಕೊಳ್ಳುತ್ತಿದ್ದರು. ಕ್ಲೆರೆಟಾಳ ಬಗ್ಗೆ ಜನರ ಹೆಚ್ಚಿನ ಆಕ್ಷೇಪವಿರಲಿಲ್ಲ. ಆದರೆ ಅವಳು ಸರಳ ಭಾವದಿಂದಲೋ ತನ್ನ ಭಾಗ್ಯದ ಅರಿವಿನ ಉನ್ಮತ್ತತೆಯಿಂದಲೋ ಸಂಧಿಸಾಧಕರಿಗೆ ಸರಕಾರದಲ್ಲಿ ಬೇಳೆಬೇಯಿಸಿಕೊಳ್ಳುವ ಸಾಧನವಾಗಿದ್ದಾಳೆ ಎಂಬ ಮಾತು ಮಾತ್ರ ಜನರಿಗೆ ಅಪ್ರಿಯವಾಗಿತ್ತು. ಇದರಿಂದ ತಕ್ಕಮಟ್ಟಿಗೆ ಕೋಲಾಹಲವಾಯಿತು.

ಕೊನೆಗೊಮ್ಮೆ ಈ ವ್ಯವಹಾರವನ್ನು ಕೊನೆಗೊಳಿಸಲು ಮುಸೋಲಿನಿ ನಿಶ್ಚಯಿಸಿದ. ೧೯೪೩, ಮೇ ೧ರಂದು ಪ್ಲೆಝೋ ವೆನಿಝಿಯವನ್ನು ಪ್ರವೇಶಿಸುತ್ತಿದ್ದ ಕ್ಲೆರೆಟಾಳನ್ನು ಕಾವಲುಗಾರರು ತಡೆದರು. ಅವಳನ್ನುಒಳಗೆ ಬಿಡಲಾಗದು ಎಂದು ದ್ಯೂಚೆ ಅಪ್ಪಣೆ ಮಾಡಿದ್ದಾನೆಂಬ ವಿಚಾರವನ್ನು ಪೋಲೀಸರು ಬಹು ಸಂಕೋಚದಿಂದ ಅವಳಿಗೆ ತಿಳಿಸಿದರು. ಕ್ಲೆರೆಟಾ ಕೋಪದಿಂದ ಕಿಡಿಕಿಡಿಯಾದಳು. ತನ್ನನ್ನು ಅಡ್ಡಗಟ್ಟಲೆಳಸಿದವನನ್ನು ಅವಳು ಬದಿಗೆ ಸರಿಸಿ ಅಟ್ಟದ ಮೇಲೆ ಓಡಿದಳು.

ಅಲ್ಲಿ ಒಂದು ಅದ್ಭುತ ದೃಶ್ಯವೇ ನಡೆಯಿತು. ತನ್ನೆಲ್ಲ ಕೋಪಾಟೋಪಗಳಿಗೆ, ಪ್ರೇಮಪ್ರದರ್ಶನಕ್ಕೆ, ಅಳು-ರಂಭಾಟಗಳಿಗೆ ಮುಸೋಲಿನಿ ನಿರ್ವಿಕಾರ ಚಿತ್ತದಿಂದ "ಈ ಸಂಬಂಧ ಮುಗಿಯಿತು" ಎಂದಿಷ್ಟೇ ಉತ್ತರಕೊಟ್ಟನೆಂದು ಕ್ಲೆರೆಟಾ ನಂತರ ಅದನ್ನು ವರ್ಣಿಸಿದಳು. ಮುಸೋಲಿನಿ ಇತರ ಸ್ತ್ರೀಯರನ್ನು ನಡೆಸಿಕೊಂಡ ಬಗೆಯನ್ನು ಅವನ ಬಾಯಿಯಿಂದಲೇ ಕೇಳಿದ್ದ ಕ್ಲೆರೆಟಾಳಿಗೆ ಸಂದರ್ಭದ ಅರಿವು ಹೃದಯವನ್ನು ನಡುಗಿಸಿತು. ಆದರೂ ಕೊನೆಗೆ ಅವಳ ಅಳು ಮತ್ತು ಪ್ರಾರ್ಥನೆಗಳು ಜಯ ಪಡೆದವು. ಮುಸೋಲಿನಿಯ ನಿರ್ಧಾರ ಸಡಿಲಿತಾದರೂ ಅವನು ಮೊದಲಿನಂತೇನೂ ಅವಳನ್ನು ಮುದ್ದಾಡಲಿಲ್ಲ.

''ಅಯ್ಯೋ! ಅವನಿಂದ ಎಲ್ಲವನ್ನೂ ಕಸಿದುಕೊಳ್ಳುವ ಇನ್ನೊಬ್ಬ ಹೆಂಗಸು ದೊರಕಿರಬೇಕು. ಅದೇ ಅವನು ಹೀಗೆ ವರ್ತಿಸುತ್ತಾನೆ'' ಎಂದು ದುರ್ದೈವಿ ಕ್ಲೆರೆಟಾ ಹಿಂದಿನಿಂದ ಪ್ರಲಾಪಿಸಿದಳು.

ಮತ್ತೆ ಎರಡು ಸಲ "ನನ್ನ ಗೊಡವೆಯನ್ನು ಬಿಡು, ನನ್ನ ಭೆಟ್ಟಿಗೆ ಬರಬೇಡ"ಎಂದು ಮುಸೊಲಿನಿ ಅವಳಿಗೆ ಆಜ್ಞಾಪಿಸಿದನು. ಆದರೆ ಅವಳು ಧೈರ್ಯದಿಂದ ಇದನ್ನೆದುರಿಸಿದಳು. ಏನೇನೋ ನೆವ ತೆಗೆದು ಭೆಟ್ಟಿಯಾದಳು. "ಜನರಾಡಿಕೊಳ್ಳುವ ಮಾತಿಗೆ ಹೆದರಿ ಹಗಲು ನನ್ನನ್ನು ಕಾಣಬಯಸದಿದ್ದರೆ ನಾನು ರಾತ್ರಿ ಹೊತ್ತು ಬರುವೆ. ಕೆಲವೇ ನಿಮಿಷ ನಿನ್ನ ಸಹವಾಸ ದೊರೆತರೂ ಸಾಕು. ನಿನ್ನನ್ನೊಮ್ಮೆ ಕಣ್ತುಂಬ ನೋಡಿ, ಒಮ್ಮೆ ಚುಂಬಿಸಲವಕಾಶ ಸಿಕ್ಕರೆ ಸಾಕು,'' ಎಂದವಳು ದುಂಬಾಲು ಬೀಳುತ್ತಿದ್ದಳು. ಅವಳ ಕಣ್ಣೀರು, ಅವಳ ದೂಷಣೆಗಳಿಂದ ಬೇಸತ್ತು ಮುಸೋಲಿನಿ ಸೋಲನ್ನೊಪ್ಪಿಕೊಳ್ಳುತ್ತಿದ್ದನು.

## ಪತನ

೧೯೪೩ ರ ಜುಲೈ ೨೪ ರಂದು ಫ್ಯಾಸಿಸ್ಟ ಗ್ರ್ಯಾಂಡ ಕೌನ್ಸಿಲಿನ ಸಭೆಯಲ್ಲಿ ಫ್ಯಾಸಿಸ್ಟರು ಮುಸೋಲಿನಿಯ ವಿರುದ್ಧ ಬಹಿರಂಗವಾಗಿ ದಂಗೆ ಯೆದ್ದರು. ಮರುದಿನ ಅರಸನ ಆಜ್ಞೆಯಂತೆ ಮುಸೋಲಿನಿ ಬಂಧಿಸಲ್ಪಟ್ಟನು. ಅವನ ಸ್ಥಳ ದಲ್ಲಿ ಮಾರ್ಶಲ್ ಬಡೊಗ್ಲಿಯೊ ಮುಖ್ಯಮಂತ್ರಿ ಯಾದನು. ಅಕ್ಟೋಬರ ತಿಂಗಳಲ್ಲಿ ಹೊಸ ಇಟಾಲಿಯನ್ ಸರಕಾರ ಮಿತ್ರರನ್ನು ಕೂಡಿ ಕೊಂಡು ಜರ್ಮನಿಯ ಮೇಲೆ ಯುದ್ಧ ಸಾರಿತು. ಬಳಿಕ ನಾಝಿ ಕೊಡೆವಿಮಾನದವರಿಂದ ಬಂಧ ಮುಕ್ತಗೊಳಿಸಲ್ಪಟ್ಟ ಮುಸೋಲಿನಿ ಉತ್ತರ ಇಟಲಿಯಲ್ಲಿ ಬಡೋಗ್ಲಿಯೊ ಸರಕಾರಕ್ಕೆ ಪ್ರತಿ ಯಾಗಿ ಫ್ಯಾಸಿಸ್ಟ ಪ್ರಜಾರಾಜ್ಯವನ್ನು ಸ್ಥಾಪಿಸಿ ದನು.

ಮುಸೋಲಿನಿಯ ಪತನದ ನಂತರ ಕ್ಲೆರೆಟಾ ಳನ್ನೂ ಅವಳ ಕುಟುಂಬದವರನ್ನೂ ನೊವಾರಾ ದಲ್ಲಿ ಬಂಧಿಸಿಟ್ಟರು.

ಮುಸೋಲಿನಿ ಬಂಧಮುಕ್ತನಾದ ಸುದ್ದಿ ಬಂದಾಗ ಕ್ಲೆರೆಟಾ ಉತ್ತೇಜಿತಳಾಗಿ "ಹಂ! ಇನ್ನಾತ ನಮ್ಮನ್ನು ಬಿಡುಗಡೆ ಮಾಡಿಸುತ್ತಾನೆ," ಎಂದು ಆಶೆಯಿಂದ ನುಡಿದಳು.

ಆದರೆ ಮುಸೋಲಿನಿಗೆ ಇತರ ಕೆಲಸಗಳೇ ಬಹಳವಾಗಿದ್ದವು. ದಿನಗಳುರುಳಿದವು. ಇತರ ಸೆರೆಯಾಳುಗಳ ಬಿಡುಗಡೆಯಾದರೂ ಕ್ಲೆರೆಟಾಳ ಪರಿವಾರ ಮಾತ್ರ ಬಂಧನದಲ್ಲಿ ಇತ್ತು. ಕೊನೆಗೆ ಅವಳನ್ನು ಬಂಧಮುಕ್ತ ಮಾಡಿದವರು ಜರ್ಮನ್ನರು.

ಮುಂದೆ ಒಂದು ತಿಂಗಳ ನಂತರ ಕ್ಲೆರೆಟಾ ಗಾರ್ಡೋನಕ್ಕೆ ಬಂದಳು. ಮುಸೋಲಿನಿಯ ಈ ಪ್ರಣಯವ್ಯವಹಾರವನ್ನು ಸಹಾನುಭೂತಿಯಿಂದ ಕಂಡ ಹಿಟ್ಲರನ ಆಜ್ಞೆಯ ಮೇರೆಗೆ ಅವಳನ್ನು ಅಲ್ಲಿಗೆ ತರಲಾಗಿತ್ತು. ಪ್ರೇಮಕ್ಕಾಗಿ ಸೆರೆಮನೆ ಸೇರಿದವಳನ್ನು ಮುಸೋಲಿನಿ ತಿರಸ್ಕರಿಸುವದು ಹಿಟ್ಲರನಿಗೆ ಹಿಡಿಸಲಿಲ್ಲ.

ಹೀಗೆ ಮುಸೋಲಿನಿ ಮತ್ತೊಮ್ಮೆ ಕ್ಲೆರೆಟಾ ಳನ್ನು ಕಾಣುವಂತಾಯಿತು. ಆತ ಪ್ರೇಮ ದಿಂದಲೇ ವರ್ತಿಸಿದ. ಕ್ಲೆರೆಟಾ ಅಸೂಯೆಪಟ್ಟು ಕೊಳ್ಳುವಂತೆ ವ್ಯವಹರಿಸಲಿಲ್ಲ. ಆದರೆ ಈ ಜೀವನದಲ್ಲಿ ಮೊದಲಿನ ಕಾವು ಇರಲಿಲ್ಲ.

೧೯೪೫ರ ಅಗಸ್ಟ ೨೫ರಂದು ಮುಸೋಲಿನಿ ತನ್ನ ಸರಕಾರದ ಎಲ್ಲ ಧುರೀಣರೊಂದಿಗೆ ಕೋಮೊದ ಆಡಳಿತಾಧಿಕಾರಿಯಲ್ಲಿಗೆ ಬಂದನು. ಅವನ ಮುಖ ಚಿಂತೆಯಿಂದ ಕೂಡಿತ್ತು.

ಬಂದವನೇ ಅವನು ನೀಲಿ ಪೆನ್ಸಿಲಿಂದ ತನ್ನ ಪತ್ನಿ ರಾಚಿಲಾಳಿಗೆ ಒಂದು ಪತ್ರ ಬರೆದನು:

"ಪ್ರಿಯ ರಾಚಿಲಾ,

ನಾನು ನನ್ನ ಜೀವನದ ಕೊನೆಯ ಘಟ್ಟ ದಲ್ಲಿದ್ದೇನೆ. ನನ್ನ ಜೀವನಪುಸ್ತಕದ ಕೊನೆಯ ಪುಟ ಇದು. ನಾವು ಪುನಃ ಎಂದೂ ಭೆಟ್ಟಿಯಾಗ ಲಿಕ್ಕಿಲ್ಲ ಎಂದು ಈ ಪತ್ರ ಬರೆಯುತ್ತಿದ್ದೇನೆ. ನಾನು ತಿಳಿಯದೆ ನಿನಗೆ ಮಾಡಿದ ಅಪರಾಧ ಗಳನ್ನು ಮನ್ನಿಸು. ಆದರೆ ನಾನು ನಿಜವಾಗಿ ಪ್ರೀತಿಸಿದ ಹೆಂಗಸೆಂದರೆ ನೀನೊಬ್ಬಳೇ, ನಿನಗೆ ಗೊತ್ತಿದೆ. ಈ ಕೊನೆಯ ಮಹತ್ವದ ಗಳಿಗೆಯಲ್ಲಿ ಈ ಮಾತನ್ನು ದೇವರಾಣೆಯಾಗಿ ಮತ್ತು ನಮ್ಮ ಮಗ ಬ್ರುನೋನ ಆಣೆಯಾಗಿ ಹೇಳುತ್ತೇನೆ. ನೀನು ವೆಲ್ಟೆಲಿನಾಕ್ಕೆ ಹೋಗಲಿರುವೆ ಎಂದು ನಂಬಲಾಗಿದೆ. ಇದನ್ನು ನೀನು ಬಲ್ಲೆ. ಸ್ವಿಝರ್ಲಂಡದ ಗಡಿ ಪ್ರವೇಶಿಸಲು ಪ್ರಯತ್ನಿಸು. ಆಗ ನೀನು ಹೊಸ ಜೀವನವನ್ನು ಪ್ರಾರಂಭಿಸಬಹುದು....."

ಈ ಪತ್ರಕ್ಕೆ ಮುಸೋಲಿನಿ ಕೆಂಪು ಪೆನ್ಸಿಲಿನಲ್ಲಿ ಅಂಕಿತ ಹಾಕಿದ್ದನು.

## ಕೂಟಯೋಧರ ಕೈಯಲ್ಲಿ

ಅಂದು ನಸುಕಿನಲ್ಲಿ ಮೂರು ಗಂಟೆಗೆ ಮುಸೋಲಿನಿ ಮೆನಾಗಿಯೋಕ್ಕೆ ಹೊರಟ. ಪೋರಲೆಝಾ ಮಾರ್ಗದಿಂದ ಆತ ಸ್ವಿಝರ್ಲಂಡ ಗಡಿ ಪ್ರವೇಶಿಸಲು ಒಟ್ಟಿದ್ದ ಎನಿಸಿತು. ಗ್ರೆಂಡೋಲಾ ತಲು ಪಿದಾಗ ಗಡಿರಸ್ತೆ ಕಾವಲಿನಲ್ಲಿದೆ ಎಂದು ತಿಳಿ ಯಲು ಆತ ಮೆನೆಗಿಯೋಕ್ಕೆ ಮರಳಲು ನಿರ್ಧರಿಸಿದ. ಅಲ್ಲಿಗಾಗಲೆ ಕ್ಲೆರೆಟಾ ತನ್ನ ಅಣ್ಣನೊಂದಿಗೆ ಬಂದಿದ್ದಳು. ನಸುಕಿನ ಹೊತ್ತಿಗೆ ಮುಸೋಲಿ

# ಅಧ್ಯಾತ್ಮ ಕಾರ್ಯಾಲಯದ ಪ್ರಕಟನೆಗಳು

## ಶ್ರೀ ದಿವಾಕರ ರಂಗನಾಥರ ಅಮೂಲ್ಯ ಗ್ರಂಥಗಳು

| | |
|---|---|
| ೧. ಅಂತರಾತ್ಮನಿಗೆ (೪ನೆಯ ಆವೃತ್ತಿ) | ರೂ. ೧—೦—೦ |
| ೨. ಗೀತೆಯ ಗುಟ್ಟು (೪ನೆಯ ಆವೃತ್ತಿ) | ೨—೧೨—೦ |
| ೩. ಗೀತಾ ನಿತ್ಯಪಾಠ (೨ನೆಯ ಆವೃತ್ತಿ) | ೦—೬—೦ |
| ೪. ಉಪನಿಷತ್ಪ್ರಕಾಶ (೫ನೆಯ ಆವೃತ್ತಿ) | ೩—೮—೦ |
| ೫. ಛಾಂದೋಗ್ಯೋಪನಿಷತ್ತು (೧ನೆಯ ಆವೃತ್ತಿ) | ೩—೮—೦ |
| ೬. ಬೃಹದಾರಣ್ಯಕೋಪನಿಷತ್ತು (೧ನೆಯ ಆವೃತ್ತಿ) | ೩—೮—೦ |
| ೭. ಉಪನಿಷತ್ ರಹಸ್ಯ (೨ನೆಯ ಆವೃತ್ತಿ) | ೩—೮—೦ |
| ೮. ಉಪನಿಷತ್ಕಥಾವಲಿ (೩ನೆಯ ಆವೃತ್ತಿ) | ೧—೬—೦ |
| ೯. ಭಕ್ತಿಸೂತ್ರಗಳು (೨ನೆಯ ಆವೃತ್ತಿ) | ೦—೧೦—೦ |
| ೧೦. ಕರ್ಮಯೋಗ (೨ನೆಯ ಆವೃತ್ತಿ) | ೧—೮—೦ |
| ೧೧. ಹರಿಭಕ್ತಿ ಸುಧೆ (೩ನೆಯ ಆವೃತ್ತಿ) | ೨—೮—೦ |
| ೧೨. ರಾಮಕೃಷ್ಣ ಚರಿತಾಮೃತ (೩ನೆಯ ಆವೃತ್ತಿ) | ೩—೦—೦ |
| ೧೩. ಬಾಪೂ (೩ನೆಯ ಆವೃತ್ತಿ) | ೨—೦—೦ |
| ೧೪. ಗಾಂಧೀಜಿ (ನಾನು ಕಂಡಂತೆ) (೧ನೆಯ ಆವೃತ್ತಿ) | ೧—೪—೦ |
| ೧೫. ಸತ್ಯಾಗ್ರಹ (೨ನೆಯ ಆವೃತ್ತಿ) | ೩—೮—೦ |
| ೧೬. ಮಹಾತ್ಮರ ಮನೋರಂಗ (೨ನೆಯ ಆವೃತ್ತಿ) | ೩—೮—೦ |
| ೧೭. ಸೆರೆಯ ಮರೆಯಲ್ಲಿ (೨ನೆಯ ಆವೃತ್ತಿ) | ೨—೮—೦ |
| ೧೮. ವಚನಶಾಸ್ತ್ರ ರಹಸ್ಯ (೩ನೆಯ ಆವೃತ್ತಿ) | ೬—೦—೦ |
| ೧೯. ಮಹಾಯೋಗಿ (ಮಹರ್ಷಿ ಅರವಿಂದರು) (೧ನೆಯ ಆವೃತ್ತಿ) | ೨—೮—೦ |
| ೨೦. ಯಾತ್ರಿಕ (ಮನೋಹರ ಗ್ರಂಥಮಾಲೆಯ ಪ್ರಕಾಶನ) | ೨—೦—೦ |

ದೊರೆಯುವ ಸ್ಥಳ: **ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ.**

ನಿಯ ಪರಿವಾರ ಜರ್ಮನ್ನರಿಂದ ತುಂಬಿದ ಇಪ್ಪತ್ತು ಲಾರಿಗಳೊಂದಿಗೆ ಕೊಲಿಕೊಕ್ಕೆ ಹೊರಟಿತು.

ಮುಸೋಲಿನಿ ತನ್ನ ಕಾರಿನಲ್ಲಿದ್ದನು. ಇನ್ನೊಂದು ಕಾರಿನಲ್ಲಿ ಕ್ಲೆರೆಟಾ ಮತ್ತು ಅವಳ ಕುಟುಂಬವಿತ್ತು. ಮನೆಗಿಯೊದಿಂದ ತುಸು ದೂರದಲ್ಲಿ ಮುಸೋಲಿನಿ ಸಶಸ್ತ್ರ ಕಾರಿನಲ್ಲಿ ತನ್ನ ಮೂವರು ಅನುಯಾಯಿಗಳು ಹಾಗು ತನ್ನ ಓರ್ವ ಪ್ರೇಯಸಿಯ ಮಗಳೊಂದಿಗೆ ಕುಳಿತನು.

ಮತ್ತೂ ಮುಂದೆ ಮುಸೋಲಿನಿ ತನ್ನ ಜೊತೆ ಬರುತ್ತಿದ್ದ ಜರ್ಮನ್ನರ ಲಾರಿಯೊಂದನ್ನೇರಿ ಜರ್ಮನ್ನರ ನಿಲುವಂಗಿಯನ್ನು ತೊಟ್ಟು ವೇಷಾಂತರಿಸಿಕೊಂಡನು.

ಆದರೆ ಡೊಂಗೊದ ಬಳಿ ೫೨ನೇ ಕೂಟಯೋಧ * ಬ್ರಿಗೇಡಿನವರು ಈ ಪರಿವಾರವನ್ನು ತಡೆದರು. ಮೂರನೆಯ ಲಾರಿಯಲ್ಲಿ ಡ್ರಾಯವರನ ಬಳಿ ಅರ್ಧ ನಿದ್ದೆಯಲ್ಲಿದ್ದ ಓರ್ವ ಸೈನಿಕನು ಅವರ ದೃಷ್ಟಿಗೆ ಬಿದ್ದನು. ಆತನ ಮೊಣಕಾಲ ನಡುವೆ ಒಂದು ಬ್ರೆನ್‌ಗನ್ ಇದ್ದಿತು. ಮಿಲಿಟರಿ ಓವರಕೋಟೊಂದನ್ನು ಆತ ಧರಿಸಿದ್ದನು.

ಜರ್ಮನ್ನರು ಆತನೋರ್ವ ಕುಡಿದು ಅಮಲೇರಿದ ಜರ್ಮನ್ ಸೈನಿಕನೆಂದರೂ ಓರ್ವ ಕೂಟಯೋಧನು ಲಾರಿಯನ್ನೇರಿ, ಮಲಗಿದ್ದವನ ಶಿರಸ್ತ್ರಾಣವನ್ನೂ ಕನ್ನಡಕವನ್ನೂ ಕಿತ್ತುಕೊಂಡು ನಿರುಕಿಸಿ ನೋಡಿ, "ಅವನೇ, ಅವನೇ!" ಎಂದು ಕೂಗಿದನು.

ನಡುಗುತ್ತ ಕೈಗಳನ್ನು ಮೇಲಕ್ಕೆತ್ತಿದನು ಮುಸೋಲಿನಿ. ಅವನ ಕಡೆಗೆ ಪಿಸ್ತೂಲು ಹಿಡಿದು ನಿಂತಿದ್ದ ಕೂಟಯೋಧನು ಅವನನ್ನು ಲಾರಿಯಿಂದ ಕೆಳಗೆ ಜಗ್ಗಿದನು. ಮುಸೋಲಿನಿ ಪ್ರತಿಭಟಿಸಲಿಲ್ಲ.

ಮುಂಜಾನೆ ಏಳು ಗಂಟೆಯ ಸುಮಾರಿಗೆ ಮುಸೋಲಿನಿಯನ್ನು ಗಡಿರಕ್ಷಕರ ಬರಾಕಿದ್ದ ಜರ್ಮಾಸಿನಕ್ಕೆ ಕರೆದೊಯ್ದರು. ಕಾವಲುಗಾರರು ಚಳಿನಿವಾರಿಸಲು ಉರಿಯನ್ನು ಹಚ್ಚಿದರಲ್ಲದೆ ಮುಸೋಲಿನಿಯ ವಿನಂತಿಯ ಮೇರೆಗೆ ಅವನಿಗೆ ಊಟವನ್ನು ಕೊಟ್ಟರು.

೧೧ ಗಂಟೆಯ ಸುಮಾರಿಗೆ ತಾನು ವಿಶ್ರಾಂತಿ ಪಡೆಯಲೇ ? ಎಂದು ಮುಸೋಲಿನಿ ಕೇಳಲು ಅವರು ಅವನನ್ನು ಅಟ್ಟಕ್ಕೆ ಕರೆದೊಯ್ದರು. ಸೆರೆಯಾಳುಗಳಿಗೆಂದು ಮೀಸಲಿಟ್ಟಿದ್ದ ಕೋಣೆಯೊಂದರಲ್ಲಿ ಅವನನ್ನು ಬಿಟ್ಟು ಬಾಗಿಲು ಮುಚ್ಚಿ ಬೀಗ ಹಾಕಿಕೊಂಡರು. ಕೋಣೆಯಲ್ಲೊಂದು ಮಂಚವಿದ್ದಿತು.

ಅಷ್ಟರಲ್ಲಾಗಲೇ ಮುಸೋಲಿನಿ ಕ್ಲೆರೆಟಾಳಿಗೆ ತನ್ನ ಸಂದೇಶವನ್ನೊಯ್ದು ಮುಟ್ಟಿಸಲು ಪೆಡ್ರೊ ಎಂಬ ಕೂಟಯೋಧನಿಗೆ ವಿನಂತಿ ಮಾಡಿಕೊಂಡಿದ್ದನು. ನಗರಭವನದ ಕೋಣೆಯೊಂದರಲ್ಲಿಡಲ್ಪಟ್ಟಿದ್ದ ಕ್ಲೆರೆಟಾಳಿಗೆ ಪೆಡ್ರೊ ಸಂದೇಶ ಮುಟ್ಟಿಸಿದನು.

## ಕೊನೆಯ ಸಮಾಗಮ

ಅದುವರೆಗೂ ತಾನೋರ್ವ ವಿದೇಶಿ ರಾಯಭಾರಿಯ ತಂಗಿಯೆಂದು ಹೇಳಿಕೊಳ್ಳುತ್ತ "ಕ್ಲೆರೆಟಾ ಕೈಗೆ ಸಿಕ್ಕರೆ ಏನು ಮಾಡುತ್ತಾರೆ?" ಎಂದು ಕೇಳುತ್ತಲಿದ್ದ ಕ್ಲೆರೆಟಾ ಮುಸೋಲಿನಿಯ ಸಂದೇಶ ಮುಟ್ಟಿದೊಡನೆಯೇ ನಟನೆಯನ್ನು ನಿಲ್ಲಿಸಿದಳು. ಪೆಡ್ರೊನ ಕಾಲಿಗೆ ಬಿದ್ದು ಮುಸೋಲಿನಿಯಿದ್ದಲ್ಲಿಗೆ ತನ್ನನ್ನು ಕರೆದೊಯ್ಯಬೇಕೆಂದು ಅಂಗಲಾಚಿಕೊಂಡಳು.

ಪೆಡ್ರೊ ಅವಳನ್ನು ತನ್ನ ಕಾರಿನಲ್ಲಿ ಕೂಡ್ರಿಸಿಕೊಂಡು ಹೊರಟನು. ಅವನ ಮುಖ್ಯಸ್ಥ ಇನ್ನೊಂದು ಕಾರಿನಲ್ಲಿ [illegible] ಕೂಡ್ರಿಸಿಕೊಂಡು ಪಾನಮಾರಿಯ್ಯಾ ಡಿ ಬ್ರುನೇಟಕ್ಕೆ ಹೊರಟಿದ್ದನು.

* ಕೂಟಯೋಧರೆಂದರೆ ಮುಸೋಲಿನಿಯ ಫ್ಯಾಸಿಸ್ಟ್ ಸರಕಾರಕ್ಕೆ ವಿರುದ್ಧವಾಗಿ ಇಟಲಿಯಲ್ಲಿ ಗುಪ್ತವಾಗಿ ಸಂಘಟಿಸಲ್ಪಟ್ಟ ಸೈನ್ಯ. ಇದರಲ್ಲಿ ಮುಸೋಲಿನಿಯ ರಾಜಕೀಯ ಶತ್ರುಗಳು ಇದ್ದರು. ಫ್ಯಾಸಿಸ್ಟ್ ದಬ್ಬಾಳಿಕೆ ಕೊನೆಗೊಳಿಸಲು ಮಿತ್ರರಾಷ್ಟ್ರಗಳ ನೆರವಿನಿಂದ ಇವರು ಒಳಗಿಂದ ಸರಕಾರವನ್ನುರುಳಿಸಲು ಹವಣಿಸಿದ್ದರು.

ಅಲ್ಬಾನೊ ನದಿಯ ಸೇತುವೆಯ ಮೇಲೆ ಈ ಎರಡೂ ಕಾರುಗಳು ಸಂಧಿಸಿದವು. ಮಧ್ಯರಾತ್ರಿಯಾಗಿತ್ತು. ಮಳೆ ಧಾರಾಕಾರವಾಗಿ ಸುರಿಯುತ್ತಿತ್ತು.

"ನಮಸ್ಕಾರ ದೊರೆಗಳೇ."

"ನೀನೂ ಇಲ್ಲಿರುವಿಯಾ?"

"ಇಲ್ಲಿರುವದೇ ನನಗೆ ಹೆಚ್ಚು ಪ್ರಿಯವಾದುದು."

ಮುಸೋಲಿನಿ ಮತ್ತು ಕ್ಲೆರೆಟಾರಲ್ಲಿ ಇಷ್ಟು ಸಂಭಾಷಣೆ ನಡೆದೊಡನೆ ಎರಡೂ ಕಾರುಗಳು ಹೊರಟವು

ಅಝೂನೊದಲ್ಲಿ ಕಾರುಗಳು ನಿಂತವು. ಎಲ್ಲರೂ ಕಾರಿನಿಂದಿಳಿದರು. ಕ್ಲೆರೆಟಾ ಮುಸೋಲಿನಿಯ ಭುಜಕ್ಕೆ ಅಂಟಿಕೊಂಡಳು. ಕೆಲ ನಿಮಿಷಗಳಲ್ಲಿ ಅವರು ಆ ಹಳ್ಳಿಯ ಕೊನೆಯಂಚಿನಲ್ಲಿದ್ದ ಮನೆಯೊಂದನ್ನು ತಲುಪಿದರು.

ಮನೆಮಾಲಿಕ ಗಿಯಾಕೊಮೊ ಡಿ ಮಾರಿಯಾ ಬಾಗಿಲು ತೆರೆದನು. ಅವನ ಹೆಂಡತಿ ಲಿಯಾ ಕೈದೀಪವೊಂದನ್ನು ಹಿಡಿದುಕೊಂಡು ಅವನ ಹಿಂದೆ ನಿಂತು ಇಣಿಕಿ ನೋಡಿದಳು. ಸಶಸ್ತ್ರ ಸೈನಿಕರನ್ನು ಕಂಡು ಅವರು ಸರಿದು ನಿಂತರು. ಹೊರಗಿದ್ದವರು ಒಳಗೆ ಅಡಿಗ ಮನೆಗೆ ಹೋದರು.

ಮುಸೋಲಿನಿ ಒಂದು ಬೆಂಚಿನ ಮೇಲೆ ಕುಕ್ಕರಿಸಿದನು. ಕ್ಲೆರೆಟಾ ಅವನ ಬಳಿ ಕುಳಿತು ಅವನ ಕೈ ಹಿಡಿದುಕೊಂಡಳು. ಸೈನಿಕರ ಪ್ರಮುಖ "ಇವರಿಬ್ಬರೂ ಕೈದಿಗಳು. ಚನ್ನಾಗಿ ನೋಡಿಕೊಳ್ಳಿ. ಅವರು ಮಲಗಲಿ," ಎಂದ.

ತುಸು ಹೊತ್ತಿನಲ್ಲಿ ಸ್ಯಾಂಡ್ರಿನೊ ಮತ್ತು ಲಿನೊ ಎಂಬಿಬ್ಬರು ತರುಣರನ್ನು ಬಿಟ್ಟು ಉಳಿದವರೆಲ್ಲ ಹೊರಟುಹೋದರು. ಮುಸೋಲಿನಿ ಮತ್ತು ಕ್ಲೆರೆಟಾಳ ಮೇಲೆ ಅವರನ್ನು ಕಾವಲಿಡಲಾಗಿತ್ತು.

ಗಿಯಾಕೊಮೊ, ಏನು ಕೊಡಲಿ? ಎಂದು ಕ್ಲೆರೆಟಾಳನ್ನು ಕೇಳಿದ. ಅವಳು ಮುಸೋಲಿನಿಯ ಕಡೆ ನೋಡಲು ಆತ ಏನೂ ಬೇಡವೆಂದ. ತನಗೆ ಕಾಫಿ ಕೊಡಿ ಎಂದು ಕ್ಲೆರೆಟಾ ಕೇಳಿದಳು.

"ನಿಜವಾದ ಕಾಫಿ ಇಲ್ಲ. ಮತ್ತೇನನ್ನಾದರೂ ಕೊಡಲೆ?" ಎಂದು ಕೇಳಿದ್ದಕ್ಕೆ ಅವಳು ಹೂಂ ಎನ್ನಲು ಗಿಯಾಕೊಮೊ ಅವಳಿಗೆ ಏನೋ ಬಿಸಿ ಪೇಯವನ್ನು ಕೊಟ್ಟ.

## ಕಣ್ಣೀರಿನ ಕೊನೆಯಿರುಳು

ಲಿಯಾ ಅಟ್ಟಕ್ಕೆ ಹೋಗಿ ಅಲ್ಲಿದ್ದ ಪಲಂಗದ ಮೇಲೆ ಮಲಗಿದ್ದ ತನ್ನ ಇಬ್ಬರು ಹುಡುಗರನ್ನು ಎಬ್ಬಿಸಿದಳು. ಕೋಣೆಯನ್ನು ಉಡುಗಿ ಹಾಸಿಗೆಯ ಮೇಲೆ ಬೇರೆ ಚದ್ದರ ಹಾಸಿದಳು.

ಕೆಳಗೆ ಬಂದು ಲಿಯಾ ಹಾಸಿಗೆ ಸಿದ್ಧವಿದೆ ಎಂದಳು. ಮೇಲೆ ಹೋಗೋಣವೇ ಎಂದು ಕ್ಲೆರೆಟಾ ಕೇಳಲು ಮುಸೋಲಿನಿ ಮಾತಾಡದೆ ಎದ್ದು ನಿಂತ.

ಕ್ಲೆರೆಟಾ ಮುಖ ತೊಳೆದು ಬರುವಷ್ಟೊತ್ತಿಗೆ ಮುಸೋಲಿನಿ ಮಲಗಿದ್ದ. ಅವಳು ಬೇಗನೆ ಉಡುಪು ಕಳಚಿ ತಾನೂ ಮಲಗಿದಳು. ಬಾಗಿಲು ಅರ್ಧ ತೆರೆದಿತ್ತು. ಹೊರಗೆ ಕಾವಲಿದ್ದ ತರುಣರು ಇಣಿಕಿ ನೋಡಬಹುದು ಎಂಬ ಕಲ್ಪನೆಯಿಂದ ಅವಳು ಅಸ್ವಸ್ಥಳಾದಳು. ಅವಳು ಪಿಸುಮಾತಿನಲ್ಲಿ ಮುಸೋಲಿನಿಗೆ ಏನನ್ನೋ ಹೇಳಲು ಅದಕ್ಕೆ ಆತ ಉತ್ತರವನ್ನು ಕೊಟ್ಟ. ಹೊರಗಿದ್ದವರಿಗೆ ಈ ಪಿಸುಮಾತು ಕೇಳಿಸಲು, ಇವರು ಓಡಿಹೋಗುವ ಸಂಚು ಮಾಡುತ್ತಿದ್ದಾರೆಂದು ಭಾವಿಸಿ ಅವರು ಸರಕ್ಕನೆ ಬಾಗಿಲು ತೆರೆದರು. ನಿರಾಶೆ ಮತ್ತು ದಣಿವಿನಿಂದ ಕಂಗಾಲಾಗಿದ್ದ ಮುಸೋಲಿನಿ ಎದ್ದು ಕುಳಿತ. ಕ್ಲೆರೆಟಾ ಹೊದ್ದಿಕೆಯಲ್ಲಿ ಹುದುಗಿಕೊಂಡಳು.

"ಹೋಗಿ ಹುಡುಗರೇ. ಹೀಗೆ ಅಸಭ್ಯರಾಗಿ ವರ್ತಿಸಬೇಡಿ. ನಮ್ಮನ್ನು ಪೀಡಿಸಬೇಡಿ," ಎಂದು ಮುಸೋಲಿನಿ ಹೇಳಿದ.

ಆ ತರುಣರಿಗೆ ನಾಚಿಕೆಯಾಗಿ ಅವರು ಬಾಗಿಲನ್ನು ಮುಚ್ಚಿಕೊಂಡು ಹೊರಬಿದ್ದರು. ಆದರೂ ಅವರು ಆಗಾಗ ಕಿವಿಗೊಟ್ಟು ಆಲಿಸುತ್ತಿದ್ದರು. ತುಸು ಹೊತ್ತಿನಲ್ಲಿ ಅವರಿಗೆ ಮುಸೋಲಿನಿಯ ಉಸಿರಾಟದ ಸಪ್ಪಳ ಕೇಳಿಸಿತು. ಆತ ನಿದ್ದೆ ಹೋಗಿದ್ದನು. ದೀಪ ಆರಿಸಲ್ಪಟ್ಟಿದ್ದಿತು.

ಮುಂಜಾನೆ ಈ ಅತಿಥಿಗಳು ತೆರಳಿದ ಬಳಿಕ ಮರುದಿನ ಲಿಯಾ ಹಾಸಿಗೆ ಸರಿ ಮಾಡುತ್ತಿದ್ದಾಗ ಆವಳಿಗೆ ತಲೆದಿಂಬಿನ ಮೇಲೆ ಕಣ್ಣೀರಿನ ಕಲೆ ಕಂಡುಬಂದಿತು. ಕಣ್ಣಿಗೆ ಹಚ್ಚಿದ ಕಾಡಿಗೆ ಬೆರೆತು ಕಪ್ಪಾದ್ದರಿಂದ ಕ್ಲೆರೆಟಾಳೇ ಅತ್ತಿರಬೇಕು ಎಂದವಳು ಊಹಿಸಿದಳು.

ಮುಂಜಾನೆ ೧೧ ಗಂಟೆಯ ಹೊತ್ತಿಗೆ ಎಚ್ಚರಾದಾಗ ಮುಸೋಲಿನಿ ಕಿಟಕಿ ತೆಗೆದು ಕ್ಲೆರೆಟಾಳಿಗೆ ದೂರದಲ್ಲಿ ಕಾಣಿಸುತ್ತಿದ್ದ ಪರ್ವತಗಳ ಹೆಸರುಗಳನ್ನು ಹೇಳಿದ: ತನ್ನ ಜ್ಞಾನಪ್ರದರ್ಶನದ ಈ ಅವಕಾಶವು ಅವನಿಗೆ ಈ ದಾರುಣ ಪ್ರಸಂಗದಲ್ಲಿಯೂ ಸುಖವೀಯುತ್ತಿತ್ತೇನೋ.

ಲಿಯಾ ಮೇಲೆ ಬಂದು ಕೋಣೆಯ ಬಾಗಿಲು ತಟ್ಟಿದಳು. ಕಾವಲುಗಾರ ಅದನ್ನು ತೆರೆದ. ಒಳಗಡೆ ನಿಂತಿದ್ದ ಕ್ಲೆರೆಟಾ ಲಿಯಾಳನ್ನು ಮುಗುಳ್ನಗೆಯಿಂದ ಸ್ವಾಗತಿಸಿದಳು. ಕಿಟಕಿಯ ಪಕ್ಕದಲ್ಲಿ ಮುಸೋಲಿನಿ ಹಾಸಿಗೆಯ ಮೇಲೆ ಕುಳಿತಿದ್ದನು. ಅವನ ಗಡ್ಡ ಬೆಳೆದಿತ್ತು. ಕಣ್ಣು ಕೆಂಪಗಾಗಿದ್ದವು. ಮುಖ ಬಾಡಿತ್ತು.

ಏನಾದರೂ ತಿನ್ನಲು ತರಲೇ, ಎಂದು ಲಿಯಾ ಕೇಳಲು ಮುಸೋಲಿನಿ "ಏನಾದರೂ ಸಾದಾ ಆಹಾರ" ಎಂದ.

ಹೊರಗೆ ಕಾವಲುಗಾರರು ನಿದ್ದೆಯೊಡನೆ ಹೋರಾಟ ನಡೆಸಿದ್ದರು. ಆಗಾಗ ಅವರು ಬಾಗಿಲು ತೆರೆದು ಒಳಗೆ ಇಣಿಕಿ ಕ್ಲೆರೆಟಾಳೊಡನೆ ಒಂದೆರಡು ಮಾತಾಡುತ್ತಿದ್ದರು.

## "ವಿಮೋಚನೆ"

ದಣಿದಿದ್ದರೂ ಕ್ಲೆರೆಟಾಳಿಗೆ ನಿದ್ದೆ ಬರಲಿಲ್ಲ. ಹಾಸಿಗೆಯ ಮೇಲೆ ಮಲಗಿ ಅವಳು ಚದ್ದರ ಹೊತ್ತುಕೊಂಡು ಕಣ್ಣು ಮುಚ್ಚಿದಳು. ಮುಸೋಲಿನಿ ಕುಳಿತು ಕಿಟಕಿಯಾಚೆ ಕಾಣುತ್ತಿದ್ದ ಸರೋವರವನ್ನು ನೋಡುತ್ತಿದ್ದನು. ೧,೨,೩,೪ ಗಂಟೆ ಹೊಡೆಯಿತು.

ಒಮ್ಮಿಂದೊಮ್ಮೆ ಬಾಗಿಲು ತೆರೆಯಿತು. ಎತ್ತರ ಆಳಾಗಿದ್ದ ನಾಗರಿಕನೊಬ್ಬ ಬಾಗಿಲಲ್ಲಿ ಕಾಣಿಸಿಕೊಂಡ. ಆದರೂ ಅವನ ಹತ್ತರ ಶಸ್ತ್ರಗಳಿದ್ದವು. ಅವನ ಹಿಂದೆ ಖಾಕಿ ಸಮವಸ್ತ್ರ ಧರಿಸಿದ ಇನ್ನಿಬ್ಬರು ಇದ್ದರು. ನಾಗರಿಕನಂತಿದ್ದವನು ಕೂಟಸೈನ್ಯದ ಕರ್ನಲ್ ವೆಲೆರಿಯೊ ಆಗಿದ್ದ. ಆತ ಸಿಟ್ಟಿಗೆದ್ದಂತಿತ್ತು. "ಏಳಿರಿ. ಅವಸರ ಮಾಡಿರಿ. ನಿಮ್ಮನ್ನು **ವಿಮೋಚನೆ** ಮಾಡಲು ಬಂದಿದ್ದೇನೆ," ಎಂದಾತ ಮುಸೋಲಿನಿಗೆ ಬಿರುಸಾಗಿ ಹೇಳಿದ.

ಅವನ ಧ್ವನಿ ಮತ್ತು ನೋಟ, ಅವನು ಕ್ಲೆರೆಟಾಳೊಂದಿಗೆ ಮಾತಾಡಿದ ರೀತಿ ಇವುಗಳಿಂದ ಅವನ ಮಾತಿಗೆ ವಿಶೇಷ ಅರ್ಥವಿದೆಯೆಂದು ಮುಸೋಲಿನಿಗೆ ಅನಿಸಿತು. "ನಿಮ್ಮ ಉಪಕಾರ ಬಹಳವಾಯಿತು" ಎಂದಾತ ವ್ಯಂಗ್ಯವಾಗಿ ಉತ್ತರಿಸಿದ.

ಅವರೆಡೆ ನೋಡಲೆಂದು ತಲೆಯೆತ್ತಿದ್ದ ಕ್ಲೆರೆಟಾ ಮತ್ತೆ ಮಲಗಿ ಗೋಡೆಯ ಕಡೆಗೆ ಮುಖ ಹೊರಳಿಸಿದಳು. ಆಗ ವೆಲೇರಿಯಾ ಬಿರುಸಾಗಿ ಅವಳಿಗೆ, "ಏಳಿರಿ, ತ್ವರೆಮಾಡಿರಿ," ಎಂದ.

ಅವರೆಲ್ಲ ಅಲ್ಲಿಂದ ಹೊರಟರು.

ಮುಸೋಲಿನಿಯ ಪಕ್ಕದಲ್ಲಿ ನಡೆಯುತ್ತಿದ್ದ ಕ್ಲೆರೆಟಾಳ ಕಣ್ಣುಗಳಲ್ಲಿ ನೀರು ಹರಿಯುತ್ತಿತ್ತು. ಅದನ್ನೊರೆಸಲು ಅವಳು ಯತ್ನಿಸಲಿಲ್ಲ. ಭಾರವಾದ ಹೆಜ್ಜೆ ಹಾಕುತ್ತಲಿದ್ದ ಮುಸೋಲಿನಿಯ ಭುಜಕ್ಕೆ ಅವಳು ಅಂಟಿಕೊಂಡಿದ್ದಳು.

ಮುಸೋಲಿನಿಯ ಈ ಪರಿವಾರ ಊರ ಮುಖ್ಯ ರಸ್ತೆಗೆ ಬಂತು. ಅಲ್ಲಿಂದ ಅವರು ಸುರಂಗ ಮಾರ್ಗವೆನ್ನಬಹುದಾದಂಥ ಒಂದು ಕಮಾನಿನ ಕೆಳಗೆ ಹಾಯ್ದುಹೋದರು. ಅಲ್ಲಿ ಒಂದು ಕಪ್ಪು ಕಾರು ಇವರಿಗಾಗಿ ಕಾದಿತ್ತು. ಕ್ಲೆರೆಟಾ ಒಮ್ಮಿಂದೊಮ್ಮೆ ಮುಸೋಲಿನಿಯ ಕೊರಳಿಗೆ ತೆಕ್ಕೆಬಿದ್ದಳು. ಅವರಿಬ್ಬರನ್ನೂ ಕಾರಿನ ಹಿಂದುಗಡೆಯ ಸೀಟಿನಲ್ಲಿ ದಬ್ಬಲಾಯಿತು.

ಒರ್ವ ಸಶಸ್ತ್ರ ಸೈನಿಕ ಡ್ರಾಯವರನ ಪಕ್ಕದಲ್ಲಿ ಕುಳಿತನು. ವೆಲೆರಿಯೊ ಮತ್ತು ಇನ್ನೊಬ್ಬ ಕಾರಿನ ಕಾಲುಮಣೆಯ ಮೇಲೆ ನಿಂತುಕೊಂಡರು. ಕಾರು ಯಾವ ಮನೆಯೂ ಕಾಣದಷ್ಟು ದೂರ ರಸ್ತೆಯಲ್ಲಿ ನಿದಾನವಾಗಿ ಹೋಯಿತು.

ಇಲ್ಲಿ ಒಂದು ಗೋಡೆಗೆ ಆನಿಸಿ ನಿಲ್ಲಿಸಿ ಮುಸೋಲಿನಿ ಮತ್ತು ಕ್ಲೆರೆಟಾಳಿಗೆ ಗುಂಡಿಕ್ಕಲಾಯಿತು ಎನ್ನುತ್ತಾರೆ.

ಕಾರಿನಿಂದಿಳಿಯುವಾಗ, ಕ್ಲೆರೆಟಾ ಪಿಸುಮಾತಿನಲ್ಲಿ ಮುಸೋಲಿನಿಗೆ, "ಕೊನೆಯ ವರೆಗೂ ನಾನು ನಿನ್ನನ್ನು ಹಿಂಬಾಲಿಸಿ ಬಂದುದಕ್ಕೆ ನಿನಗೆ ಆನಂದವಾಯಿತೆ?" ಎಂದು ಕೇಳಿದಳಂತೆ.

## ಶವದ ಮೇಲೆ ಸೇಡು

ಅವರ ಶವಗಳು ಅಲ್ಲಿ ರಸ್ತೆಯಲ್ಲಿ ಮಳೆಯಲ್ಲಿ ತೋಯುತ್ತ ಎರಡು ತಾಸುಗಳ ವರೆಗೆ ಬಿದ್ದಿದ್ದವು. ಆಮೇಲೆ ಕೆಲ ಫ್ಯಾಸಿಸ್ಟರ ಶವಗಳನ್ನು ಡೊಂಗೋದಿಂದ ಹೊತ್ತು ತರುತ್ತಿದ್ದ ಲಾರಿಯ ಮೇಲೆ ಅವನ್ನು ಹೇರಲಾಯಿತು.

ಮರುದಿನ ಈ ಹದಿನೇಳು ಶವಗಳನ್ನು ಮಿಲಾನಿನಲ್ಲಿ ಗ್ಯಾರೇಜೊಂದರಲ್ಲಿ ಇಳಿಸಲಾಯಿತು. ಆ ಸ್ಥಳದಲ್ಲಿಯೇ ನಾಝಿ ಮತ್ತು ಫ್ಯಾಸಿಸ್ಟ ದಬ್ಬಾಳಿಕೆ ಕಾಲದಲ್ಲಿ ಹದಿನೈದು ದೇಶಭಕ್ತರನ್ನು ಗುಂಡಿಕ್ಕಲಾಗಿತ್ತು. ಅಲ್ಲೇ ಅಂದು ಸಂಜೆ ಹೊತ್ತಿನಲ್ಲಿ ಸಾರ್ವಜನಿಕರ ಅವಗಾಹನೆಗೆ ಮುಸೋಲಿನಿ ಮತ್ತು ಕ್ಲೆರೆಟಾಳ ಹೆಣಗಳನ್ನು ಮನೆಯ ಮಾಡಿಗೆ ತೂಗ ಹಾಕಲಾಯಿತು. ಮುಸೋಲಿನಿಯಿಂದ ಪೀಡಿತರಾಗಿದ್ದ ಜನರು ಆ ಶವಗಳ ಮೇಲೆ ಹೊಲಸು ಒಗೆದು ತಮ್ಮ ದ್ವೇಷವನ್ನು ತೀರಿಸಿಕೊಂಡರು.

ಕ್ಲೆರೆಟಾಳ ಮುಖದಲ್ಲಿ ಮಾತ್ರ ಸಾವಿನಲ್ಲೂ ಶಾಂತ ಸೌಂದರ್ಯ ವಿರಾಜಿಸುತ್ತಿತ್ತು. ಅವಳ ಕಣ್ಣುಗಳು ಮುಚ್ಚಿದ್ದವು. ಅವಳ ತುಟಿಗಳಲ್ಲಿ ನಿವೃತ್ತ ಮಂದಹಾಸದ ಛಾಯೆಯೊಂದು ಹಬ್ಬಿತ್ತು



## ಮುಸೋಲಿನಿ ಉವಾಚ

### ಜೀವದ ಬೆಲೆ

೧೯೩೧ರಲ್ಲಿ ಮುಸೋಲಿನಿ ಮೋಟಾರು ಓಡಿಸುತ್ತಿದ್ದಾಗ ಅದರ ಕೆಳಗೆ ಒಂದು ಮಗು ಸಿಕ್ಕು ಸತ್ತಿತು. ಆಗ ಮುಸೋಲಿನಿ ಹೇಳಿದ್ದು :

"ಹೇಳಿ ಕೇಳಿ ಇದು ಒಂದು ಜೀವ. ಒಂದು ರಾಜ್ಯದ ವ್ಯವಹಾರದಲ್ಲಿ ಒಂದು ಜೀವಕ್ಕೇನು ಬೆಲೆ ?"

### ಯುದ್ಧ

"ಮನುಷ್ಯರ ಸಕಲ ಸತ್ವಗಳನ್ನೂ ಪರಮಾವಧಿಗೆ ಉದ್ದೀಪನಗೊಳಿಸುವುದೆಂದರೆ ಯುದ್ಧವೊಂದೇ. ಯಾವ ಜನಾಂಗಗಳ ಎದೆಯಲ್ಲಿ ಅದನ್ನೆದುರಿಸುವ ಧೈರ್ಯವಿದೆಯೋ ಅವುಗಳಿಗೆ ಯುದ್ಧವು ಮಹೋನ್ನತಿಯ ಮುದ್ರೆ ಒತ್ತುತ್ತದೆ."

### ಧರ್ಮ

"ನಮಗೆ ಯೋಜನೆ ಕಾರ್ಯಕ್ರಮಗಳಲ್ಲಿ ವಿಶ್ವಾಸವಿಲ್ಲ, ಸಾಧುಸಂತರಲ್ಲಿ ನಂಬಿಕೆಯಿಲ್ಲ, ಎಲ್ಲಕ್ಕೂ ಹೆಚ್ಚಾಗಿ ಸುಖವೆಂಬುದರಲ್ಲೇ ವಿಶ್ವಾಸವಿಲ್ಲ. ನಾವು ಮೋಕ್ಷವನ್ನಾಗಲಿ ಸ್ವರ್ಗವನ್ನಾಗಲಿ ಒಪ್ಪುವುದಿಲ್ಲ."

**ಕರ್ನಾಟಕದಲ್ಲಿ ಎಲ್ಲೆಡೆಗಳಲ್ಲಿ ಸದ್ಯವೇ ಬರಲಿವೆ:**



ಮುಕುಲ ಪಿಕ್ಚರ್ಸದವರ ಚಿತ್ರ

ಭೂಮಿಕಾ :-- ಶಕೀಲಾ, ಪೂರ್ಣಿಮಾ,
ದಲಜೀತ, ಮಾರುತಿ.



ಪುಷ್ಪಾಪಿಕ್ಚರ್ಸದವರ ಚಿತ್ರ

# ಅಯೋಧ್ಯಾಪತಿ

ನಿರ್ಮಾಪಕರು: ವಿ. ಸಿ. ನಡಿಯಾದವಾಲಾ

**PRESIDENT FILMS ( Hubli ) RELEASE.**

---

ನಟರಾಜ ಪ್ರೊಡಕ್ಶನ್

# ಆಂಖ ಕಾ ನಶಾ (ಹಿಂದಿ)

ನಟವರ್ಗ : ಅನಿತಾಶಾಹಾ :: ರಾಜನ್ :: ಅಮರ :: ಚಮನ್‌ಪುರಿ :: ಇತ್ಯಾದಿ

**GYAN PICTURES ( Hubli ) RELEASE**

Edited, printed and published by H. R. Moharay at
the Samyukta Karnatak Press, Koppikar Road, Hubli

KASTURI A KANNADA DIGEST

Published by The Lokashikshana Trust, Hubli



November,



As. 1

# ಈ ಸಂಚಿಕೆಯಲ್ಲಿ

ಓದಲೇಬೇಕಾದ ಲೇಖಗಳಲ್ಲಿ ಕೆಲವು . . .





ಲೋಕಶಿಕ್ಷಣ